# ಹೊಸತು




## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ನಾಮದೇವ ಕಾಗದಗಾರ, ಕಮಲಂ ಅರಸು, ಸುನೀಲ ಪಾಟೀಲ, ಗೋಪಿ ಹಿರೇಬೆಟ್ಟು

**ಮುಖಪುಟ :** ತೆಲಂಗಾಣ ಹೋರಾಟಗಾರ್ತಿ ಕೋಟೇಶ್ವರಮ್ಮ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಫಾಸಿಸಂ ಮೂಲ ಜನಾಂಗ ಶ್ರೇಷ್ಠತೆ. ಹಿಂದುತ್ವವಾದಿಗಳು ಮಾಡುತ್ತಿರುವುದು ಅದನ್ನೇ. ಅಖಂಡ ಭಾರತ–ಹಿಂದೂ ರಾಷ್ಟ್ರದ ಸ್ಥಾಪನೆ ಸಂಘಪರಿವಾರದ ಗುರಿ. ಕಳೆದ ನಾಲ್ಕು ವರ್ಷಗಳ ಕಾಲದಲ್ಲಿ ನರೇಂದ್ರ ಮೋದಿ ನೇತೃತ್ವದ ಭಾಜಪ ಸರಕಾರದ ಆಡಳಿತದಲ್ಲಿ ನಡೆದಿರುವ ವಿದ್ಯಮಾನಗಳನ್ನು ನೋಡಿದರೆ ಅದು ವೇದ್ಯವಾಗುತ್ತಿದೆ. ಗೋರಕ್ಷಣೆಯ ಹೆಸರಿನಲ್ಲಿ ನಡೆಯುತ್ತಿರುವ ಹಿಂಸಾಚಾರಗಳು, ಅಲ್ಪಸಂಖ್ಯಾತರ ಮೇಲೆ ನಿರಂತರ ದಾಳಿ, ಸಾಮೂಹಿಕ ದಾಂಧಲೆ ನಡೆಸಿ ಜಜ್ಜಿ ಹತ್ಯೆ ಗೈಯುವ ಪ್ರವೃತ್ತಿ ಮೊದಲಾದ ಕಾನೂನುಬಾಹಿರ ಚರ್ಯೆಗಳು ನಡೆಯುತ್ತಲೇ ಇವೆ. ಸಂಘಪರಿವಾರದ 'ಅಂಚು' ಎಂದು ಕರೆಯುವ ಸಂಘಟನೆಗಳು ಇಂಥ ಚಟುವಟಿಕೆಗಳಲ್ಲಿ ಹೆಚ್ಚಾಗಿ ತೊಡಗಿಕೊಳ್ಳುತ್ತಿವೆ.

ಫಾಸಿಸಂನ ಇನ್ನೊಂದು ಲಕ್ಷಣ ಭಿನ್ನಮತದ ದಮನ. ಮೋದಿ–ಷಾ ಜೋಡಿಯ ಸರಕಾರ ಇದನ್ನು ಯಶಸ್ವಿಯಾಗಿ ಮಾಡುತ್ತಿದೆ. ಮಹಾರಾಷ್ಟ್ರದ ಸರಕಾರ ಈಚೆಗೆ ಪುಣೆಯಲ್ಲಿ ಕಳೆದ ವರ್ಷ (೨೦೧೭) ಡಿಸೆಂಬರ್‌ನಲ್ಲಿ ಜರುಗಿದ ಎಲ್ಗಾರ್ ಪರಿಷದ್ ಸಮಾವೇಶವನ್ನು ಕೆದಕಿ, ಅದನ್ನು ತನಿಖೆ ಮಾಡುವ ಹೆಸರಿನಲ್ಲಿ ನಡೆಸಿದ ದಾಳಿ, ಬಂಧನಗಳು ಅಂಥದ್ದೆ. ಇದಕ್ಕೆ ಭಾಜಪ ಅಧ್ಯಕ್ಷ ಅಮಿತ್‌ಷಾ ಮಹಾರಾಷ್ಟ್ರದ ಮುಖ್ಯಮಂತ್ರಿ ಫಡ್ನವೀಸ್ ಅವರ ಬೆನ್ನು ತಟ್ಟಿ ಶ್ಲಾಘಿಸಿದ್ದಾರೆ. ಬಂಧನಕ್ಕೊಳಗಾದವರನ್ನು 'ನಗರ ನಕ್ಸಲೈಟ್‌ಗಳು' ಎಂದು ಹಣೆಪಟ್ಟಿ ಹಚ್ಚಲಾಗಿದೆ. ಬಂಧನಕ್ಕೊಳಗಾದವರೆಲ್ಲ ನಾಗರಿಕ ಹಕ್ಕುಗಳ ಸಂರಕ್ಷಣೆಗಾಗಿ ಹೋರಾಟ ನಡೆಸುತ್ತಿರುವವರು ಫರಿದಾಬಾದ್‌ನ ಸುಧಾ ಭಾರದ್ವಾಜ್, ಹೈದರಾಬಾದ್‌ನ ವರವರರಾವ್, ನವದೆಹಲಿಯ ಗೌತಮ ನವಲ್ಕ, ಮುಂಬಯಿಯ ವೆರ್ನಾನ್ ಮತ್ತು ಅರುಣ್ ಫೆರ್ರೀರ. ಇವರೆಲ್ಲ ಮಾವೋವಾದಿ ಕಮ್ಯುನಿಸ್ಟ್ ಪಕ್ಷದೊಂದಿಗೆ ಸಂಬಂಧ ಹೊಂದಿದ್ದಾರೆ ಎನ್ನುವುದೇ ಆಪಾದನೆ. ಇದರ ಮೇಲೆ ಇವರು ಪ್ರಧಾನಿ ಮೋದಿಯವರ ಹತ್ಯೆಗೆ ಸಂಚು ರೂಪಿಸಿದ್ದರು ಎಂಬ ಆರೋಪ ಬೇರೆ. ಮುಂಬರುವ ಲೋಕಸಭೆಯ ಚುನಾವಣೆಗಳ ಹಿನ್ನೆಲೆಯಲ್ಲಿ ಇದನ್ನು ನೋಡಬೇಕಾಗಿದೆ. ಭಿನ್ನಮತವನ್ನು ಹತ್ತಿಕ್ಕುವ ಹುನ್ನಾರ ಇದು.

ಸರ್ವೋಚ್ಚ ನ್ಯಾಯಾಲಯ ಮಹಾರಾಷ್ಟ್ರ ಪೊಲೀಸರನ್ನು ಈ ವಿಷಯದಲ್ಲಿ ತರಾಟೆಗೆ ತೆಗೆದುಕೊಂಡಿದೆ. ಬಂಧಿತರನ್ನು ಕಾರಾಗೃಹದಿಂದ ಬಿಡುಗಡೆ ಮಾಡಿ ಆರೋಪಿಗಳನ್ನು ಗೃಹಬಂಧನದಲ್ಲಿರಿಸುವಂತೆ ಆಜ್ಞೆ ನೀಡಿದೆ. ಮುಖ್ಯ ನ್ಯಾಯಮೂರ್ತಿ ದೀಪಕ್ ಮಿಶ್ರ ನಿರಾಧಾರವಾದ ಆರೋಪಗಳ ಬಗ್ಗೆ ಮಹಾರಾಷ್ಟ್ರ ಪೊಲೀಸರಿಗೆ ಎಚ್ಚರಿಕೆ ನೀಡಿದ್ದಾರೆ. 'ಭಿನ್ನಮತ ಪ್ರಜಾಪ್ರಭುತ್ವದ ಸೇಫ್ಟಿವಾಲ್ವ್ ಭಿನ್ನಮತಕ್ಕೆ ಎಡೆಮಾಡಿಕೊಡದಿದ್ದರೆ ಪ್ರೆಶರ್‌ಕುಕ್ಕರ್ ಸಿಡಿದೀತು' ಎಂಬುದಾಗಿ ಹೇಳಿದ ಮಾತು ಸೂಕ್ತವಾದ್ದಾಗಿದೆ. ಸಾಮಾಜಿಕ ಕಾರ್ಯಕರ್ತರು, ಇತಿಹಾಸಕಾರರು ಸುಪ್ರೀಂ ಕೋರ್ಟಿಗೆ ಅರ್ಜಿ ಸಲ್ಲಿಸಿದ್ದರು. ಪ್ರಜಾಪ್ರಭುತ್ವದ ರಕ್ಷಣೆಗಾಗಿ ದೇಶದ ನಾನಾಕಡೆಗಳಲ್ಲಿ ಮಹಾರಾಷ್ಟ್ರ ಸರಕಾರದ ಕ್ರಮ ವಿರೋಧಿಸಿ ಪ್ರತಿಭಟನೆಗಳು ನಡೆದಿವೆ. ಮುಂಬರುವ ದಿನಗಳಲ್ಲಿ ಸಂಘಪರಿವಾರದವರಿಂದ ಇಂಥ ದಾಳಿಗಳು ಹೆಚ್ಚಾಗುವ ಸಂಭವ ಇರುವುದರಲ್ಲಿ ಸಂಶಯವಿಲ್ಲ. ಇದು ಒಂದು ಬಗೆಯ ಅಘೋಷಿತ ತುರ್ತು ಪರಿಸ್ಥಿತಿ ಎನ್ನುವುದು ಉತ್ಪ್ರೇಕ್ಷೆ ಏನಲ್ಲ.

* * *

ಒಂದು ರಾಷ್ಟ್ರ, ಅದು ಹಿಂದೂ ರಾಷ್ಟ್ರ. ಏಕರೂಪದ ಕಾನೂನು, ಏಕಕಾಲದಲ್ಲಿ ಪಾರ್ಲಿಮೆಂಟ್ ಮತ್ತು ರಾಜ್ಯದ ಶಾಸನಸಭೆಗಳಿಗೆ ಚುನಾವಣೆ, ಏಕರೂಪದ ತೆರಿಗೆ – ಜಿಎಸ್‌ಟಿ – ಹೀಗೆ ಎಲ್ಲವನ್ನೂ ಏಕರೂಪಗೊಳಿಸಿ ಸರ್ವಾಧಿಕಾರದತ್ತ ಸರಿಯುವುದು ಸಂಘಪರಿವಾರದ ನೀತಿ. ಅದನ್ನು ಮೋದಿ ಸರಕಾರ ಕ್ರಮಬದ್ಧವಾಗಿ ಪಾಲಿಸುತ್ತ ಬಂದಿದೆ. ಸರಕಾರದ ಏಕರೂಪತೆಗೆ ಅದೇ ನೇಮಕ ಮಾಡಿರುವ ಕಾನೂನು ಆಯೋಗ ಅಡ್ಡಿಯಾಗಿದೆ. ಸುಪ್ರೀಂಕೋರ್ಟ್ ನಿವೃತ್ತ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೩ ಅಕ್ಟೋಬರ್ ೨೦೧೮

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೨೨೧೬೧೯೧೧, ೨೨೧೬೧೯೧೨


**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಸಿಂಹದ ಮೇಲೆ ಕುಳಿತ ಭಾಗವತರ ಸಹಿಷ್ಣುತೆಯ ಮಾತು

'ಕಾಲ ಬದಲಾಗುತ್ತಿದೆ. ಬದಲಾವಣೆಯನ್ನು ಗ್ರಹಿಸುವುದನ್ನು ಸಮಾಜ ಕಲಿಯಬೇಕು.' ಅಂತರ್‌ಜಾತೀಯ ವಿವಾಹಗಳನ್ನು ಆರ್.ಎಸ್.ಎಸ್. ಎಂದಿಗೂ ವಿರೋಧಿಸಿಲ್ಲ, ಮುಂದೆಯೂ ವಿರೋಧಿಸುವುದಿಲ್ಲ', 'ಗೋರಕ್ಷಣೆ ಹೆಸರಿನಲ್ಲಿ ಹಿಂಸಾಚಾರ ನಡೆಯಬಾರದು', 'ಲೈಂಗಿಕ ಅಲ್ಪಸಂಖ್ಯಾತರು ಈ ಸಮಾಜದ ಭಾಗ', 'ಕಾಂಗ್ರೆಸ್ ಒಳ್ಳೆಯ ಪಕ್ಷ', 'ಮುಸ್ಲಿಮ್‌ರೂ ಭಾರತೀಯರು'.... ಇವು ಆರ್.ಎಸ್.ಎಸ್.ನ 'ಭವಿಷ್ಯದ ಭಾರತ' ಸಮ್ಮೇಳನದ ಸಮಾರೋಪ ಸಮಾರಂಭದಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸರ ಸಂಘಚಾಲಕ ಮೋಹನ ಭಾಗವತ್ ಅವರು ಆಡಿದ ಮಾತುಗಳು. ಖಂಡಿತ ಅವರ ಈ ಮಾತುಗಳು ಸ್ವಾಗತಾರ್ಹ. ಆರ್.ಎಸ್.ಎಸ್.ನವರು ತಮ್ಮ ಈ ಅಧ್ಯಯನ ಶಿಬಿರಕ್ಕೆ ಕಾಂಗ್ರೆಸ್ಸಿನ ಮಾಜಿ ಕೇಂದ್ರ ಮಂತ್ರಿಗಳೂ ಹಾಗೂ ಮಾಜಿ ರಾಷ್ಟ್ರಪತಿಗಳೂ ಆಗಿದ್ದ ಪ್ರಣವ್ ಮುಖರ್ಜಿಯವರನ್ನು ಈ ಮೊದಲು ಕರೆದಿದ್ದರು. ಪ್ರಣವ್ ಮುಖರ್ಜಿಯವರು ತಾವು ನಂಬಿದ ತತ್ವಗಳನ್ನೇ ಅಲ್ಲಿ ಹೇಳಿಬಂದರು. ಅಹಿಂಸೆ, ಸಹಬಾಳ್ವೆ, ಸೌಹಾರ್ದತೆ, ಸಂವಿಧಾನ ಏನೆಲ್ಲ ಹೇಳಿಬಂದರು. ಅವರು ಅಷ್ಟೆಲ್ಲ ಹೇಳಿಬಂದ ಮೇಲೂ ಸಂಘಪರಿವಾರದ ಹೊಡಿಬಡಿ ಸಂಸ್ಕೃತಿಯೇನೂ ನಿಲ್ಲಲಿಲ್ಲ. ಈ ಬಾರಿ ಆರ್.ಎಸ್.ಎಸ್.ನವರು ರಾಹುಲ್ ಗಾಂಧಿ ಹಾಗೂ ಸೀತಾರಾಮ್ ಯೆಚೂರಿಯವರನ್ನೂ ಆರ್.ಎಸ್.ಎಸ್.ನ ತರಬೇತಿ ಶಿಬಿರಕ್ಕೆ ಕರೆದಿದ್ದರು. ಆದರೆ ಆ ಇಬ್ಬರು ನಾಯಕರು ಹೋಗಲಿಲ್ಲ. ಅದಕ್ಕಾಗಿ ಮಾನ್ಯ ಮೋಹನ್ ಭಾಗವತ್ ಅವರೇ ರಾಹುಲ್ ಗಾಂಧಿ ಹಾಗೂ ಸೀತಾರಾಮ್ ಯೆಚೂರಿಯವರ ಅಭಿಪ್ರಾಯ ಗಳನ್ನು ತಮ್ಮ ಮಾತುಗಳಲ್ಲಿಯೇ ಹೇಳಿದ್ದಾರೇನೋ. ಅದೇನೇ ಇರಲಿ ಮೋಹನ್ ಭಾಗವತ್ ಅವರ ಬಾಯಿಯಿಂದ ಇಂಥ ಮಾತುಗಳು ಬರುವುದು ಸ್ವಾಗತಾರ್ಹವೇ. ಯಾಕೆಂದರೆ ಅವು ಶಾಶ್ವತ ಮೌಲಿಕವಾದ ಮಾತುಗಳು. ಬಹುತೇಕ ಜನ ಅವರ ಈ ಮಾತುಗಳನ್ನು ಸ್ವಾಗತಿಸಿದ್ದಾರೆ. ಆದರೆ ಅವರು ನುಡಿದಂತೆ ನಡೆಯುತ್ತಾರೆಯೇ? ಎಂಬ ಅನುಮಾನ ವ್ಯಕ್ತಪಡಿಸಿದ್ದಾರೆ. ಹಲವಾರು ಪ್ರಮುಖ ಪತ್ರಿಕೆಗಳೂ ತಮ್ಮ ಸಂಪಾದಕೀಯ, ವಿಶೇಷ ಅಂಕಣಗಳಲ್ಲಿ ಈ ಕುರಿತು ಸಂಶಯ ವ್ಯಕ್ತಪಡಿಸಿವೆ. ಇಂಥ ಸಂಶಯಕ್ಕೆ ಆರ್.ಎಸ್.ಎಸ್.ನ ಇತಿಹಾಸದ ನಡೆಗಳೇ ಕಾರಣ.

ಕೆಲವೇ ದಿನಗಳ ಹಿಂದೆ ಇದೇ ಮಾನ್ಯ ಭಾಗವತ ಅವರು ಅಮೆರಿಕಾದ ಷಿಕಾಗೋ ನಗರದಲ್ಲಿ ಭಾಷಣ ಮಾಡಿದ್ದರು. ವಿವೇಕಾನಂದರೂ ಅಲ್ಲಿ ಭಾಷಣ ಮಾಡಿದ್ದರು. ಅವರು ವಿಶ್ವಮಾನವತೆ, ಸಹೋದರತ್ವದ ಸಂದೇಶ ನೀಡಿಬಂದಿದ್ದರು. ನಮ್ಮ ಭಾಗವತರ ವಿವೇಕಕ್ಕೇನಾಗಿತ್ತೋ ಷಿಕಾಗೋದಲ್ಲಿ "ಹಿಂದುಗಳಲ್ಲಿ ಒಗ್ಗಟ್ಟಿಲ್ಲ, ಅಡವಿ ರಾಜ ಸಿಂಹ ಕೂಡ ಒಂಟಿಯಾಗಿ ಸಿಕ್ಕರೆ ಕಾಡುನಾಯಿಗಳು ದಾಳಿ ನಡೆಸಿ ಕೊಂದು ಹಾಕಬಲ್ಲವು" ಎಂದು ಹೇಳಿದರು. ಅವರು ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಪ್ರಮುಖರಾಗಿ ಹಿಂದೂಗಳ ಒಗ್ಗಟ್ಟಿನ ಬಗ್ಗೆ ಮಾತನಾಡುವುದು ಸಹಜ. ಸರಿಯೋ, ತಪ್ಪೋ ಎಂಬ ಪ್ರಶ್ನೆ ಬೇರೆ. ಅವರ ಹೊಸ ವ್ಯಾಖ್ಯಾನದ ಪ್ರಕಾರ ಭಾರತದಲ್ಲಿ ವಾಸಿಸುವವರೆಲ್ಲರೂ ಹಿಂದೂಗಳೇ, ಮುಸ್ಲಿಂ, ಕ್ರಿಶ್ಚಿಯನ್‌ರನ್ನೂ ಸೇರಿಸಿ. ಹಾಗೆಂದು ಅವರು ಹೇಳಲೂಬಹುದು. ಆದರೆ 'ಅಡವಿ ರಾಜ' ಪ್ರಧಾನಿ ಮೋದಿ, 'ಕಾಡು ನಾಯಿಗಳು' ವಿರೋಧ ಪಕ್ಷದ ನಾಯಕರು ಎಂಬುದನ್ನು ಭಾಗವತರು ಸೂಚ್ಯವಾಗಿ ಹೇಳಿದ್ದನ್ನು ಅರ್ಥ ಮಾಡಿಕೊಳ್ಳಲಾಗದಷ್ಟು ದಡ್ಡರು ಭಾರತದಲ್ಲಿಲ್ಲ. ಷಿಕಾಗೋದಲ್ಲಿಯಂತೂ ಇಲ್ಲವೇ ಇಲ್ಲ.

ಅಡವಿ ರಾಜ ಪ್ರಧಾನಿ ಮೋದಿಯವರು ಸಿಂಹ ಹೌದೋ ಅಲ್ಲವೋ, ಕಾಡುನಾಯಿಗಳೆಂಬ ಭಾಗವತರ ವ್ಯಾಖ್ಯಾನವನ್ನು ವಿರೋಧ ಪಕ್ಷಗಳ ನಾಯಕರು ಒಪ್ಪುತ್ತಾರೋ, ವಿರೋಧಿಸುತ್ತಾರೋ ಅವರವರಿಗೆ ಬಿಟ್ಟ ಸಂಗತಿ. ಆದರೆ ಭಾಗವತರು ಹೇಳಿದ 'ಅಡವಿ ರಾಜ'ನ ವ್ಯಾಖ್ಯಾನವಂತೂ ಸತ್ಯ. ಖಂಡಿತ ಪ್ರಧಾನಿ ಮೋದಿಯವರು 'ಅಡವಿ ರಾಜ'ರೇ, ಅಂದರೆ 'ಜಂಗಲ್ ರಾಜ.' ಭಾರತದಲ್ಲಿ ಒಂದು 'ಜಂಗಲ್ ರಾಜ್ಯ' (ಪ್ರಭುತ್ವ)ವಿದೆ. ಅದಕ್ಕೊಬ್ಬ 'ಅಡವಿ ರಾಜ'ನಿದ್ದಾನೆಂಬ ಸತ್ಯವನ್ನು ವಿವೇಕಾನಂದರು ಪ್ರಸಿದ್ಧ ಭಾಷಣ ಮಾಡಿದ ಊರಿನಲ್ಲಿ ಹೇಳಿದ ಮಾನ್ಯ ಮೋಹನ ಭಾಗವತ ಅವರ ಪ್ರಾಮಾಣಿಕತೆಗಾಗಿ ಅವರನ್ನು ಅಭಿನಂದಿಸಬೇಕು. ಭಾರತದಲ್ಲಿ ನಿರಂತರ ಸಂಘರ್ಷಗಳೂ ರೈತರ ಆತ್ಮಹತ್ಯೆ, ದಲಿತರ ಮೇಲೆ, ಅಲ್ಪಸಂಖ್ಯಾತರ ಮೇಲೆ, ವಿಚಾರವಾದಿಗಳ ಮೇಲೆ, ದಾಳಿಗಳು, ಹೆಣ್ಣು ಮಕ್ಕಳ ಮೇಲೆ, ಮಹಿಳೆಯರ ಮೇಲೆ ಅತ್ಯಾಚಾರಗಳು, ಕೊಲೆಗಳು ಪ್ರತಿನಿತ್ಯ ನಡೆಯುತ್ತಿದ್ದರೂ ನಮ್ಮ ಪ್ರಧಾನಿ ಮೋದಿಯವರು ಯಾವುದಕ್ಕೂ ಪ್ರತಿಕ್ರಿಯಿಸುವುದಿಲ್ಲ. ಮನಮೋಹನ್ ಸಿಂಗ್‌ರಿಗಿಂತಲೂ ಹೆಚ್ಚಿನ ಮೌನವನ್ನೂ, ಬಾಬಾ ರಾಮ್ದೇವ್ ಅವರಿಗಿಂತಲೂ ಪ್ರಖರ ಧ್ಯಾನವನ್ನೂ ಆಚರಿಸುತ್ತಾರೆ. 'ಜಂಗಲ್ ರಾಜ್ಯ' 'ಅಡವಿ ರಾಜ' ಎನ್ನುವುದಕ್ಕೆ ಷಿಕಾಗೋದಲ್ಲಿ ಮಾನ್ಯ ಭಾಗವತರ ವ್ಯಾಖ್ಯಾನ ಸೂಕ್ತವಾಗಿದೆ.

ವಿಮರ್ಶೆ, ಟೀಕೆ ವ್ಯಂಗ್ಯಗಳ ಹೊರತಾಗಿಯೂ ಮಾನ್ಯ ಮೋಹನ್ ಭಾಗವತರು ಆರ್.ಎಸ್.ಎಸ್.ನ ಶಿಬಿರದ ಸಮಾರೋಪ ಭಾಷಣದಲ್ಲಿ ಹೇಳಿದ ಒಳ್ಳೆಯ, ವಾಸ್ತವವಾದ ಮಾತುಗಳನ್ನು ಸ್ವಾಗತಿಸುತ್ತಲೇ ಅನುಮಾನಗಳು ಉಂಟಾಗಲು ಕಾರಣಗಳಿವೆ. ಆರ್.ಎಸ್.ಎಸ್.ನ ಪ್ರಮುಖರು, ಹೆಡ್ಗೆವಾರ್ ಅವರಷ್ಟೇ ಪ್ರಭಾವಶಾಲಿಗಳೂ,

ಹಿರಿಯ ನಾಯಕರೂ ಆಗಿದ್ದ ಶ್ರೀ ಗೋಲ್ವಾಲ್ಕರ್ ಅವರು ಗಾಂಧಿ ಹತ್ಯೆ ಮಾಡಿದ ನಾಥೂರಾಮ್ ಗೋಡ್ಸೆ ಮತ್ತವರ ಸಂಗಡಿಗರು ಆರ್.ಎಸ್.ಎಸ್.ನವರಲ್ಲ ಎಂದು ಹೇಳಿದ್ದರು. ಇಂದು ಸಂಘ ಪರಿವಾರದವರು ಗಾಂಧಿಯನ್ನೇ ಖಳನಾಯಕನನ್ನಾಗಿ ಮಾಡಿ ಗೋಡ್ಸೆ ಮಂದಿರ ಕಟ್ಟಲು ಹೊರಟಿದ್ದಾರೆ. ಅಂದು ಗೋಲ್ವಾಲ್ಕರ್ ಅವರು ಈ ದೇಶದ ಮುಸ್ಲಿಂರೂ, ಕ್ರಿಶ್ಚಿಯನ್ನ್‌ರೂ ಎರಡನೇ ದರ್ಜೆ ಪ್ರಜೆಗಳಾಗಿರಬೇಕು ಎಂದರು. ಅವರನ್ನು ಭಾರತೀಯರಲ್ಲ ಎಂದು ಅವರು ಹೇಳಿಲ್ಲ. ಅವರಿಗೆ ಮತದಾನದ ಹಕ್ಕಿರಕೂಡದು.... ಇತ್ಯಾದಿಯಾಗಿ ಹೇಳಿದ್ದರು. ಈಗ ಆರ್.ಎಸ್.ಎಸ್. ಗೋಲ್ವಾಲ್ಕರ್ ಅವರ ನಿಲುವನ್ನು ಬದಲಿಸಿದೆಯೇ? ಗಾಂಧಿಯವರನ್ನು ಕೊಂದಾದ ಮೇಲೆ ನಿಷೇಧಕ್ಕೊಳಗಾದ ಆರ್.ಎಸ್.ಎಸ್. ನಾಯಕರು ಅಂದಿನ ಗೃಹಮಂತ್ರಿ ಸರ್ದಾರ್ ವಲ್ಲಭ್‌ಭಾಯಿ ಪಟೇಲರಿಗೆ 'ತಮ್ಮದು ಕೇವಲ ಸಾಂಸ್ಕೃತಿಕ ಸಂಘಟನೆ, ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದಿಲ್ಲ' ಎಂದು ಮುಚ್ಚಳಿಕೆ ಬರೆದುಕೊಟ್ಟರು. ಈ ಮಾತನ್ನು ಇಂದೂ ಇಂದಿನ ಸರಸಂಘಚಾಲಕರಾದ ಮಾನ್ಯ ಮೋಹನ ಭಾಗವತ ಅವರೂ ಹೇಳಿದ್ದಾರೆ: 'ನಾವು ಯಾವುದೇ ರಾಜಕೀಯ ಪಕ್ಷಕ್ಕೆ ಬೆಂಬಲಿಸುವುದಿಲ್ಲ.' ಎಂದು. ಈ ಮಾತುಗಳು ಇಂದಿನ ದಿನನಿತ್ಯದ ದೇಶದ ರಾಜಕೀಯ ವಾತಾವರಣವನ್ನು ನೋಡಿದವರಿಗೆ ಅನುಮಾನ ಹುಟ್ಟಿಸುತ್ತಿವೆ. ಬಿ.ಜೆ.ಪಿ.ಯ ನಿಯಂತ್ರಣ ಆರ್.ಎಸ್.ಎಸ್.ನ ಕೈಯಲ್ಲಿದೆ ಎಂಬುದು ಪುಟಾಣಿ ರಾಜಕಾರಣಿಗೂ ಗೊತ್ತು. ಬಿಜೆಪಿ, ಸಂಘಪರಿವಾದ ಪ್ರಮುಖ ಸಾಮೂಹಿಕ ಸಂಘಟನೆ ಎನ್ನುವುದು ಸ್ವಲ್ಪ ರಾಜಕೀಯ ತಿಳುವಳಿಕೆ ಇರುವವರಿಗೂ ಗೊತ್ತು. ಹಿಟ್ಲರ್ ತಮ್ಮ ಆದರ್ಶ ಎಂದು ಹಿಂದಿನ ಹಲವಾರು ಸರ ಸಂಘಚಾಲಕರು ಹೇಳಿದ್ದಾರೆ. ಹಿಟ್ಲರ್ 'ಜನಾಂಗೀಯ ರಕ್ತ'ದ ಕುರಿತು ಮಾತನಾಡಿದ, 'ಶ್ರೇಷ್ಠ ಆರ್ಯನ್' ವರ್ಣಸಂಕರವಾಗದಂತೆ ನೋಡಿಕೊಳ್ಳಬೇಕು ಎಂದು ಹೇಳಿದ. ಈಗ ದಿನನಿತ್ಯ ಮರ್ಯಾದೆಗೇಡು ಹತ್ಯೆಗಳು ನಡೆಯುತ್ತಿವೆ. ಅದಕ್ಕೆ ಕಾರಣ ಅಂತರ್‌ಜಾತಿ ಮದುವೆ (ವರ್ಣಸಂಕರ). ಇಂಥ ಸಂದರ್ಭದಲ್ಲಿ ಅಂತರ್‌ಜಾತಿ ಮದುವೆಗಳನ್ನು ಸ್ವಾಗತಿಸುತ್ತೇವೆ ಎಂಬ ಭಾಗವತ್ ಅವರ ಹೇಳಿಕೆಯನ್ನು ಖಂಡಿತ ಯಾವ ಸಂಕೋಚವೂ ಇಲ್ಲದೆ ಸ್ವಾಗತಿಸಬೇಕು. ಆದರೆ ವಾಸ್ತವದಲ್ಲಿ ಹಾಗಾಗಿದೆಯೇ? ಅಲ್ಪಸಂಖ್ಯಾತರ, ದಲಿತರ ಅಡಿಗೆ ಮನೆಯ ಪಾತ್ರೆಗಳನ್ನು ಮೂಸಿಸುತ್ತ ತಿರುಗುವ ಸಂಘಪರಿವಾರದ ಮಾಣಿಗಳು ಯಾವತ್ತಾದರೂ ಮಾರ್ಯಾದೆಗೇಡು ಹತ್ಯೆ ವಿರುದ್ಧ ಹೋರಾಡಿವೆಯೇ? ಅಥವಾ ಬಸವಣ್ಣನವರು ಮಾಡಿದಂತೆ, ಡಾ॥ ಅಂಬೇಡ್ಕರ್ ಅವರು ಹೇಳಿದಂತೆ ವಿಜಾತಿ, ಅಂತರ್‌ಜಾತಿ ಮದುವೆಗಳನ್ನು ಮಾಡಿಸಿದ್ದಾರೆಯೇ? ಎಂಬ ಪ್ರಶ್ನೆಗಳು ಸಹಜವಾಗಿ ಮೂಡುತ್ತವೆ. ವಾಸ್ತವದಲ್ಲಿ ಅದಕ್ಕೆ ತದ್ವಿರುದ್ಧವಾಗಿ ಆರ್.ಎಸ್.ಎಸ್.ನವರೂ ಭಜರಂಗದಳದವರೂ ನಡೆದುಕೊಳ್ಳುತ್ತಾರೆ. ಫೆಬ್ರವರಿ ೧೪ ಬಂದರೆ ಎಲ್ಲ ಆರ್.ಎಸ್.ಎಸ್.ನ ಮಾಣಿಗಳು ನಗರಗಳ ಗಾರ್ಡನ್‌ಗಳಲ್ಲಿಯೂ, ಹಳ್ಳಿಗಳ ಬಸ್ ಸ್ಟ್ಯಾಂಡ್‌ಗಳಲ್ಲಿಯೂ ಶಾಲೆ–ಕಾಲೇಜುಗಳ ಮೈದಾನದಲ್ಲಿಯೂ ಕೋಲು ಹಿಡಿದು ತಿರುಗುತ್ತಿರುತ್ತಾರೆ. ಗಂಡು–ಹೆಣ್ಣು, ಹುಡುಗ–ಹುಡುಗಿ ಜೊತೆಯಾಗಿರುವುದು ಕಂಡರೆ ವೀರಾವೇಶದಿಂದ ಥಳಿಸುತ್ತಾರೆ. ಕಾರಣ ಅದು ಪ್ರೇಮಿಗಳ ದಿನ. ಪ್ರೇಮಿಗಳು ಸಾಮಾನ್ಯವಾಗಿ ಅಂತರ್ಜಾತೀಯ, ಧರ್ಮೀಯರಾಗಿರುತ್ತಾರೆ. ಅದು ಹಿಂದೂ ಧರ್ಮಕ್ಕೆ ವಿರುದ್ಧ ಎಂಬುದು ಅವರ ವಾದ. ಹಿಂದೂ ಧರ್ಮವನ್ನು ಪ್ರೇಮಿಗಳಿಂದ ರಕ್ಷಿಸೋಕೆ ಇವರು ಸ್ವತಃ ಕೋಲು ಹಿಡಿದು ತಿರುಗುತ್ತಾರೆ. ಪ್ರಮೋದ್ ಮುತಾಲಿಕ ಎಂಬ ಮಾಜಿ (ತೋರಿಕೆಗೆ) ಸಂಘ ಪರಿವಾರದ ಪುರೋಹಿತ, ಒಂದು ಪುಂಡರ ತಂಡ ಕಟ್ಟಿಕೊಂಡು ಕೈಯ್ಯಲ್ಲಿ ತಾಳಿಗಳನ್ನು ಹಿಡಿದು ಬೀದಿ ಬೀದಿ ಸುತ್ತುತ್ತಾನೆ. ಯಾರಾದರೂ ಪ್ರೇಮಿಗಳು ಕಂಡರೆ ಸ್ಥಳದಲ್ಲಿಯೇ ಇನ್‌ಸ್ಟಂಟ್ ಮದುವೆ ಮಾಡುವ ಕಾರ್ಯಕ್ರಮ ಇವರದು. ಈ ಎಲ್ಲ ಮಾನಸಿಕ ರೋಗಗಳಿಗೆ ಆರ್.ಎಸ್.ಎಸ್. ಏನೇನೂ ಕಾರಣ ಅಲ್ಲ ಎನ್ನಲಾದೀತೇ?

ಮಾನ್ಯ ಮೋಹನ ಭಾಗವತರ ಸಹಿಷ್ಣುತೆಯ ಹೇಳಿಕೆ, ಸಹಬಾಳ್ವೆಯ ಹೇಳಿಕೆ ಭಾರತದ ಇಂದಿನ ಸಾಮಾಜಿಕ, ರಾಜಕೀಯ, ಬದುಕಿಗೆ ಅವಶ್ಯವಾದ, ಸಾಂದರ್ಭಿಕ ಹೇಳಿಕೆ. ಆದರೆ ಮುಂದಿನ ವರ್ಷ ಬರುತ್ತಿರುವ, ಈಗಾಗಲೇ ಜ್ವರ ಏರುತ್ತಿರುವ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ಈ ಹೇಳಿಕೆ ಬಂದಿರುವುದು ಇನ್ನೂ ಅನುಮಾನವನ್ನುಂಟು ಮಾಡುತ್ತದೆ. ಭಾರತದ ಆರ್.ಎಸ್.ಎಸ್.ನಂಥ ಒಂದು ಸಂಘಟನೆಯ ಪ್ರಮುಖರಾದ ಮಾನ್ಯ ಮೋಹನ ಭಾಗವತರ ಬಾಯಲ್ಲಿ ಬರುವ ಮಾತುಗಳು (ಅದು ಯಾವುದೇ ಕಾರಣಕ್ಕೆ ಬಂದಿರಲಿ). ದೇಶದ ಮತದಾರರ ಪೈಕಿ ಶೇ. ೩೧ ಜನ ಮತ ಹಾಕಿ ಕಳಿಸಿದ, ೧೩೦ ಕೋಟಿ ಜನಸಂಖ್ಯೆ ಇರುವ, ಜಗತ್ತಿನ ದೊಡ್ಡ ಪ್ರಜಾಪ್ರಭುತ್ವ ವ್ಯವಸ್ಥೆಯ ಪ್ರಧಾನಿ ಮಾನ್ಯ ನರೇಂದ್ರ ಮೋದಿಯವರಿಂದ ಒಂದು ದಿನವೂ ಬರಲಿಲ್ಲವಲ್ಲ ಎಂದು ಖೇದವಾಗುತ್ತದೆ. ಒಬ್ಬ ಪ್ರಧಾನಿಯ ದೈಹಿಕ ಭಾಷೆ ತಂದೆಯ ವರ್ತನೆಗಳಿಂದ ಕೂಡಿರಬೇಕು. ಪೈಲ್ವಾನನ ವರ್ತನೆಯಲ್ಲಿರಬಾರದು.

ಒಟ್ಟಿನಲ್ಲಿ ಆರ್.ಎಸ್.ಎಸ್.ನ ಶಿಬಿರದ ಸಮಾರೋಪ ಸಮಾರಂಭದಲ್ಲಿ ಆಡಿದ ಮಾತುಗಳನ್ನು ಮಾನ್ಯ ಮೋಹನ ಭಾಗವತ ಅವರು 'ಮಾನ್ಯ ಮೋದಿಯವರ ಮುಂದೆಯೂ, ಅವರ ಸಚಿವ ಸಂಪುಟದ ಮುಂದೆಯೂ, ಎನ್.ಡಿ.ಎ. ಕೂಟದ ಎಲ್ಲ ಸಂಸತ್ ಸದಸ್ಯರು, ದೇಶದಲ್ಲಿರುವ ಬಿ.ಜೆ.ಪಿ.ಯ ಎಲ್ಲ ಜನಪ್ರತಿನಿಧಿಗಳಿಗೂ ಅಧಿಕಾರಯುತವಾಗಿ ಹೇಳಿದರೆ ಖಂಡಿತ ವಾತಾವರಣ ತಿಳಿಯಾಗುತ್ತದೆ. ಮಾನ್ಯ ಮೋಹನ ಭಾಗವತ ಅವರು ತಮ್ಮ ಸರಸಂಘ ಚಾಲಕತ್ವದ ಅವಧಿಯಲ್ಲಿ ತಾವಾಡಿದ ಮಾತುಗಳನ್ನು ಜಾರಿಗೆ ತಂದರೆ ಈ ದೇಶಕ್ಕೆ ದೊಡ್ಡ ಉಪಕಾರವಾಗುತ್ತದೆ. ಹಾಗಾಗಲಿ ಎಂದು ಆಶಿಸೋಣ. ಹಾಗಾಗದಿದ್ದರೆ ಸಿಂಹ ಶಾಖಾಹಾರದ ಪ್ರತಿಜ್ಞೆ ಮಾಡಿದಂತಾಗುತ್ತದೆ.

ಸಿದ್ದನಗೌಡ ಪಾಟೀಲ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





■ *ಚಂದಾ ವಿವರಗಳು*

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

■ *ನವಕರ್ನಾಟಕ ಶಾಖೆಗಳು*

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

***(ಈ ತಿಂಗಳು ೩ನೇ ಪುಟದಿಂದ)***

ನ್ಯಾಯಮೂರ್ತಿ ಬಿ. ಎಸ್. ಚೌಹಾಣ್ ನೇತೃತ್ವದ ಕಾನೂನು ಆಯೋಗ ಈಗ ಏಕರೂಪದ ನಾಗರಿಕ ಸಂಹಿತೆ ಅಗತ್ಯವಿಲ್ಲ ಎಂದು ತನ್ನ ವರದಿಯಲ್ಲಿ ತಿಳಿಸಿದೆ. ೨೦೧೬ರ ಜೂನ್ ತಿಂಗಳಲ್ಲಿ ಕೇಂದ್ರ ಸರಕಾರ ಏಕರೂಪದ ನಾಗರಿಕ ಸಂಹಿತೆಗೆ ಸಂಬಂಧಿಸಿದ ವಿಚಾರವನ್ನು ಆಳವಾದ ಪರಿಶೀಲನೆಗೆ ಒಳಪಡಿಸಬೇಕು ಎಂಬುದಾಗಿ ಕಾನೂನು ಆಯೋಗಕ್ಕೆ ಆದೇಶ ನೀಡಿತ್ತು. ಮೂರು ವರ್ಷಗಳ ಅಧಿಕಾರವನ್ನು ಪೂರೈಸಿದ ನಂತರ ಆಯೋಗ ಸಲ್ಲಿಸಿರುವ ವರದಿಯಲ್ಲಿ ಸರಕಾರದ ಮುಖಕ್ಕೆ ಮಸಿ ಬಳಿದಿದೆ. ಭಾಜಪ ನೇತೃತ್ವದ ಸರಕಾರ ಅಧಿಕಾರಕ್ಕೆ ಬಂದಾಗಿನಿಂದ ಸಂಘಪರಿವಾರ ಏಕರೂಪದ ಸಂಹಿತೆಗಾಗಿ ಒತ್ತಡ ತರುತ್ತಿದೆ. ಬಹು ಸಂಸ್ಕೃತಿಯ, ಬಹುಧರ್ಮೀಯ ಭಾರತದಂಥ ದೇಶದಲ್ಲಿ ಅದು ಅಸಾಧ್ಯವಾದ ಕ್ರಮ. ಅಲ್ಪಸಂಖ್ಯಾತರನ್ನು ಗುರಿಯಾಗಿಸಿಕೊಂಡು ಸಂಘಪರಿವಾರ ಈ ಕಾರ್ಯವನ್ನು ಮಾಡಲು ಹೊರಟಿದೆ. ಇದು ಜಾತ್ಯತೀತ ವ್ಯವಸ್ಥೆಗೆ, ಸಂವಿಧಾನಕ್ಕೆ ಅಪಚಾರ ಎಸಗುವ ಕ್ರಮ. ಸರಕಾರ ಒಂದೊಂದಾಗಿ ಅಲ್ಪಸಂಖ್ಯಾತರನ್ನು ಮಣಿಸುವುದಕ್ಕೆ ಕ್ರಮಗಳನ್ನು ಕೈಗೊಳ್ಳುತ್ತಿದೆ. ಭಾರತದ ಬಹುತ್ವ ಸಮಾಜದಲ್ಲಿ ಬೇರೆ ಬೇರೆ ಧರ್ಮಗಳವರು ವೈಯಕ್ತಿಕ ಕಾನೂನುಗಳನ್ನು ಅನುಭವಿಸುತ್ತಿವೆ. ಅವು ಯಾವ ಬಗೆಯಲ್ಲೂ ದೇಶದ ಐಕ್ಯತೆಗೆ ಭಂಗ ತಂದಿಲ್ಲ. ಭಾರತದಂಥ ರಾಷ್ಟ್ರದಲ್ಲಿ ಎಲ್ಲವೂ ಒಂದೇ ರೀತಿಯಲ್ಲಿರಬೇಕು ಎಂಬುದು ಅನಪೇಕ್ಷಣೀಯ. ಸರ್ವಥಾ ಸಮ್ಮತವಲ್ಲ. ಸೆಕ್ಯೂಲರ್ ತತ್ವದ ಮೂಲ ಉದ್ದೇಶ ವಿಭಿನ್ನ ಜನರ ವಿಭಿನ್ನ ಭಾಷೆ, ವಿಭಿನ್ನ ನಂಬಿಕೆಗಳನ್ನು ಗುರುತಿಸುವುದು ಹಾಗೂ ರಕ್ಷಿಸುವುದು, ಒಂದುಗೂಡಿದ ಭಾರತ ಕಟ್ಟಲು ಅವರನ್ನೆಲ್ಲ ಒಂದಾಗಿಸುವುದು ಅತಿ ಮುಖ್ಯ. ಅದಿಲ್ಲದೆ ಸಂಘ ಪರಿವಾರದ ಹಿಂದುತ್ವದ ಪರಿಕಲ್ಪನೆ ಅಪಾಯಕಾರಿ.

* * *

ರಾಜ್ಯದಲ್ಲಿ ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ ಬಂದಾಗಿನಿಂದ ಅಸ್ಥಿರತೆ ಭೀತಿಯನ್ನು ಎದುರಿಸುತ್ತ ಬಂದಿದೆ. ಭಾಜಪ ತೆರೆಮರೆಯಲ್ಲಿ ಚಾಲಾಕಿತನದಿಂದ ಸರಕಾರವನ್ನು ಉರುಳಿಸಲು, ಶಾಸಕರನ್ನು ಖರೀದಿಸಲು ಬಲೆ ಬೀಸುತ್ತಲೇ ಇದೆ. ಕೇಂದ್ರ ಸರಕಾರ ರಾಜ್ಯದಲ್ಲಿ ಭಾಜಪದ ಕಿತಾಪತಿಗೆ ಎಲ್ಲ ಬಗೆಯ ಬೆಂಬಲವನ್ನು ನೀಡುತ್ತಿದೆ. ಕಾಂಗ್ರೆಸ್ಸಿನಲ್ಲಿ ಪ್ರಮುಖರನ್ನು ಗುರಿಯಾಗಿಟ್ಟುಕೊಂಡು ಆದಾಯ ತೆರಿಗೆ ಇಲಾಖೆಯನ್ನು, ಕೇಂದ್ರ ಗುಪ್ತದಳ (ಸಿಬಿಐ)ವನ್ನು ಇದಕ್ಕಾಗಿ ಬಳಸಿಕೊಳ್ಳುತ್ತಿದೆ. ಸಚಿವ ಶಿವಕುಮಾರ ಭಾಜಪಗೆ ಅಧಿಕಾರ ಸಿಗದಂತೆ ಮಾಡುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ರಿಸಾರ್ಟ್ ರಾಜಕಾರಣದಲ್ಲಿ, ಅಂದರೆ ಶಾಸಕರನ್ನು ಹಿಡಿದಿಟ್ಟುಕೊಳ್ಳುವುದರಲ್ಲಿ ಪಳಗಿದ ಕೈ ಡಿ. ಕೆ. ಶಿವಕುಮಾರ್ ಅವರದ್ದು. ಅದಕ್ಕಾಗಿಯೇ ಅವರ ಮೇಲೆ ಸತತವಾಗಿ ಆದಾಯ ತೆರಿಗೆ ಅಧಿಕಾರಿಗಳನ್ನು ಛೂ ಬಿಡಲಾಗಿದೆ. ಹಾಗೆ ನೋಡಿದರೆ ಯಾವ ಶಾಸಕರೂ ಕೂಡ ಭಾಜಪ ಶಾಸಕರನ್ನೊಳಗೊಂಡು ಯಾರೂ ಪರಿಶುದ್ಧರಲ್ಲ. ಪ್ರತಿಯೊಬ್ಬರೂ ತಿಣುಕಿ ಸಾಧ್ಯವಾದಷ್ಟು ಕಮಾಯಿಸಿದ್ದಾರೆ. ಚುನಾವಣೆಗಳ ಸಮಯದಲ್ಲಿ ಶಾಸಕ ಸ್ಥಾನಕ್ಕಾಗಿ ಅಭ್ಯರ್ಥಿಗಳಾಗಿರುವವರು ಸಲ್ಲಿಸಿರುವ ಆಸ್ತಿ ವಿವರಗಳನ್ನು ಪರಿಶೀಲಿಸಿದರೆ ಅದು ಗೊತ್ತಾಗುತ್ತದೆ. ನಮ್ಮನ್ನಾಳುತ್ತಿರುವವರು ಕರೋಡ್‌ಪತಿಗಳಲ್ಲ , ಹಲವು ಕೋಟಿಗಳ ವ್ಯವಹಾರಸ್ಥರು ಎನ್ನುವುದು. ಸಿದ್ದರಾಮಯ್ಯ ಅಧಿಕಾರ ವಂಚಿತ, ಮಾಜಿ ಮುಖ್ಯಮಂತ್ರಿ, ಹಾಲಿ ಸಮನ್ವಯ ಸಮಿತಿಯ ಅಧ್ಯಕ್ಷ. ಅದರಿಂದಲೇ ಆತನ ಆಪ್ತರು ಕಿತಾಪತಿ ಮಾಡುವುದು, ಸಣ್ಣ ಪುಟ್ಟದನ್ನೆಲ್ಲ ದೊಡ್ಡದು ಮಾಡುವುದು ಸಹಜ. ಮಾಧ್ಯಮಗಳ ಸುದ್ದಿಯನ್ನು, ಚರ್ಚೆಗಳನ್ನು ಗಮನಿಸಿದಂತೆ ಯಾವ ಕ್ಷಣದಲ್ಲಾದರೂ ಸರಕಾರದ ಪತನವಾದೀತು ಎನ್ನುವುದು ಖಚಿತವಾಗುತ್ತದೆ. ಏಕೆಂದರೆ ಬಹುತೇಕ ಇಲೆಕ್ಟ್ರಾನಿಕ್ ಮಾಧ್ಯಮಗಳು ಭಾಜಪದ ಹಿಡಿತದಲ್ಲಿವೆ. ಮೋದಿ ಭಂಟ ಉದ್ಯಮಿ ಅಂಬಾನಿಗಳು ದೇಶದ ಟಿ.ವಿ. ಚಾನೆಲ್‌ಗಳಲ್ಲಿ ಶೇ. ೬೦ ರಷ್ಟನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡಿದ್ದಾರೆ. ಇದಕ್ಕಿಂತ ಬೇರೇನು ಬೇಕು ಸಂಘಪರಿವಾರದ ಸರಕಾರಕ್ಕೆ.

* * *

ಮೂಲಭೂತವಾದ ಈಗ ಅಮೆರಿಕಕ್ಕೂ ನುಗ್ಗಿದೆ. ಅಮೆರಿಕದಲ್ಲಿ ನೆಲೆಸಿರುವ ಭಾರತೀಯ ಸಂಜಾತದಲ್ಲಿ ಬಹಳಷ್ಟು ಮಂದಿ ಸಂಘಪರಿವಾರದ ಬೆಂಬಲಿಗರಾಗಿದ್ದಾರೆ. ಮೋದಿಯವರ ಅಮೆರಿಕ ಭೇಟಿಯ ಸಂದರ್ಭವನ್ನು ನೆನಪು ಮಾಡಿಕೊಂಡರೆ ಅದು ವೇದ್ಯವಾಗುತ್ತದೆ. ಭಾರತದಿಂದ ವಲಸೆಹೋದವರು ಹಿಂದುತ್ವದ ಪ್ರತಿಪಾದನೆಯಲ್ಲಿ ಅಸ್ಮಿತೆ ಕಂಡುಕೊಳ್ಳುತ್ತಿದ್ದಾರೆ. ಅಮೆರಿಕದ ಪ್ರವಾಸದ ಸಮಯದಲ್ಲಿ ಇದು ಸ್ವತಃ ನನ್ನ ಗಮನಕ್ಕೆ ಬಂದಿದೆ. ತಾಯ್ನಾಡಿನಿಂದ ದೂರ ಇರುವವರಲ್ಲಿ ಇದು ಒಂದು ರೀತಿಯ ಸಹಜ ಪ್ರವೃತ್ತಿ. ಇದನ್ನು ಸಂಘ ಪರಿವಾರದವರು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ. ಸರ ಸಂಘಚಾಲಕ ಮೋಹನ್ ಭಾಗವತ್ ಇತ್ತೀಚೆಗೆ ಅಮೆರಿಕಕ್ಕೆ ಭೇಟಿನೀಡಿದ್ದನ್ನು ನೆನಪು ಮಾಡಿಕೊಳ್ಳಬಹುದು.

ಕಳೆದ ತಿಂಗಳು ಖ್ಯಾತ ಸಂಗೀತಗಾರ ಟಿ. ಎಂ. ಕೃಷ್ಣ ಇವರ ಕಚೇರಿಯನ್ನು ಹಿಂದೂ ಮೂಲಭೂತವಾದಿಗಳ ಪ್ರತಿಭಟನೆಯಿಂದಾಗಿ ಸ್ಥಳಾಂತರಿಸಬೇಕಾಯಿತು. ಈತ ಎಲ್ಲ ಸಂಗೀತಗಾರರಂತೆ ಅಲ್ಲ. ಹಾಡುಗಾರಿಕೆಯಲ್ಲಿ ಕ್ರಿಶ್ಚಿಯನ್ ಪ್ರಾರ್ಥನೆಗಳನ್ನು, ಉರ್ದು ಕವಿತೆಗಳನ್ನು ಹಾಡುವುದನ್ನು ರೂಢಿಸಿಕೊಂಡಿದ್ದಾರೆ. ವಾಷಿಂಗ್ಟನ್‌ನ ಶ್ರೀ ಶಿವ ವಿಷ್ಣು ದೇವಾಲಯದಲ್ಲಿ ಕಚೇರಿ ಮೊದಲು ಗೊತ್ತಾಗಿತ್ತು. ಹಿಂದುತ್ವವಾದಿಗಳ ಪ್ರತಿಭಟನೆಯಿಂದಾಗಿ ಅದನ್ನು ಜಾರ್ಜ್ ಟೌನ್ ವಿಶ್ವವಿದ್ಯಾನಿಲಯದ ಅಂಗಳಕ್ಕೆ ವರ್ಗಾಯಿಸಲಾಯಿತು.

* * *

ದೇಶದ ರಕ್ಷಣಾ ಸಚಿವೆ ನಿರ್ಮಲಾ ಸೀತಾರಾಮನ್ ಕರ್ನಾಟಕದಿಂದ ರಾಜ್ಯಸಭೆಗೆ ಆಯ್ಕೆಯಾಗಿದ್ದಾರೆ ಎಂಬುದು ಅವರಿಗೆ ನೆನಪಿನಲ್ಲಿ ಉಳಿದಿಲ್ಲ. ರಕ್ಷಣಾ ಸಚಿವಾಲಯದಡಿ ಬರುವ ಬೆಂಗಳೂರಿನ ಹಿಂದುಸ್ತಾನ್ ಏರೊನಾಟಿಕ್ಸ್ ಸಂಸ್ಥೆಯ ಇತಿಹಾಸವಾಗಲಿ ಸದ್ಯದ ಅದರ ಕಾರ್ಯಕ್ರಮಗಳಾಗಲಿ ಅವರಿಗೆ ತಿಳಿದಿಲ್ಲ. ಇಲ್ಲವೇ ತಿಳಿದೂ ಅಪ್ಪಟ ಅಬದ್ಧ ಮಾತುಗಳನ್ನಾಡುತ್ತಿದ್ದಾರೆ. ಪ್ರಶಾಂತ ಭೂಷಣ್ ಹೇಳಿರುವಂತೆ ಬಹುಶಃ ಅವರು ತಮಗಿಂತಲೂ ಹಿರಿಯ ಸ್ಥಾನಗಳಲ್ಲಿ ಕೇಂದ್ರ ಸಚಿವ ಸಂಪುಟದಲ್ಲಿರುವ ಸಹೋದ್ಯೋಗಿಗಳ ರಕ್ಷಣೆಗೆ ಧಾವಿಸುವುದಕ್ಕಾಗಿ ಅಂತಹ ಅಡ್ಡದಾರಿಯ ಮಾತುಗಳನ್ನಾಡುತ್ತಿದ್ದಾರೆ. ಶ್ರೀಮತಿ. ನಿರ್ಮಲಾ ಸೀತಾರಾಮನ್ ಅವರ ಹೇಳಿಕೆಯಲ್ಲಿ ಎರಡು ಪ್ರಮುಖಾಂಶಗಳಿವೆ: ಫ್ರಾನ್ಸ್ ದೇಶದೊಡನೆ ೩೬ ರಫೇಲ್ ಯುದ್ಧವಿಮಾನಗಳನ್ನು ಕೊಳ್ಳಲು ಒಪ್ಪಂದ ಮಾಡಿಕೊಳ್ಳುವಾಗ ಹಿಂದಿದ್ದ ಕಾಂಗ್ರೆಸ್ ಸರ್ಕಾರವು ಅವೇ ವಿಮಾನಗಳನ್ನು ಕೊಳ್ಳಲು ತಲಾ ಒಂದಕ್ಕೆ ಯಾವ ಬೆಲೆಯನ್ನು ನಿಗದಿಗೊಳಿಸಿ ಒಪ್ಪಂದ ಮಾಡಿಕೊಂಡಿತ್ತೋ ಅದಕ್ಕಿಂತಲೂ ಎರಡರಷ್ಟಕ್ಕಿಂತಲೂ ಹೆಚ್ಚು ಮೊತ್ತವನ್ನು ಬೆಲೆಯಾಗಿ ನಿಷ್ಕರ್ಷಿಸಲಾಗಿದೆ. ಪ್ರಧಾನಿಯವರು ಫ್ರಾನ್ಸ್‌ಗೆ ತೆರಳಿದ್ದಾಗ ಆ ಒಪ್ಪಂದಕ್ಕೆ ಸಹಿ ಹಾಕಿ ಬಂದಿದ್ದರು, ಆಗ ರಕ್ಷಣಾ ಸಚಿವೆ ಅಲ್ಲಿಗೆ ಹೋಗಿರಲಿಲ್ಲ, ಮಾತುಕತೆಗಳಲ್ಲಿ ಭಾಗ ವಹಿಸಿರಲಿಲ್ಲ ಮತ್ತು ಒಪ್ಪಂದಕ್ಕೆ ಸಹಿ ಹಾಕಿರಲಿಲ್ಲ. ಒಪ್ಪಂದವು ಯುದ್ಧವಿಮಾನಗಳ ಬೆಲೆಯನ್ನು ಯಾವ ಕಾರಣಗಳಿಗಾಗಿ ಹೆಚ್ಚಿನ ಪ್ರಮಾಣದಲ್ಲಿ ನಿಗದಿಗೊಳಿಸಿತೆಂಬುದನ್ನು ಭಾರತ ಸರ್ಕಾರವಾಗಲಿ ಫ್ರಾನ್ಸ್ ಸರ್ಕಾರವಾಗಲಿ ತಿಳಿಸುತ್ತಿಲ್ಲ. ಒಪ್ಪಂದದ ಅಂಶಗಳು 'ರಹಸ್ಯ'ವಾದ್ದರಿಂದ ಬೆಲೆಯನ್ನು ಸಹ ನಿಖರವಾಗಿ ಪ್ರಕಟಿಸುತ್ತಿಲ್ಲವೆಂದು ಹೇಳಲಾಗುತ್ತಿದೆ. ನಾವೇನು ಕೊಳ್ಳುತ್ತೇವೋ ಅದರ ಬೆಲೆ ರಹಸ್ಯವಾಗಿರಲು ಕಾರಣಗಳಿವೆಯೇ ಮತ್ತು ಒಪ್ಪಂದವು ರಹಸ್ಯವಾಗಿರಬೇಕೆಂದು ಒಪ್ಪಂದದಲ್ಲಿ ಅಡಕಗೊಳಿಸುವ ಪದ್ಧತಿ ಯಾವಾಗ ಆರಂಭವಾಯಿತು? ಇದು ಒಪ್ಪಂದದ ಬಗೆಗಿನ ರಹಸ್ಯವೋ ಅಥವಾ ದೇಶವನ್ನು ತಪ್ಪುದಾರಿಗೆಳೆಯುತ್ತಿರುವ ಪ್ರಯತ್ನವೋ? ಸುಮಾರು ನಲವತ್ತು ಸಾವಿರ ಕೋಟಿ ರೂಪಾಯಿಗಳಿಗೂ ಹೆಚ್ಚಿನ ಅವ್ಯವಹಾರ ನಡೆಯುತ್ತಿದೆಯೆಂದು ಅನೇಕ ವಲಯಗಳಲ್ಲಿ ಆಪಾದನೆಗಳು ಕೇಳಿಬಂದಿವೆ. ಬೊಫೋರ್ಸ್ ಹಗರಣದೊಡನೆ ತುಲನೆ ಮಾಡಿ ನೋಡಿದರೆ ಅದಕ್ಕಿಂತಲೂ ಸುಮಾರು ಎಂಟುಪಟ್ಟು ಹೆಚ್ಚು ಮೊತ್ತದ ಲಪಟಾಯಿಸುವಿಕೆ ನಡೆಯುತ್ತಿದೆಯೆಂದು ಹೇಳಲಾಗುತ್ತಿದೆ. ಇದು ಒಪ್ಪಂದದ ಹಗರಣ, ಬೆಲೆಯ ಹಗರಣ, ಯುದ್ಧ ವಿಮಾನಗಳ ಸಂಖ್ಯೆಯನ್ನು ಕಡಿಮೆಗೊಳಿಸಿರುವ ಹಗರಣ. ಅಚ್ಚರಿಯ ಸಂಗತಿಯೆಂದರೆ ಕೇಂದ್ರ ಸಚಿವೆಯನ್ನು ಸಮರ್ಥಿಸುವಂತಹ ಹೇಳಿಕೆಗಳನ್ನು ವಾಯುಸೇನೆಯ ಅಧಿಕಾರಿಗಳು ನೀಡುತ್ತಿರುವುದು. ಅವು ಸ್ವಯಂಪ್ರೇರಿತ ಸತ್ಯ ವಚನಗಳೋ, ಕೇಂದ್ರದಲ್ಲಿ ಅಧಿಕಾರದಲ್ಲಿರುವವರ ಒತ್ತಡದಿಂದಾಗಿ ಹೊರಬಂದಿರುವ ಹೇಳಿಕೆಗಳೋ ಎಂಬುದರ ತನಿಖೆ ನಡೆಯುವುದು ಅಗತ್ಯವಾಗಿದೆ. ಒಟ್ಟಿನಲ್ಲಿ ೪೦,೦೦೦ ಕೋಟಿ ರೂಪಾಯಿಗಳ ಅವ್ಯವಹಾರ ಮುಸುಕಿನಲ್ಲಿ ನಡೆದಿದೆ.

ಒಪ್ಪಂದದ ಇನ್ನೊಂದು ಮುಖ್ಯ ಅಂಶ ಇನ್ನೂ ಘೋರವಾದ್ದು, ಖಂಡನೀಯವಾದ್ದು. ರಫೇಲ್ ಯುದ್ಧವಿಮಾನಗಳನ್ನು ಕೊಂಡನಂತರ ಅವನ್ನು ನಮ್ಮ ದೇಶದ ಒಂದು 'ಪರಿಣತ' ಕಾರ್ಖಾನೆಗೆ ಕಳಿಸಿ ಅವನ್ನು ಕಾರ್ಯಸಾಧುವನ್ನಾಗಿಸಲಾಗುತ್ತದೆ.

ಈವರೆಗೆ ಆ ಕೆಲಸವನ್ನು ಸಾರ್ವಜನಿಕ ವಲಯದ ಶ್ರೇಷ್ಠ ಘಟಕವಾದ ಹಿಂದುಸ್ತಾನ್ ಏರೊನಾಟಿಕ್ಸ್ ಲಿಮಿಟೆಡ್ ಎಂಬ ಸಂಸ್ಥೆಯು ನಿರ್ವಹಿಸುತ್ತಿತ್ತು. ಬೆಂಗಳೂರಿನಲ್ಲಿರುವ ಎಚ್.ಎ.ಎಲ್.ನ ಇತಿಹಾಸ ಮತ್ತು ಸಾಧನೆಗಳನ್ನು ವಿಶ್ವವೇ ಬಲ್ಲದು. ಆದರೆ ಕೇಂದ್ರ ರಕ್ಷಣಾ ಸಚಿವೆ ನಿರ್ಮಲಾ ಸೀತಾರಾಮನ್ ಅವರ ಪ್ರಕಾರ ಅಂತಹ ನಿರ್ವಹಣೆ ಮಾಡಲು ಎಚ್.ಎ.ಎಲ್.ಗೆ "ಪರಿಣತಿ ಸುತರಾಂ ಇಲ್ಲ"; ಆದ್ದರಿಂದ ಅದು ಈಗಿನ್ನೂ ಜನ್ಮ ತಾಳುತ್ತಿರುವ ಅಂಬಾನಿ ಕಂಪನಿಯೊಂದಕ್ಕೆ ನೀಡಲಾಗುತ್ತದೆ! ರಕ್ಷಣಾ ಸಚಿವಾಲಯದ ಸುಪರ್ದಿನಲ್ಲಿದ್ದು, ಎಪ್ಪತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಅಸ್ತಿತ್ವದಲ್ಲಿರುವ ಕಾರ್ಖಾನೆಗಿಂತಲೂ ಅಂಬಾನಿ ಶಿಶು ಹೇಗೆ ಪರಿಣತಿಯನ್ನು ಹೊಂದಿದೆಯೆಂಬುದೂ ರಹಸ್ಯವೇ! ದೇಶದ ರಕ್ಷಣಾ ಸಾಮರ್ಥ್ಯವನ್ನು ಸಾರ್ವಜನಿಕ ವಲಯದಿಂದ ಖಾಸಗಿ ಕಾರ್ಖಾನೆಗೆ ವರ್ಗಾಯಿಸಲು ಶ್ರೀಮತಿ. ನಿರ್ಮಲಾ ಸೀತಾರಾಮನ್ ಅವರು ಸಚಿವರಾಗಿದ್ದಾರೇನು? ಅಂಬಾನಿ ಶಿಶು–ಕಂಪನಿಯ ಅಗಾಧ ಸಾಮರ್ಥ್ಯವನ್ನು ಮಾಪನ ಮಾಡಿದವರು ಯಾರು ಮತ್ತು ಅದನ್ನು ಹೇಗೆ ಮಾಪನ ಮಾಡಿದರು? ಸಾರ್ವಜನಿಕ ವಲಯದ ಎಚ್.ಎ.ಎಲ್.ಗೆ ಶಕ್ತಿ ತುಂಬುವ, ಅದರ ಸಾಮರ್ಥ್ಯವನ್ನು ವ್ಯಾಪಕಗೊಳಿಸುವ ಜವಾಬ್ದಾರಿಯು ರಕ್ಷಣಾ ಸಚಿವೆಗೆ ಇಲ್ಲವೆ? ಎಚ್.ಎ.ಎಲ್.ಗೆ ಸಾಮರ್ಥ್ಯವಿಲ್ಲವೆಂದು ಸಚಿವೆಗೆ ತಿಳಿದದ್ದು ಹೇಗೆ? ಪರಿಣತರಿಂದ ಅದನ್ನು ಹಾಗೂ ಅಂಬಾನಿ ಶಿಶು–ಕಂಪನಿಯನ್ನು ಮಾಪನ ಮಾಡಿಸಲಾಯಿತೇ? ಎಚ್.ಎ.ಎಲ್. ಮೇಲೆ ಗೂಬೆ ಕೂರಿಸಲು ಮಾನ್ಯ ಸಚಿವೆಗೆ ಹಕ್ಕು ದೊರೆತದ್ದು ಹೇಗೆ? ಹಿಂದಿನ ಕೇಂದ್ರ ಸರ್ಕಾರಗಳು ಈ ಕಾರ್ಖಾನೆಯನ್ನು ಪೋಷಿಸಿ ಆಧುನಿಕಗೊಳಿಸಿಲ್ಲದಿದ್ದರೆ ಅದನ್ನು ಕೂಡಲೇ ಮಾಡಬೇಕಾದ್ದು ಇಂದಿನ ಸರ್ಕಾರದ ಕರ್ತವ್ಯವೇ ವಿನಾ ಈಗ ತಾನೇ ಹುಟ್ಟುತ್ತಿರುವ ಕೂಸಿಗೆ ತಾಂತ್ರಿಕ ಜವಾಬ್ದಾರಿ ನೀಡಹೊರಟಿರುವುದು ಸರ್ವಥಾ ಮಾನ್ಯವಲ್ಲ. ನಲವತ್ತು ಸಾವಿರ ಕೋಟಿ ರೂಪಾಯಿಗಳ ಹಗರಣದ ಜೊತೆ ಎಚ್.ಎ.ಎಲ್.ನ ಮಾನಭಂಗವೂ ನಡೆಯುತ್ತಿದೆ. ಅದರ ವಿಸರ್ಜನೆ ಮತ್ತು ಅದರ ಆಸ್ತಿಯ ಲಪಟಾಯಿಸುವಿಕೆಯು ರಕ್ಷಣಾ ಸಚಿವಾಲಯದ ಕಾರ್ಯಸೂಚಿಯಾಗಿ ತೋರಿಬರುತ್ತಿದೆ.

ಹತ್ತು ಸಾವಿರಕ್ಕೂ ಹೆಚ್ಚು ನೌಕರರು ಎಚ್.ಎ.ಎಲ್.ನಲ್ಲಿದ್ದಾರೆ ಮತ್ತು ಹಲವು ದಶಕಗಳಿಂದ ಅವರು ಸಂಸ್ಥೆಗೆ ಕೀರ್ತಿ ತಂದಿತ್ತಿದ್ದಾರೆ. ಒಂದೇ ಮಾತಿನಲ್ಲಿ ಮಾಡಲಾಗಿರುವ ಇಡೀ ಸಂಸ್ಥೆಯ ಅಪಮೌಲ್ಯೀಕರಣವನ್ನು ಎಚ್.ಎ.ಎಲ್. ಕಾರ್ಮಿಕರು ತಲೆದೂಗಿ ಮಾನ್ಯಮಾಡುತ್ತಾರೆಯೇ ಅಥವಾ ಒಕ್ಕೊರಲಿನಿಂದ ಈ ನಾಚಿಕೆಗೇಡಿನ ವರ್ತನೆಯನ್ನು ಖಂಡಿಸುತ್ತಾರೆಯೇ? ನಾಳೆ ಒಂದು ದಿನ ರಕ್ಷಣಾ ಸಚಿವೆ ಎಚ್.ಎ.ಎಲ್.ಗೆ ಭೇಟಿ ನೀಡುವ ಪ್ರಸಂಗ ಬಂದರೆ ಅವರಿಗೆ ಕಪ್ಪು ಬಾವುಟಗಳಿಂದ "ಸ್ವಾಗತ" ಕೋರಬೇಕಾದೀತು. ಬೆಂಗಳೂರಿನ ಹೆಗ್ಗಳಿಕೆಗೆ ಕಾರಣಗಳಲ್ಲೊಂದಾದ ಎಚ್.ಎ.ಎಲ್. ಬಗ್ಗೆ ತಾವಾಡಿರುವ ಮಾತನ್ನು ರಕ್ಷಣಾ ಸಚಿವೆ ಹಿಂತೆಗೆದುಕೊಳ್ಳಬೇಕು. ಅಂಬಾನಿ ಕಂಪನಿಯ ಪೋಷಕಿಯಾಗುವುದನ್ನು ತೊರೆದು ಎಚ್.ಎ.ಎಲ್.ನ ತಾಂತ್ರಿಕ ವೃದ್ಧಿಯಲ್ಲಿ ತೊಡಗಬೇಕು.

✶ ✶ ✶

ಟೆರೆಸಾ ಹೇಟರ್ ಎಂಬಾಕೆ ೧೯೭೧ರಷ್ಟು ಹಿಂದೆ "ಸಾಮ್ರಾಜ್ಯಶಾಹಿಯ ಅಂಗವಾಗಿ ನೆರವು" (ಏಡ್ ಆ್ಯಸ್ ಇಂಪೀರಿಯಲಿಸಂ) ಎಂಬ ವಿಮರ್ಶಾತ್ಮಕ ಗ್ರಂಥವೊಂದನ್ನು ಪ್ರಕಟಿಸಿದ್ದರು. ನೆರವಿನ ಹೆಸರಿನಲ್ಲಿ ಸಾಮ್ರಾಜ್ಯಶಾಹಿಯು ತನ್ನ ಆರ್ಥಿಕ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವ ಉದ್ದೇಶ ಮತ್ತು ವಿಧಾನಗಳನ್ನು ಆಕೆ ಸಾಕಷ್ಟು ಸಮಗ್ರವಾಗಿ ವಿಶ್ಲೇಷಿಸಿದ್ದರು. ಇಂದಿನ ಸಂದರ್ಭದಲ್ಲೂ ಆಕೆಯ ಮಾಹಿತಿ ಮತ್ತು ಚರ್ಚೆ ಪ್ರಸ್ತುತವೇ ಆಗಿವೆ. ಅಭಿವೃದ್ಧಿ ಬಯಸುತ್ತಿದ್ದ ಭಾರತದಂತಹ ದೇಶಗಳು ಆಗ್ಗೆ "ನಮಗೆ ನಿಮ್ಮ ನೆರವು ಬೇಡ, ಅಂತರರಾಷ್ಟ್ರೀಯ ವ್ಯಾಪಾರ ವಹಿವಾಟುಗಳಿಗೆ ಅವಕಾಶ ಕಲ್ಪಿಸಿದರೆ ಸಾಕು" ಎಂಬರ್ಥದಲ್ಲಿ AID ಬದಲು TRAID ಅಗತ್ಯ ಎಂದು ಪ್ರತಿಪಾದಿಸಿದುವು. ಹೊರರಾಷ್ಟ್ರಗಳೊಡನೆ ವ್ಯಾಪಾರ ನಡೆಸುವಾಗ ಸಮತೋಲನವು ಬಹಳ ಜೋಪಾನವಾಗಿ ಕಾಯ್ದುಕೊಳ್ಳಬೇಕಾದ ಸಂಗತಿ. ಅಂದರೆ, ಆಮದು ಮತ್ತು ರಫ್ತು ಸಾಮಾನ್ಯವಾಗಿ ವಿಪರೀತ ಏರುಪೇರಾಗಬಾರದು ಎಂಬ ಆಶಯವಿದ್ದಿತು. ನಮ್ಮ ದೇಶದಿಂದ ರಫ್ತಾಗುವ ಸರಕುಗಳು ಸಹಜವಾಗಿ ನಮ್ಮ ದೇಶದಲ್ಲೇ ಉತ್ಪಾದನೆಗೊಳ್ಳಬೇಕೆಂಬ ಇರಾದೆ ಇದರಲ್ಲಿದೆ. ಅದನ್ನೇ "ಮೇಡ್ ಇನ್ ಇಂಡಿಯ" ಯೋಜನೆ ಎನ್ನಲಾಗುತ್ತಿತ್ತು. ನಾಲ್ಕು ವರ್ಷಗಳ ಹಿಂದೆ ನಮ್ಮ ದೇಶದಲ್ಲಿ ಆ ಆಶಯದ ಜಾಗದಲ್ಲಿ "ಮೇಕ್ ಇನ್ ಇಂಡಿಯ" ಎಂಬ ಸೂತ್ರವನ್ನು ಮಂಡಿಸಲಾಯಿತು. ಅಂದರೆ, ಹೊರದೇಶದವರು ನಮ್ಮ ದೇಶದಲ್ಲಿ ಬಂಡವಾಳವನ್ನು ಹೂಡಿ ಉತ್ಪಾದನೆಯಲ್ಲಿ ತೊಡಗುತ್ತಾರೆ ಮತ್ತು ಉತ್ಪನ್ನಗಳನ್ನು ರಫ್ತು ಮಾಡುತ್ತಾರೆ. ನಮ್ಮ ದೇಶದ ಕೆಲವರಿಗೆ ಉದ್ಯೋಗದ ಅವಕಾಶಗಳು ಹೆಚ್ಚುತ್ತವೆಂಬ ನಿರೀಕ್ಷೆ ಇದ್ದಿತು. ಆದರೆ ಪ್ರಧಾನಿಯವರ ನೋಟು ಅಮಾನ್ಯೀಕರಣ, ಮುಂತಾದ ಕೆಟ್ಟ ಯೋಜನೆಗಳಂತೆ 'ಮೇಕ್ ಇನ್ ಇಂಡಿಯ' ಸಹ ನೆಲಕಚ್ಚಿತು.

ಅಮೆರಿಕಾದೊಡನೆ ವ್ಯಾಪಾರ ಸಂಬಂಧದಲ್ಲಿ ನಮ್ಮ ದೇಶವು ಅಲ್ಲಿಂದ ಆಮದು ಮಾಡಿಕೊಳ್ಳುವುದಕ್ಕಿಂತಲೂ ಹೆಚ್ಚಾಗಿ ರಫ್ತು ಮಾಡಿದ ಪರಿಣಾಮವಾಗಿ ನಮ್ಮಲ್ಲಿ ಸುಮಾರು ೨೫ ಬಿಲಿಯನ್ ಡಾಲರುಗಳಷ್ಟು ಮೊತ್ತವು ಶೇಖರಣೆಗೊಂಡಿದೆ. ಅದನ್ನು ಯಾವುದೇ ದೇಶದಿಂದ ಏನು ಬೇಕಾದರೂ ಕೊಳ್ಳಲು ಬಳಸುವ ಸ್ವಾತಂತ್ರ್ಯ ನಮ್ಮ ದೇಶಕ್ಕಿದೆ. ಆದರೆ ಅಮೆರಿಕಾದ ಅಧ್ಯಕ್ಷ ಟ್ರಂಪ್ ಈಗ ಟೆರೆಸಾ ಹೇಟರ್ ಅಂದು ನಿರೂಪಿಸಿದ್ದ ಸಿದ್ಧಾಂತವನ್ನು ಸ್ವಲ್ಪ ಬದಲಾಯಿಸಲು ಕಾತುರತೆ ತೋರುತ್ತಿರುವುದು ಸ್ಪಷ್ಟವಾಗಿದೆ. ನೆರವು (Aid) ಮತ್ತು ವ್ಯಾಪಾರ ರೂಪದ ನೆರವು (Traid) ಎರಡನ್ನೂ ದೂರ ಮಾಡಿ "ಸಾಮ್ರಾಜ್ಯಶಾಹಿಯ ಅಂಗವಾಗಿ ವ್ಯಾಪಾರ" (Trade as Imperialism) ಎಂಬ ಹೊಸ ಸೂತ್ರವನ್ನು ಅಮೆರಿಕಾ ಪ್ರತಿಪಾದಿಸುತ್ತಿದೆ. ಅಮೆರಿಕಾದ 'ಆಣತಿ' ಬಹಳ ಸರಳವಾಗಿದೆ: "ನಿಮ್ಮ ಬಳಿ ನಮ್ಮ ಡಾಲರುಗಳು ಅಗಾಧವಾಗಿ ಶೇಖರಣೆಗೊಂಡಿವೆ. ಆದ್ದರಿಂದ ಮುಂದಿನ ಎರಡು ವರ್ಷಗಳಲ್ಲಿ ಕನಿಷ್ಠ ೨೫ ಬಿಲಿಯನ್ ಡಾಲರುಗಳಷ್ಟು ಬೆಲೆಯ ಸರಕುಗಳನ್ನು ಕೊಂಡುಕೊಳ್ಳಿ." (ಹಾಗೆ ಮಾಡದಿದ್ದರೆ ಏನೇನು ಕಿರುಕುಳ ನೀಡಲಾಗುತ್ತದೆ ಎಂಬುದನ್ನು ಊಹಿಸಿಕೊಳ್ಳಬಹುದು.) ಅದನ್ನು ಮಾನ್ಯ ಮಾಡಹೊರಟರೆ ಎರಡು ಪ್ರತಿಕೂಲಗಳಿರುತ್ತವೆ: (ಅ) ನಮಗೆ ಬೇಕಾದ ದೇಶದಿಂದ ಬೇಕಾದ್ದನ್ನು ಕೊಳ್ಳಲು ಡಾಲರುಗಳು ಉಳಿದಿರುವುದಿಲ್ಲ, ಎಲ್ಲವನ್ನೂ ಅಮೆರಿಕಾದಿಂದ ಕೊಳ್ಳಬೇಕು, ಬೆಲೆಗಳನ್ನು ಬೇಕಾಬಿಟ್ಟಿ ಹೆಚ್ಚಿಸಲು ಅಮೆರಿಕಾಕ್ಕೆ ಅವಕಾಶವಿರುತ್ತದೆ; (ಆ) ನಮ್ಮ ರಫ್ತು ಸಾಕಷ್ಟು ಕಡಿಮೆಯಾಗುತ್ತದೆ.

ಅಮೆರಿಕಾದಿಂದ ಶಸ್ತ್ರಾಸ್ತ್ರಗಳನ್ನು ಖರೀದಿಸಬೇಕೆಂಬ ಒತ್ತಾಯವು ಹೆಚ್ಚುತ್ತದೆ. ಏಕೆಂದರೆ ಅಮೆರಿಕಾ ಉತ್ಪಾದಿಸುವುದು ಹೆಚ್ಚಾಗಿ ಅದನ್ನೇ! ಆ ದೇಶದ ಔದ್ಯಮಿಕ ಉತ್ಪಾದನೆಯು ಎಷ್ಟು ಕಳೆಗುಂದಿದೆಯೆಂದರೆ ಅಲ್ಲಿಯ ೧೭೭೬ರ ಸ್ವಾತಂತ್ರ್ಯ ಹೋರಾಟದ ಒಂದು ಲಾಂಛನವಾದ "ಸ್ವಾತಂತ್ರ್ಯ ಘಂಟೆ" (ಫಿಲಡೆಲ್ಫಿಯಾದಲ್ಲಿ ಇರಿಸಲಾಗಿರುವ 'ಲಿಬರ್ಟಿ ಬೆಲ್')ಯ ಪ್ರತಿರೂಪಗಳನ್ನು ಸಹ ಚೀಣಾದಲ್ಲಿ ಉತ್ಪಾದಿಸಲಾಗುತ್ತಿದೆ. ಎಲ್ಲ ದೇಶಗಳವರೂ ಅಲ್ಲಿ ಕೊಳ್ಳುವ 'ಲಿಬರ್ಟಿ ಬೆಲ್'ನ ಪ್ರತಿರೂಪ ಸಹ ಅಮೆರಿಕಾದಲ್ಲಿ ಉತ್ಪಾದನೆಗೊಳ್ಳುತ್ತಿಲ್ಲ. ನಮ್ಮ ರಫ್ತುಗಳಿಂದ ಶೇಖರಣೆಯಾಗಿರುವ ವಿದೇಶಿ ವಿನಿಮಯದ ಬಹುಭಾಗವನ್ನು ಅಮೆರಿಕಾದಿಂದ ಆಯುಧ ಸಾಮಗ್ರಿ ಕೊಳ್ಳಲು ಖರ್ಚು ಮಾಡಬೇಕು. ಹಾಗೆ ಕನಿಷ್ಠ ೨೫ ಬಿಲಿಯನ್ ಡಾಲರುಗಳ ಖರೀದಿ ನಡೆಯದಿದ್ದರೆ ತಾನು ಉಗ್ರ ಕ್ರಮಗಳನ್ನು ತೆಗೆದುಕೊಳ್ಳಲು ಸ್ವತಂತ್ರ ಎಂದು ಟ್ರಂಪ್ ಹೇಳಿರುವುದಾಗಿ ವರದಿಯಾಗಿದೆ. ಇಂಥ ಸ್ನೇಹವು ಬಹಳ ತೊಡಕಿನ ಸ್ನೇಹ; ಅದು ಸ್ನೇಹದ ಬದಲಾಗಿ ಹೊರೆಯಾಗುವ ಸಂಭವವೇ ಹೆಚ್ಚು.

ಹೀಗಿದೆ ನಮ್ಮ ಅಂತರರಾಷ್ಟ್ರೀಯ ವಾಣಿಜ್ಯ ನೀತಿ ಮತ್ತು ವಿದೇಶಾಂಗ ನೀತಿ. ಇತ್ತೀಚೆಗೆ ಇನ್ನೊಂದು ಸಮಾಚಾರ ಹೊರಬಿದ್ದಿತ್ತು: ಪ್ರಧಾನಿ ಮೋದಿಯವರು ಅಮೆರಿಕಾಕ್ಕೆ ಭೇಟಿಯಿತ್ತಾಗ ಅಲ್ಲಿಯ ಅಧ್ಯಕ್ಷರು ನಮ್ಮ ಪ್ರಧಾನಿಯನ್ನು ಎಲ್ಲಿಗೆ ಬರಮಾಡಿಕೊಳ್ಳಬೇಕು ಎಂಬುದು ಆ ಸಮಾಚಾರದ ಗಮ್ಮತ್ತು. ಅಮೆರಿಕಾದ ಅಧ್ಯಕ್ಷ ರಜೆಯ ಮೋಜಿಗೆ ಕೆಲವು ತಾಣಗಳನ್ನಿರಿಸಿಕೊಂಡಿದ್ದಾರೆ. ವಾಷಿಂಗ್ಟನ್ನಿನ ಶ್ವೇತಭವನಕ್ಕೆ ಬರಮಾಡಿಕೊಳ್ಳುವ ಬದಲು "ಯಾವುದಾದರೂ ರಜಾತಾಣಕ್ಕೆ ನನ್ನನ್ನು ಬರಮಾಡಿಕೊಳ್ಳಿ" ಎಂದು ನಮ್ಮ ಪ್ರಧಾನಿ ಕೇಳಿದ್ದರಂತೆ ಮತ್ತು ಅದು ನಿರಾಕರಿಸಲ್ಪಟ್ಟಿತಂತೆ. ಅತ್ತೂ ಕರೆದೂ ಔತಣ ಮಾಡಿಸಿಕೊಳ್ಳುವ ಫಜೀತಿ ಏಕೆ ಬೇಕಿತ್ತು? ಅದು ನಮ್ಮ ದೇಶದ ಘನತೆಯನ್ನು ಎತ್ತಿಹಿಡಿಯುತ್ತದೆಯೇ? "ರಾಷ್ಟ್ರೀಯ ಗೌರವ"ವೆಂದರೆ ಇದೇ ಏನು? ಏನೇ ಇರಲಿ, ಟ್ರಂಪ್ ಹೇರಲಿರುವ ನಿರ್ಬಂಧಗಳನ್ನು ಒಪ್ಪದಿರಬೇಕಾದ್ದು ನಮ್ಮ ಅಂತರರಾಷ್ಟ್ರೀಯ ವ್ಯಾಪಾರ ವಹಿವಾಟಿನ ಮೂಲಸೂತ್ರವಾಗಬೇಕು. ●




ಸೆಪ್ಟೆಂಬರ್ ತಿಂಗಳಿನ ಸಂಚಿಕೆಯಲ್ಲಿ ಪ್ರಕಟವಾದ ಡಾ॥ ಜಿ. ರಾಮಕೃಷ್ಣರವರ ಲೇಖನ 'ಕೌಟಿಲ್ಯನ ಅರ್ಥಶಾಸ್ತ್ರ – ಒಂದು ಟಿಪ್ಪಣಿ'ಯಲ್ಲಿ ಲೇಖಕರು ವಿಚಾರಗಳನ್ನು ಮಂಡಿಸಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರದ ಪ್ರಕಾರ, 'ಅರ್ಥ' ಎಂಬ ಶಬ್ದದ ಅರ್ಥ 'ಸಂಪತ್ತು' ಮತ್ತು 'ಸಂಪತ್ತು' ಎಂದರೆ ಭೂಮಿ ಎಂದು ತಿಳಿಸಲಾಗಿದೆ. ಅಂತೆಯೇ, ಅರ್ಥಶಾಸ್ತ್ರ ಎಂದರೆ ಭೂಮಿಯ ಸಂಪಾದನೆ ಮತ್ತು ಪೋಷಿಸುವುದು ಎಂದು ತಿಳಿಯಬಹುದು. ಆದ್ದರಿಂದ, ರಾಜರ ಆಳ್ವಿಕೆಯ ಕಾಲದ ಇತಿಹಾಸವನ್ನು ಗಮನಿಸಿದರೆ ಅಂದಿನ ಯುದ್ಧ, ಹೋರಾಟಗಳೆಲ್ಲವೂ ಗಡಿಪ್ರದೇಶದ ವಿಸ್ತರಣೆ ಮತ್ತು ಇತರ ರಾಜ್ಯಗಳ ಸಂಪತ್ತಿನ ಲೂಟಿಗಾಗಿಯೇ ನಡೆದಿವೆ. ರಾಜರ ಆಳ್ವಿಕೆಯ ಕಾಲದ ಸಾಮಾಜಿಕ ಚೌಕಟ್ಟಿನಲ್ಲಿ ನಡೆಯುತ್ತಿದ್ದ ಆರ್ಥಿಕ ಚಟುವಟಿಕೆಗಳು, ರಾಜ್ಯದ ಸೀಮಿತ ಪ್ರದೇಶದಲ್ಲಿ ನಡೆಯುತ್ತಿದ್ದವು. ಅಂತರರಾಜ್ಯ ವಾಣಿಜ್ಯ ವ್ಯವಹಾರಗಳು ವ್ಯಾಪಕವಾಗಿ ನಡೆಯುತ್ತಿರಲಿಲ್ಲ. ಸಾಮಾನ್ಯರ ತಿಳುವಳಿಕೆಯಲ್ಲಿ, ಕೌಟಿಲ್ಯನ ಸೂತ್ರಗಳೆಂದರೆ, ರಾಜರು ತಮ್ಮ ವಿರೋಧಿಗಳನ್ನು ನಾಶ ಮಾಡಲು ಅನುಸರಿಸಬೇಕಾದ ರಾಜತಂತ್ರಗಳಾಗಿದೆ. ರಾಜನಾದವನು ಪ್ರಜೆಗಳ ಮೇಲೆ ತನ್ನ ನಿಯಂತ್ರಣವನ್ನು ಬಲಪಡಿಸಲು, ಕೆಲವು ಮೂಢನಂಬಿಕೆಗಳನ್ನು ಬಿತ್ತಿದರೂ, ಅದು ತಪ್ಪಲ್ಲ ಎಂಬ ಅಭಿಪ್ರಾಯವು ಇದೆ. ತಾರ್ಕಿಕ ಚಿಂತನಾ ಕ್ರಮಗಳಲ್ಲಿ, ಕೌಟಿಲ್ಯನು 'ಆನ್ವೀಕ್ಷಿಕಿ' ಎಂಬ ವಿಧಾನಕ್ಕೆ ಮಾನ್ಯತೆ ನೀಡಿದ್ದನು ಎನ್ನುವುದೂ ಸಹ ಲೇಖನವು ಓದುಗರಿಗೆ ಪರಿಚಯಿಸಿರುವ ವಿಷಯ. ಕೌಟಿಲ್ಯನ ಅರ್ಥಶಾಸ್ತ್ರದ ವ್ಯಾಪ್ತಿಗೂ, ಆಧುನಿಕ ಅರ್ಥಶಾಸ್ತ್ರದ ಬಾಹುಳ್ಯಕ್ಕೂ ಬಹಳ ಅಂತರವಿದೆ.

*ಬೆಂಗಳೂರು* ***ಶಂಕರನಾರಾಯಣ***

**ವಿಶ್ವೇಶ್ವರತೀರ್ಥರ ಹೇಳಿಕೆ**

ಯಾವುದೋ ಒಂದು ಕಾರ್ಯಕ್ರಮದಲ್ಲಿ ಭಗವದ್ಗೀತೆಯ ಪ್ರತಿಯೊಂದನ್ನು ಸುಟ್ಟರೆಂಬುದನ್ನು ಮಾನ್ಯ ಶ್ರೀ. ವಿಶ್ವೇಶ್ವರತೀರ್ಥರು ಆಕ್ಷೇಪಿಸಿ ಹೇಳಿಕೆ ನೀಡಿದ್ದಾರೆ (ಪ್ರಜಾವಾಣಿ, ೨೦.೯.೨೦೧೮). ಅವರ ಮಾತನ್ನು ಅನುಮೋದಿಸುವುದು ಸೂಕ್ತವೇ ಆಗಿದೆ; ಏಕೆಂದರೆ ಪುಸ್ತಕವನ್ನು ವಿಮರ್ಶಾತ್ಮಕವಾಗಿ ಓದಿಕೊಂಡು ಸಾರ್ವಜನಿಕವಾಗಿ ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಎಲ್ಲರಿಗೂ ಹಕ್ಕಿದೆ. ಈಗಿನ ಕೇಂದ್ರಸರ್ಕಾರದ ನೀತಿಗಳು ಅದಕ್ಕೆ ಸಾಕಷ್ಟು ಅಡ್ಡಿಯನ್ನು ಉಂಟುಮಾಡುತ್ತಿವೆಯಾದರೂ ಅದಕ್ಕೆ ಪ್ರತಿಕ್ರಿಯೆಯು ಪುಸ್ತಕವನ್ನು ಸುಡುವುದಲ್ಲ. ಸಂವಿಧಾನದತ್ತವಾದ ಸ್ವಾತಂತ್ರ್ಯವನ್ನು ಅಧಿಕಾರ ಕೇಂದ್ರವು ಮೊಟಕುಗೊಳಿಸಿದಾಗ ಸಾಮೂಹಿಕ ಪ್ರತಿಭಟನೆಗಳ ಮುಖೇನ ನಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಳ್ಳುವುದು ಅಗತ್ಯವಾಗುತ್ತದೆ. ಸಾವಿರಾರು ವರ್ಷಗಳ ಹಿಂದೆ ಅಲೆಕ್ಸಾಂಡ್ರಿಯಾದಲ್ಲಿ ಸಾವಿರಾರು ಪುಸ್ತಕಗಳನ್ನು ಸುಡಲಾಗಿದ್ದಿತೆಂದು ಹೇಳುತ್ತಾರೆ. ೧೯೩೦ರ ದಶಕದಲ್ಲಿ ಜರ್ಮನಿಯಲ್ಲಿ ಹಿಟ್ಲರ್ ಆ ಹೀನಕ್ರಿಯೆಯನ್ನು ಮುಂದುವರಿಸಿದ್ದ. ಯಾವ ಪುಸ್ತಕಗಳ ಚಿಂತನಾ ಲಹರಿಗೆ ತರ್ಕಬದ್ಧವಾದ ಪ್ರತಿಕ್ರಿಯೆ ಮತ್ತು ಅಭಿವ್ಯಕ್ತಿಗೆ ಸಾಮರ್ಥ್ಯವಿರುವುದಿಲ್ಲವೋ ಅಂತಹ ಸಂದರ್ಭಗಳಲ್ಲಿ ಅಸಮರ್ಥರು ಪುಸ್ತಕಗಳನ್ನು




ಸುಡದೆ ಬೇರೇನೂ ಮಾಡಲಾರರು. ಆಳುವ ಒಡೆಯರು ತರ್ಕಕ್ಕೆ ಬೆದರುತ್ತಾರಾದ್ದರಿಂದ ಸುಡುವ ಸುಲಭ ಮಾರ್ಗವನ್ನು ಅನುಸರಿಸುತ್ತಾರೆ.

ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ಮಹಾಡಿನಲ್ಲಿ ಮನುಸ್ಮೃತಿಯ ಪ್ರತಿಯನ್ನು ಸುಟ್ಟಿದ್ದುದಾಗಿ ಆಗಾಗ್ಗೆ ಹೇಳುತ್ತಿರುವುದು ವಾಡಿಕೆಯಾಗಿದೆ. ನಾನು ಮಹಾಡಿನಲ್ಲಿ ಎರಡು ವರ್ಷ ವಾಸವಿದ್ದವನು. ಬಾಬಾಸಾಹೇಬರ ಒಡನಾಡಿಯಾಗಿ ಅವರ ಎಲ್ಲ ಹೋರಾಟಗಳಲ್ಲೂ ಭಾಗಿಯಾಗಿದ್ದವರು ಮಹಾಡಿನ ಶ್ರೀ. ಸುರೇಂದ್ರನಾಥ ಟಿಪ್ನಿಸ್ ಅವರು. ಮನುಸ್ಮೃತಿಯನ್ನು 'ಸುಟ್ಟ' ಪ್ರಸಂಗದಲ್ಲೂ ಅವರು ಭಾಗಿಯಾಗಿದ್ದರು. ನಿಜಕ್ಕೂ ಆ ಗ್ರಂಥವನ್ನು ಇಡಿಯಾಗಿ ಸುಡಲಾಗಿರಲಿಲ್ಲ. ಮಾನ್ಯ ಶ್ರೀ. ಸಹಸ್ರಬುದ್ಧೆಯವರು ಆ ಗ್ರಂಥದ ಕೆಲವು ಆಕ್ಷೇಪಾರ್ಹ ಶ್ಲೋಕಗಳನ್ನು ಕೆಲವು ಕಾಗದದ ಹಾಳೆಗಳಲ್ಲಿ ಬರೆದು ತಂದಿದ್ದರು. ಅವಕ್ಕೆ ಮರಾಠಿ ಭಾಷಾಂತರವನ್ನೂ ಸಿದ್ಧಗೊಳಿಸಿಕೊಂಡಿದ್ದರು. ಒಂದೊಂದು ಹಾಳೆಯಲ್ಲೂ ಒಂದೊಂದು ಶ್ಲೋಕವನ್ನು ಹಾಗೂ ಅದರ ಅನುವಾದವನ್ನು ಬರೆದಿದ್ದು, ಆ ಹಾಳೆಗಳಲ್ಲಿ ಬರೆದಿದ್ದುದನ್ನು ಬೃಹತ್ ಸಭೆಯಲ್ಲಿ ಒಂದೊಂದಾಗಿ ಓದಿ ಆಯಾ ಹಾಳೆಗಳನ್ನು ಅವರೇ ಬೆಂಕಿಗೆ ಹಾಕುತ್ತಾ ಹೋದರು. ಡಾ॥ ಅಂಬೇಡ್ಕರ್ ಅವರು ಸಹಸ್ರಬುದ್ಧೆಯವರ ಜೊತೆಯಲ್ಲಿ ನಿಂತಿದ್ದರು, ಆದರೆ ಹಾಳೆಗಳನ್ನು ಬೆಂಕಿಗೆ ಹಾಕುತ್ತಾ ಹೋದವರು ಸಹಸ್ರಬುದ್ಧೆಯವರೇ.

"ಭಗವದ್ಗೀತೆಯಲ್ಲಿ ಮಾನವನಿಗೆ ಹಾನಿಕಾರಕವಾದ ಸಂದೇಶ ಇಲ್ಲ" ಎಂಬುದು ಶ್ರೀ. ವಿಶ್ವೇಶ್ವರತೀರ್ಥರು ಗೀತೆಯನ್ನು ಸುಡಬಾರದೆಂಬುದಕ್ಕೆ ಕೊಟ್ಟಿರುವ ಕಾರಣ. ಹಾನಿಕಾರಕವಾದ ಅಂಶಗಳಿರುವ ಪುಸ್ತಕಗಳನ್ನು ಸುಟ್ಟರೆ ಹಾನಿಯುಂಟುಮಾಡುವ ಸಂಗತಿಗಳು ದಿಢೀರನೆ ಇಲ್ಲವಾಗುವುದಿಲ್ಲ. ಆದ್ದರಿಂದಲೇ ಇಂದು ಯಾರೂ ಹಿಟ್ಲರನ 'ಮಾಯ್ನ್ ಕಾಂಪ್ಫ್' ಅನ್ನು ಸುಟ್ಟುಹಾಕಿ ಫ್ಯಾಸಿಸ್ಟ್ ದುಷ್ಟಶಕ್ತಿಗಳನ್ನು ಇಲ್ಲವಾಗಿಸಬಹುದೆಂದು ಭಾವಿಸುವುದಿಲ್ಲ. ಅದು ನಮ್ಮ ಪ್ರಜ್ಞೆ ಮತ್ತು ಹೋರಾಟಗಳಿಂದ ಮಾತ್ರವೇ ನಿವಾರಣೆಯಾಗಬೇಕು.

ಗೀತೆಯಲ್ಲಿ ಮಾನವನ ಘನತೆಗೆ ಚ್ಯುತಿಯುಂಟು ಮಾಡುವಂತಹ, ಮತ್ತು ಅದರಿಂದಾಗಿ ಹಾನಿಕಾರಕವಾದ, ಅಂಶಗಳು ಇಲ್ಲವೇ ಇಲ್ಲವೆಂದು ಹೇಳಲಾಗದು. ಶ್ರೇಣೀಕೃತ ಸಮಾಜವನ್ನು ಎತ್ತಿಹಿಡಿಯುವ ಕಾಯಕವನ್ನು ಗೀತೆಯು ಮಾಡಿರುವುದು ಅಂತಹ ಒಂದು ಸಂಗತಿ. ನಾಲ್ಕು ವರ್ಣಗಳಲ್ಲಿ ಪ್ರತಿಯೊಂದಕ್ಕೂ ತನ್ನದೇ ಆದ 'ಸ್ವಭಾವಜ ಕರ್ಮ' ಇದೆಯೆಂದು ಆಗ್ರಹಿಸುವ ಗೀತೆಯು ಶೂದ್ರವರ್ಣದವರಿಗೆ ನಿಗದಿಗೊಳಿಸಿರುವ ಕರ್ಮವು ಬೇರೆ ವರ್ಣದವರ ಶುಶ್ರೂಷೆ ಮಾಡುತ್ತಿರಬೇಕೆಂಬುದು (೧೮.೪೪: ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ). ಬೇರೆ ವರ್ಣದವರಿಗೆ 'ಸ್ವಭಾವಜ'ವಾದುದೇನನ್ನೂ ಇತರೇ ವರ್ಣದವರು ಮಾಡಬಾರದೆಂದು ಎಲ್ಲ ವರ್ಣದವರಿಗೂ ಆದೇಶಿಸಲಾಗಿದೆ. 'ಸ್ವಧರ್ಮ'ವನ್ನು ಸ್ವಲ್ಪ ಕೆಟ್ಟದ್ದಾಗಿ ಪಾಲಿಸಿದರೂ ಚಿಂತೆಯಿಲ್ಲ, ಬೇರೆಯವರ ಧರ್ಮವನ್ನು ಚೆನ್ನಾಗಿ ಪಾಲಿಸುವುದಕ್ಕಿಂತಲೂ ಅದು ಮೇಲು ಎಂದು ಸಹ ಗೀತೆಯು ಬೋಧಿಸಿದೆ (೧೮.೪೭: ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸು ಅನುಷ್ಠಿತಾತ್। ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ॥).

ಸತ್ವ, ರಜಸ್ ಮತ್ತು ತಮಸ್ ಎಂಬ ಗುಣಗಳು ಕೂಡ 'ಸ್ವಭಾವತಃ' ಒಂದೊಂದು ವರ್ಣದವರಲ್ಲಿಯೂ ಕೇಂದ್ರೀಕೃತವಾಗಿರುತ್ತವೆಂದು ಗೀತೆಯು ಪ್ರತಿಪಾದಿಸಿದೆಯಾದ್ದರಿಂದ ಸ್ವಭಾವದ ಪರಿವರ್ತನೆಯನ್ನು ಗೀತೆಯು ಮಾನ್ಯ ಮಾಡುವುದಿಲ್ಲ. ಅಂದರೆ, ಸಮಾಜದಲ್ಲಿ ಚಲನೆಯ ಬದಲು ಸ್ಥಗಿತತೆಯನ್ನು ಪೋಷಿಸುವಂತಹ ಕ್ರಿಯೆಯನ್ನು ಗೀತೆಯು ಮಾನ್ಯ ಮಾಡುತ್ತದೆ. ಅರ್ಥಾತ್, ಇತರ ವರ್ಣಗಳವರ ಪರಿಚಾರಿಕೆಯಲ್ಲಿ ತೊಡಗುವುದು ಶೂದ್ರವರ್ಣದವರಿಗೆ ಅನಿವಾರ್ಯವೆಂದಂತಾಯಿತು. ಇದು ಖಂಡಿತವಾಗಿಯೂ ಆ ವರ್ಣದವರ ಘನತೆಗೆ ಪೂರಕವಾದ ಅಂಶವೆನಿಸಿಕೊಳ್ಳಲಾರದು. ಅದನ್ನು ವಿಮರ್ಶಾತ್ಮಕವಾಗಿ ಬಗೆಹರಿಸಿಕೊಳ್ಳಬೇಕೇ ವಿನಾ ಗೀತೆಯ ಪ್ರತಿಗಳನ್ನು ಸುಡುವುದರಿಂದ ಅಲ್ಲ. ಅಂತೆಯೇ ವಿಶ್ವೇಶ್ವರತೀರ್ಥರು ಹೇಳಿರುವಂತೆ 'ಗೀತೆಯಲ್ಲಿ ಆಕ್ಷೇಪಾರ್ಹವಾದದ್ದು ಏನೂ ಇಲ್ಲ' ಎಂದು ಸುಳ್ಳುಗಳನ್ನೂ ಹೇಳಬಾರದು.

*ಬೆಂಗಳೂರು* **ಜಿ. ರಾಮಕೃಷ್ಣ**

ಜಿ. ರಾಮಕೃಷ್ಣ

# ರಾಷ್ಟ್ರೀಯತೆಯ ವ್ಯಾಖ್ಯಾನ

ನಮ್ಮ ದೇಶದಲ್ಲಿ ಕೆಲವು ತಥಾಕಥಿತ 'ದೇಶಭಕ್ತರು' ತಾಳುವ ಅತಾರ್ಕಿಕ ರಾಷ್ಟ್ರವಿರೋಧಿ ನಿಲುವಿಗೆ ಮೂಲ ಕಾರಣ ಅವರು ತಮ್ಮ ಮನ ಬಂದಂತೆ "ರಾಷ್ಟ್ರೀಯತೆ"ಯನ್ನು ಕಲ್ಪಿಸಿಕೊಳ್ಳುವುದೇ ಆಗಿದೆ. ರಾಷ್ಟ್ರದ ಪ್ರಜೆಗಳನ್ನು ಗಣನೆಗೆ ತೆಗೆದುಕೊಳ್ಳದೆ ರಾಷ್ಟ್ರೀಯತೆಯನ್ನು ವ್ಯಾಖ್ಯಾನಿಸುವುದು ವಿಚಿತ್ರವಾದ ಮನೋವೈಕಲ್ಯ. ದೇಶವನ್ನು ಪ್ರೀತಿಸುವುದೆಂದರೆ ದೇಶದಲ್ಲಿ ಇರುವ ಜನರನ್ನು ಪ್ರೀತಿಸದಿದ್ದರೆ ಹೋಗಲಿ, ಕಡೇಪಕ್ಷ ಸಹನೆ–ಸಹಾನುಭೂತಿಗಳಿಂದ ನಡೆಸಿಕೊಳ್ಳಬೇಕು. ರಾಷ್ಟ್ರವೆಂದರೆ ವೈವಿಧ್ಯಗಳಿರುವುದು ಸಹಜ. ಎಲ್ಲರೂ ಹೀಗೆಯೇ ಪೂಜಿಸಬೇಕು, ಪೂಜೆಗೆ ಅಗತ್ಯವಾದ ದೇವತೆಯನ್ನು ಹೀಗೆಯೇ ಕಲ್ಪಿಸಿಕೊಳ್ಳಬೇಕು, ದೇವತೆಯಿಂದ ಇಂಥದೇ ಪ್ರತಿಫಲವನ್ನು ಅಪೇಕ್ಷಿಸಬೇಕು, ದೇವತೆಗೆ ಇಂಥದೇ ನೈವೇದ್ಯ ಅರ್ಪಿಸಬೇಕು, ಎಂದೆಲ್ಲ ವಿಧಿಸಲಾದೀತೆ? ಯಾರಿಗೋ ದೇವತೆಯ ಗೊಡವೆಯೇ ಬೇಡವಾದರೆ ನಾವದನ್ನು ಹೇರುವ ಹಕ್ಕನ್ನು ಸಂವಿಧಾನವು ನಮಗೆ ಮಾನ್ಯ ಮಾಡುವುದಿಲ್ಲ. ರಾಷ್ಟ್ರದಲ್ಲಿ ಅನಿಶ್ಚಿತತೆ, ಗಲಭೆ, ಹಿಂಸೆ, ಕೊಲೆ ಮುಂತಾದ ಕ್ರೂರ ಸನ್ನಿವೇಶಗಳನ್ನು ರಚಿಸಿಕೊಳ್ಳುವುದು ರಾಷ್ಟ್ರೀಯತೆ ಎನಿಸಿಕೊಳ್ಳಕೂಡದು. ಅವೆಲ್ಲಾ ನಾವೇ ಅಂಗೀಕರಿಸಿಕೊಂಡಿರುವ ಸಂವಿಧಾನದ ನಿಯಮಗಳಿಗೆ ಹೊರತಾದವು. ನಮ್ಮ ದೇಶದ ಐದು ಸಾವಿರ ವರ್ಷಗಳ ಇತಿಹಾಸದಲ್ಲಿ ಎಂದೂ "ಒಂದೇ ಚಿಂತನೆ, ಒಂದೇ ಆಚರಣೆ" ಎಂಬುದಿರಲಿಲ್ಲ. ಋಗ್ವೇದ, ಉಪನಿಷತ್ತುಗಳು, ಬೌದ್ಧದರ್ಶನ, ಲೋಕಾಯತ ಮತ, ಎಲ್ಲವನ್ನೂ ಕಡೆಗಾಣಿಸಿ "ರೋಡ್ ರೋಲರ್" ಸ್ವಭಾವ ಬೆಳೆದುಬಿಟ್ಟಿದೆ. ವೇದಕಾಲದಲ್ಲಿ ಭಿನ್ನದೃಷ್ಟಿಗಳಿಗೆ, ನಂಬಿಕೆಗಳ ವೈವಿಧ್ಯಗಳಿಗೆ ಕೊರತೆ ಇರಲಿಲ್ಲ. ವೈದಿಕ ಪರಂಪರೆಗೆ ಸಹ ಗೌರವ ನೀಡದ 'ಹಿಂದೂ ಮನಸ್ಸು' ಇನ್ನೇನೇನು ವಿಪತ್ತುಗಳನ್ನು ಉಂಟುಮಾಡಬಹುದೆಂದು ಊಹಿಸಲು ಸಾಧ್ಯವಿಲ್ಲ.

ಇಂದಿನ ಸನ್ನಿವೇಶವು ಎಷ್ಟು ವ್ಯಂಗ್ಯದಿಂದ ಕೂಡಿದೆಯೆಂದರೆ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆಯ ಗಾಢಭಾವನೆಯು ಅಂಕುರಿಸುವಂತೆ ಮಾಡಲು ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದ ಉಪಕುಲಪತಿ ತಮ್ಮ ಆವರಣದಲ್ಲಿ ಭಾರತೀಯ ಸೇನೆಯ ಒಂದು ಟ್ಯಾಂಕನ್ನು ತಂದು ನಿಲ್ಲಿಸುವ ಯೋಜನೆ ಹಾಕಿಕೊಂಡಿದ್ದಾರೆ! ಮುಕ್ತ ಚಿಂತನೆಯಿಂದ ಮೂಡುವ ಚಿಂತನೆಯ ಬದಲು ಟ್ಯಾಂಕನ್ನು ನೋಡುತ್ತಾ ರಾಷ್ಟ್ರೀಯ ಹುರುಪನ್ನು ಮೈಗೂಡಿಸಿಕೊಳ್ಳಬಹುದೆಂಬ ಆಶಯವನ್ನು ಮುಂದಿಡುವುದೇ ಪ್ರಶ್ನಾರ್ಹ. ಅದು 'ಮದ್ದು–ಗುಂಡು ಪ್ರೇರಿತ ರಾಷ್ಟ್ರೀಯತೆ' ಆಗಿಬಿಡುವ ಸಾಧ್ಯತೆ ಹೆಚ್ಚು; ದೇಶದ ಜನರ ಬಾಳ್ವೆ ಮತ್ತು ಪ್ರಗತಿಗೆ ಪ್ರೇರಕಶಕ್ತಿಯಾಗುವ ರಾಷ್ಟ್ರೀಯತೆಯಾಗುವ ಸಾಧ್ಯತೆ ಕಡಿಮೆ. ಬರ್ಟ್ರಂಡ್ ರಸೆಲ್ ರಾಷ್ಟ್ರೀಯತೆಯ ಹೆಸರಿನಲ್ಲಿ ನಡೆಯುವ ವಿಧ್ವಂಸಕ ಕೃತ್ಯಗಳನ್ನು ಕಂಡು ಹೇಸಿಹೋಗಿ ವ್ಯಗ್ರತೆಯಿಂದ ಒಮ್ಮೆ ಉದ್ಗರಿಸಿದ್ದ, "ರಾಷ್ಟ್ರೀಯತೆ ಎಂಬುದು ಸಾಮೂಹಿಕ ಹುಚ್ಚಿಗೆ ಇನ್ನೊಂದು ಹೆಸರು" ಎಂದು. ಸಾಮೂಹಿಕ ಸನ್ನಿಯಿಂದ ಸಂಸ್ಕೃತಿಯು ಭವ್ಯವಾಗಿ ಕಂಗೊಳಿಸಿರುವುದಕ್ಕೆ ವಿಶ್ವದ ಇತಿಹಾಸದಲ್ಲಿ ಒಂದೇ ಒಂದು ದೃಷ್ಟಾಂತವೂ ದಕ್ಕುವುದಿಲ್ಲ.

"ರಾಷ್ಟ್ರೀಯತೆ" ಎಂಬುದನ್ನು ವ್ಯಾಖ್ಯಾನಿಸುವಾಗ ಏಕಮುಖದ ಪ್ರತಿಪಾದನೆಗಳು ನಮ್ಮಲ್ಲಿಲ್ಲ. ಇತ್ತೀಚೆಗಷ್ಟೇ ಸುಮಾರು ೪೫ ಲೇಖನಗಳ ಒಂದು ಸಂಕಲನ ಪ್ರಕಟವಾಗಿದೆ. ಅದರ ಹೆಸರು "ಭಾರತೀಯ ರಾಷ್ಟ್ರೀಯತೆ." ಅದರಲ್ಲಿ ಸುಮಾರು ೪೫ ಲೇಖನಗಳಿವೆ, ೨೩ ಲೇಖಕರಿದ್ದಾರೆ. ಮಹಾದೇವ ಗೋವಿಂದ ರಾನಡೆ, ಬಾಲ ಗಂಗಾಧರ ತಿಲಕ್, ಲಾಲಾ ಲಜಪತ ರಾಯ್, ಶ್ರೀ ಅರವಿಂದ, ರವೀಂದ್ರನಾಥ ಟಾಗೋರ್, ಪ್ರಫುಲ್ಲ ಚಂದ್ರ ರೇ, ಗಾಂಧೀಜಿ, ಸರ್ದಾರ್ ವಲ್ಲಭಭಾಯಿ ಪಟೇಲ್, ಜವಾಹರಲಾಲ್ ನೆಹರು, ಬಿ. ಆರ್. ಅಂಬೇಡ್ಕರ್, ಸುಭಾಸ್ ಚಂದ್ರ ಬೋಸ್, ಭಗತ್ ಸಿಂಗ್, ಎಂ. ಎನ್. ರಾಯ್, ಖಾನ್ ಅಬ್ದುಲ್ ಗಫಾರ್ ಖಾನ್, ಜಯಪ್ರಕಾಶ್ ನಾರಾಯಣ ಮುಂತಾದವರ ಲೇಖನಗಳಿವೆ. ಸಾವರ್ಕರ್ ಮತ್ತು ಶಾಮಪ್ರಸಾದ ಮುಖರ್ಜಿ ಅವರ ಬಗೆಗೂ ಪ್ರಸ್ತಾಪವಿದೆ. ಸಂಕಲನದ ಸಂಪಾದಕರು ಪ್ರೊಫೆಸರ್ ಎಸ್. ಇರ್ಫಾನ್ ಹಬೀಬ್. ಎಷ್ಟು ಮಂದಿ ಲೇಖಕರಿದ್ದಾರೋ ಅಷ್ಟು ಸಂಖ್ಯೆಯ ವ್ಯಾಖ್ಯಾನಗಳಿವೆ: ಅಂದರೆ ರಾಷ್ಟ್ರೀಯತೆಯನ್ನು ಹತ್ತೆರಡಲ ಇಪ್ಪತ್ತು ಎನ್ನುವಂತೆ ನಿಖರವಾಗಿ ಒಂದೇ ರೀತಿಯಲ್ಲಿ ನಿರೂಪಿಸಲಾಗಿಲ್ಲ. ಪೀಠಿಕೆಯ ರೂಪದಲ್ಲಿ ನಾಲ್ಕು ಮಾತುಗಳನ್ನು ಪರಾಮರ್ಶಿಸಿ ಪಿ. ಸಿ. ರೇ, ಸುಭಾಷ್ ಚಂದ್ರ ಬೋಸ್, ಭಗತ್ ಸಿಂಗ್ ಮತ್ತು ಅಂಬೇಡ್ಕರ್ ವಿಚಾರಗಳನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳಲು ಈ ಲೇಖನವು ಯತ್ನಿಸುತ್ತದೆ.

ಆದ್ದರಿಂದಲೇ ಹೆರಾಲ್ಡ್ ಲಾಸ್ಕಿ "ರಾಷ್ಟ್ರೀಯತೆಯು ಸಮಕಾಲೀನ ಪ್ರಪಂಚದಲ್ಲಿ ಅಪ್ರಕೃತ" ಎಂದು ಹೇಳಿದ್ದ. ರಾಷ್ಟ್ರೀಯ ಸ್ವಾತಂತ್ರ್ಯಕ್ಕೆ ಹೋರಾಟ ಆರಂಭವಾದ ದಿನಗಳಲ್ಲಿ ವಸಾಹತುಶಾಹಿಯ ಉಚ್ಚಾಟನೆಯು ರಾಷ್ಟ್ರೀಯತೆಯ ಉದಾತ್ತ ಧ್ಯೇಯವೆಂದು ಬಗೆಯಲಾಗಿತ್ತು. ಎಲ್ಲವನ್ನೂ 'ವಿದೇಶಿ'ಗೊಳಿಸುವುದು ಇಂದಿನ ರಾಷ್ಟ್ರೀಯತೆಯಾಗಿಬಿಟ್ಟಿದೆ. ರಾಷ್ಟ್ರದ ಜನತೆ ಮತ್ತು ರಾಷ್ಟ್ರೀಯ ಆರ್ಥಿಕತೆಗಳಿಗೆ ಆದ್ಯತೆ ಇಲ್ಲದ ರಾಷ್ಟ್ರೀಯತೆಯು ಎಂತಹ ರಾಷ್ಟ್ರೀಯತೆ? ಬ್ರಿಟಿಷರು ನಮ್ಮ ದೇಶವನ್ನು ಆಕ್ರಮಿಸಿದ ಕಾಲದಲ್ಲಿ ನಮ್ಮ ರಾಷ್ಟ್ರದ್ದೆನ್ನಲಾದ ಯಾವ ಹೆಗ್ಗಳಿಕೆಯೂ ಇಲ್ಲವೆಂದು ಆ ರಾಷ್ಟ್ರದ ಚರಿತ್ರೆಕಾರರು ಹೀಯಾಳಿಸುತ್ತಿದ್ದರು. ಜೇಮ್ಸ್ ಮಿಲ್ ಭಾರತವೆಂದೂ ಐಕ್ಯಗೊಂಡ ರಾಷ್ಟ್ರವಾಗಿರಲಿಲ್ಲ, ಪ್ರಜಾಪ್ರಭುತ್ವವಾದಿ ಗಣರಾಜ್ಯವಾಗಿರಲಿಲ್ಲ, ಎಂದು ಅಬ್ಬರಿಸಿದ್ದ; ಬ್ರಿಟಿಷ್ ಆಧಿಪತ್ಯವು ಭಾರತಕ್ಕೆ ತಿರುವು ತಂದಿದೆಯೆಂದೂ ವಾದಿಸಿದ್ದ. ಅದಕ್ಕೆ ಪ್ರತಿಯಾಗಿ ಕೆ. ಪಿ. ಜಯಸ್ವಾಲ್, ಯು. ಎನ್. ಘೋಶಾಲ್, ಆರ್. ಸಿ. ಮಜುಮ್‌ದಾರ್ ಮುಂತಾದವರು ತೀಕ್ಷ್ಣವಾಗಿ ಪ್ರತಿಕ್ರಿಯಿಸಿ ದೇಶದ ರಾಷ್ಟ್ರೀಯತೆಯ ಇತಿಹಾಸವನ್ನು ಕುರಿತು ಅನೇಕ ಪ್ರಸಂಗಗಳನ್ನು ಉದಾಹರಿಸಿದ್ದರು. ಲೋಕಮಾನ್ಯ ತಿಲಕ್ ಋಗ್ವೇದವನ್ನು ಕ್ರಿ.ಪೂ. ೪೦೦೦ದಲ್ಲಿ ರಚಿಸಲಾಗಿತ್ತೆಂದು ವಾದಿಸಿದ್ದರಾದರೂ "ಭಾರತೀಯ ರಾಷ್ಟ್ರೀಯತೆಯು ಇತ್ತೀಚಿನ ಬೆಳವಣಿಗೆ, ಅದಕ್ಕೊಂದು ಸಾರ್ವತ್ರಿಕತೆಯ ಸ್ವರೂಪ ಈಗ ತಾನೆ ಬಂದಿದೆ" ಎಂದು ಪ್ರತಿಪಾದಿಸಿದ್ದರು. "ಸಮಕಾಲೀನ ಭಾರತದಲ್ಲಿ ರಾಷ್ಟ್ರೀಯತೆಯನ್ನು ದೇವತಾಶಾಸ್ತ್ರದ ಮಟ್ಟಕ್ಕೆ ಇಳಿಸಲಾಗಿದೆ, ಅದನ್ನು ವಿಮರ್ಶಾತ್ಮಕವಾಗಿ ಮಾಪನ ಮಾಡುವುದು ದೇಶದ್ರೋಹವೆಂದು ಟೀಕಿಸುವವರೂ ಇದ್ದಾರೆ" ಎಂದು ಇತಿಹಾಸಕಾರನೊಬ್ಬ ಮರುಗಿದ್ದಾನೆ. ಸ್ವಾತಂತ್ರ್ಯ ಗಳಿಕೆಗೂ ಮುಂಚೆ ನೆಹರು ಪ್ರತಿಗಾಮಿ ಶಕ್ತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಟೀಕೆ ಮಾಡಿದ್ದರು : "ಸಂಸ್ಕೃತಿಯ ಹೆಸರಿನಲ್ಲಿ ಜನರ ಮನಸ್ಸನ್ನು ಕುಬ್ಜಗೊಳಿಸಲಾಗುತ್ತಿದೆ. ಹಾಗೆ ಮಾಡುತ್ತಿರುವವರು ನೈಜ ಸಂಸ್ಕೃತಿಯ ವಿರುದ್ಧ ಧ್ರುವದಲ್ಲಿ ನಿಲ್ಲುತ್ತಾರೆ. ಸಂಸ್ಕೃತಿಯು ಮನಸ್ಸು ಮತ್ತು ಜೀವಂತಿಕೆಯನ್ನು ವಿಶಾಲಗೊಳಿಸಬೇಕೇ ವಿನಾ ಅವಕ್ಕೆ ಪ್ರತಿಬಂಧಕಗಳನ್ನು ಒಡ್ಡಬಾರದು." ರಾಷ್ಟ್ರೀಯತೆಯು "ಸಾಮೂಹಿಕ ಸನ್ನಿಗೆ ಮತ್ತೊಂದು ಹೆಸರು" ಎಂದು ಬರ್ಟ್ರಂಡ್ ರಸೆಲ್ ಉದ್ಗರಿಸಿದ್ದುದು ಅವೈಚಾರಿಕ ದೃಷ್ಟಿಯು ರಾಷ್ಟ್ರೀಯತೆಯ ಘನತೆಯನ್ನು ಚ್ಯುತಿಗೊಳಿಸುತ್ತದೆಯೆಂಬ ಕಾರಣಕ್ಕೆ. "ಸ್ವದೇಶೋ ಭುವನತ್ರಯಂ" ಎನ್ನುವುದು ಶ್ಲಾಘನೀಯ ಭಾವನೆಯೇ ಸರಿ. ಆದರೆ ದೇಶಪ್ರೇಮವು ಸಾಂವಿಧಾನಿಕ ಮೌಲ್ಯಗಳನ್ನಾಗಲಿ, ಪ್ರಜಾಪ್ರಭುತ್ವದ ಆಶಯಗಳನ್ನಾಗಲಿ, ನುಚ್ಚುನೂರು ಮಾಡುವಂತಾಗುವುದು ಅಪಾಯಕರ. ಸುರೇಂದ್ರನಾಥ ಬ್ಯಾನರ್ಜಿ, ಎಂ. ಡಿ. ರಾನಡೆ, ಮುಂತಾದವರು ಶತಮಾನಗಳಿಂದ ನಮ್ಮ ಸಮಾಜದಲ್ಲಿ ಮನೆ ಮಾಡಿದ್ದ ಹುಳುಕುಗಳನ್ನು ನಿವಾರಿಸುತ್ತಲೇ ರಾಷ್ಟ್ರೀಯತೆಗೆ ಭದ್ರ ಬುನಾದಿ ಕಲ್ಪಿಸಬೇಕೆಂದು ಶ್ರಮಿಸಿದ್ದವರು. ವಸಾಹತುಶಾಹಿ ವಿರುದ್ಧ ಹೋರಾಟ ನಡೆಸುತ್ತಿದ್ದಾಗ ನಮ್ಮ ದೇಶದಲ್ಲಿ ಪ್ರಮುಖವಾಗಿ ಎರಡು ರೀತಿಯಲ್ಲಿ ರಾಷ್ಟ್ರೀಯತೆಯನ್ನು ವ್ಯಾಖ್ಯಾನಿಸಿಕೊಳ್ಳಲಾಗಿತ್ತು : ಎಲ್ಲರನ್ನೂ ಒಳಗೊಳ್ಳುವ ಉದಾರವಾದಿ ದೃಷ್ಟಿಯ ರಾಷ್ಟ್ರೀಯತೆ ಮತ್ತು ಮತಧರ್ಮಾಧಾರಿತ ರಾಷ್ಟ್ರೀಯತೆ. "ಮೊದಲು ಹಿಂದುವಾಗು, ಆಮೇಲೆ ರಾಷ್ಟ್ರೀಯತೆಯ ಮಾತು" ಎಂಬುದು ಸಾವರ್ಕರ್ ನಿಲುವಾಗಿತ್ತು. ರಾಷ್ಟ್ರೀಯತೆ ಮತ್ತು ದೇಶಭಕ್ತಿ ಸೂತ್ರಗಳನ್ನು "ಪಾಶ್ಚಿಮಾತ್ಯ ರಾಷ್ಟ್ರಗಳಿಂದ ಕಲಿಯಬೇಕಾಗಿಲ್ಲ" ಎಂದಿದ್ದರು ಲಾಲಾ ಲಜಪತ್ ರಾಯ್. ಅವರೊಡನೆ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾಗಿದ್ದ ಬಿಪಿನ್ ಚಂದ್ರ ಪಾಲ್ ಬೇರೆಯದೇ ನೆಲೆಯಲ್ಲಿ ಅದನ್ನು ಪರಾಮರ್ಶಿಸಿದ್ದರು. ಅವರ ಒಂದು ಮಾತನ್ನು ಗಮನಿಸಬೇಕು : "ಮುಸಲ್ಮಾನರ ಆಳ್ವಿಕೆಯಲ್ಲಿ ಹಿಂದು ಮತ್ತು ಮುಸಲ್ಮಾನರಿದ್ದರೂ ಒಂದೇ ಸರ್ಕಾರವನ್ನು ಹೊಂದಿದ್ದರು. ಆದರೆ ಹಿಂದು ಸಂಸ್ಕೃತಿಯ ಅನನ್ಯತೆಗೆ ಧಕ್ಕೆಯುಂಟಾಗಲಿಲ್ಲ... ಕೊಡುಕೊಳೆಯು ಎಲ್ಲ ಧರ್ಮೀಯರಿಗೂ ಮಾನ್ಯವಾಗಿತ್ತು, ಆದರೆ ನಮ್ಮ ವಿಶಿಷ್ಟ ಸಂಸ್ಕೃತಿಯು ಅದರಿಂದ ನಷ್ಟವಾಗಲಿಲ್ಲ. ಇದೇ ನಮ್ಮ ರಾಷ್ಟ್ರೀಯತೆಯ ವೈಶಿಷ್ಟ್ಯ." ಹೀಗೆ ಭಿನ್ನದೃಷ್ಟಿಯವರಾಗಿದ್ದ ಲಾಲ್ ಮತ್ತು ಪಾಲ್ ಸ್ವಾತಂತ್ರ್ಯ ಹೊರಾಟದಲ್ಲಿ ಐಕಮತ್ಯದಿಂದ ಭಾಗವಹಿಸಿದ್ದರೆಂಬುದು ಇತಿಹಾಸ. ರವೀಂದ್ರನಾಥ ಟಾಗೋರ್ ಇವರಿಬ್ಬರ ದೃಷ್ಟಿಗಳನ್ನೂ ಮೀರಿ ತಮ್ಮದೇ ರಾಷ್ಟ್ರೀಯತೆಯ ಮೀಮಾಂಸೆಯನ್ನು ಕಟ್ಟಿಕೊಂಡಿದ್ದರು : "ನಿಜಾರ್ಥದಲ್ಲಿ ರಾಷ್ಟ್ರೀಯತೆಯೆಂಬುದು ನಮ್ಮ ದೇಶದಲ್ಲಿ ಬೇರೂರಿರಲಿಲ್ಲ. ರಾಷ್ಟ್ರವನ್ನು ಪೂಜಿಸಬೇಕೆಂಬ ಮಾತನ್ನು ಚಿಕ್ಕವನಿದ್ದಾಗಿನಿಂದ ನಾನು ಕೇಳುತ್ತಾ ಬಂದಿದ್ದೇನೆ. ದೇವರು ಮತ್ತು ಮಾನವ ಜನಾಂಗಗಳಿಗಿಂತಲೂ ಹಿಂದಾದ್ದು ರಾಷ್ಟ್ರೀಯತೆ ಎಂಬ ಬೋಧನೆಯು ನನಗೆ ಸುಪರಿಚಿತ. ಆ ಬೋಧನೆಯನ್ನು ಮೀರಿ ನಾನು ಬೆಳೆದಿದ್ದೇನೆ. ನಮ್ಮ ದೇಶದ ಜನತೆಯು ತಮ್ಮ ಭಾರತವನ್ನು ಗೆದ್ದುಕೊಳ್ಳಬೇಕಾದರೆ ಅವರು ಮೊದಲಿಗೆ ದೇಶವು ಮಾನವತೆಯೆಂಬ ಭಾವಕ್ಕಿಂತಲೂ ದೊಡ್ಡದೆಂಬ ಶಿಕ್ಷಣದ ಕೊಡುಗೆಯನ್ನು ಹೋರಾಡಿ ಗೆಲ್ಲಬೇಕು."

ಡಾ॥ ಅಂಬೇಡ್ಕರ್ ಅವರು ೧೯೩೦ರ ಅಂತ್ಯದ ವೇಳೆಗೆ ಇಂಡಿಯನ್ ಲೇಬರ್ ಪಾರ್ಟಿ (ದುಡಿಯುವವರ ಪಕ್ಷ) ಸ್ಥಾಪಿಸಿದರು ಮತ್ತು ಅದೇ ಸಮಯದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಕುರಿತು ಒಂದು ಪ್ರಬಂಧ ಪ್ರಕಟಿಸಿದರು. ಅದರಲ್ಲಿ ಅವರ ಕೆಲವು ಮೌಲಿಕ ನಿಲುವುಗಳಿವೆ : "ರಾಷ್ಟ್ರೀಯತೆಯೆಂದರೆ ಪ್ರಾಚೀನ ಕಾಲದ ವೈಭವೀಕರಣ ಮತ್ತು ಆರಾಧನೆಯಲ್ಲ; ಉಗಮ ಮತ್ತು ಬಣ್ಣಗಳು ಸ್ಥಳೀಯವೇ ಆಗಿರಬೇಕೆಂದು ಆಗ್ರಹಿಸಿ ಹಾಗಿಲ್ಲದಿರುವುದನ್ನೆಲ್ಲಾ ಕೈಬಿಡುವುದಲ್ಲ. ಹಾಗೇನಾದರೂ ಭಾವಿಸುವುದಾದರೆ ದುಡಿಯುವ ಜನತೆಯ ರಾಷ್ಟ್ರೀಯತೆಯನ್ನು ಒಂದು ಅಂತರಾಳದ ನಂಬಿಕೆಯನ್ನಾಗಿ ಸ್ವೀಕರಿಸಲಾಗುವುದಿಲ್ಲ. ದುಡಿಯುವವರಿಗೆ, ಗತಿಸಿದವರ ಜೀವಂತ ನಂಬಿಕೆಗಳು ಎಂದು ಜೀವಂತವಾಗಿರುವವರ ಮೃತವಾದ ನಂಬಿಕೆಗಳಾಗಿರಲು ಸಾಧ್ಯವಿಲ್ಲ." ಅಂದರೆ, ಅವರಿಗೆ ರಾಷ್ಟ್ರೀಯತೆಯು ಉದ್ದೇಶಿತ ಗುರಿ ಮುಟ್ಟಲು ಒಂದು ಸಾಧನವೇ ಹೊರತು ಅದೇ ಗುರಿಯಾಗಿರಲಾರದು. ಮತಧರ್ಮೀಯ ನಿಷ್ಠೆಯು ದುಡಿಯುವ ಜನತೆಯ ಏಕೈಕ ಧ್ಯೇಯವಲ್ಲ. ಅಂಬೇಡ್ಕರ್ ಅವರು ಹೀಗೆ ಪ್ರತಿಪಾದಿಸುವುದಕ್ಕೆ ಒಂದೆರಡು ವರ್ಷಗಳ ಮುಂಚಿತವಷ್ಟೇ ಭಗತ್ ಸಿಂಗ್ ರಾಷ್ಟ್ರೀಯತೆಯನ್ನು ಕುರಿತು ಚಿಂತನೆ ನಡೆಸಿದ್ದ. ಭಗತ್ ಸಿಂಗನನ್ನು ಬಾಯಿತುಂಬ ಹೊಗಳುವವರು ಪ್ರದರ್ಶನಕ್ಕಿಡಲು ಹಾಗೆ ಮಾಡುವುದು ಅವನ ಅಪಾರ ನಿಂದನೆಯೇ ಆಗುತ್ತದೆ. ಹೊಗಳುವುದಾದರೆ ಅವನ ಸೈದ್ಧಾಂತಿಕ ನಿಲುವುಗಳನ್ನು ಒಪ್ಪಿ ಅನುಷ್ಠಾನಕ್ಕೆ ತರಬೇಕು. ಅವನ ರಾಷ್ಟ್ರೀಯತೆಯ ಪರಿಧಿಯಲ್ಲಿ ವರ್ಣ ವಿಭಜನೆಯ ಹರಿತವಾದ ವಿಮರ್ಶೆ, ಅಸ್ಪೃಶ್ಯತೆಯ ಸಂಪೂರ್ಣ ನಿರಾಕರಣೆ ಮತ್ತು ಮತೀಯ ಪ್ರತ್ಯೇಕತೆಯ ಖಂಡನೆ, ಎಲ್ಲಾ ಸೇರಿವೆ. ನಮ್ಮ ದೇಶದ ಇಂದಿನ ಸನ್ನಿವೇಶದಲ್ಲಿ ಈ ಮೂರೂ ಎಷ್ಟು ಪ್ರಸ್ತುತವೆಂದು ಬೇರೆ ಹೇಳಬೇಕಾಗಿಲ್ಲ. ಅವನ ಲೇಖನವೊಂದರಲ್ಲಿ ಬರುವ ವಿಶ್ಲೇಷಣೆ ಹೀಗಿದೆ : "...ಬೆರಳೆಣಿಕೆಯಷ್ಟು ಮಂದಿ ಬಂಡವಳಿಗರು ತಮ್ಮ ಲಾಭಬಡುಕತನದಿಂದ ಜನಸಾಮಾನ್ಯರ ದುಡಿಮೆಯ ಶೋಷಣೆಯನ್ನು ಎಷ್ಟು ಕಾಲ ಮುಂದುವರಿಸುತ್ತಾರೋ ಅಷ್ಟು ಕಾಲ ಹೋರಾಟವು ಮುಂದುವರಿಯುತ್ತದೆ. ಶೋಷಕರು ಬ್ರಿಟಿಷರಾಗಿರುತ್ತಾರೋ ಇಲ್ಲವೇ ಬ್ರಿಟಿಷರು ಮತ್ತು ಭಾರತದವರು ಜಂಟಿಯಾಗಿ ಶೋಷಿಸುತ್ತಾರೋ ಅಥವಾ ಕೇವಲ ಭಾರತೀಯರೇ ಆಗಿರುತ್ತಾರೋ ಎಂಬುದರಿಂದ ಏನೂ ವ್ಯತ್ಯಾಸವಾಗುವುದಿಲ್ಲ." ಇದು ಭಗತ್ ಸಿಂಗನ ರಾಷ್ಟ್ರೀಯತೆಯ ಮೂಲಭೂತ ಅಂಶವಾಗಿದೆ. ರಾಷ್ಟ್ರೀಯ ಭಾವನೆಯನ್ನು ಮೈಗೂಡಿಸಿಕೊಳ್ಳಲು ಭಗತ್ ಸಿಂಗ್ ಮತಧರ್ಮದಲ್ಲಿನ ನಿಷ್ಠೆಯನ್ನು ಸರ್ವಥಾ ಗಣನೆಗೆ ತೆಗೆದುಕೊಳ್ಳಲಿಲ್ಲವೆಂಬುದು ಗಮನಾರ್ಹ. ಪ್ರಗತಿಪರವಾದ ರಾಷ್ಟ್ರೀಯತೆಗೆ ಭಗತ್ ಸಿಂಗ್‌ನ ಸೂತ್ರವು ಉಚ್ಚಮಟ್ಟದ್ದೆಂಬುದರಲ್ಲಿ ಸಂಶಯವಿಲ್ಲ.

ನಮ್ಮ ದೇಶದಲ್ಲಿ ರಾಷ್ಟ್ರೀಯತೆಗೆ ನಾಲ್ಕು ಮೂಲಸ್ತಂಭಗಳನ್ನು ಕ್ರಿಯಾತ್ಮಕವಾಗಿ ರಚಿಸಿಕೊಳ್ಳಬೇಕಾದ ಅನಿವಾರ್ಯತೆ ಇದೆ : ಪ್ರಜಾಪ್ರಭುತ್ವ, ಬಹುತ್ವ ಅಥವಾ ಬಹುಮುಖೀ ದೃಷ್ಟಿ , ಧರ್ಮನಿರಪೇಕ್ಷತೆ ಮತ್ತು ಸಾಮಾಜಿಕ ನ್ಯಾಯ. ಇವುಗಳಲ್ಲಿ ಯಾವೊಂದು ಅಂಶವೂ ಹೆಚ್ಚು ಮುಖ್ಯ ಅಥವಾ ಅಮುಖ್ಯವಲ್ಲ. ನಾಲ್ಕೂ ಸ್ತಂಭಗಳು ಅಲುಗಾಡುತ್ತಿರುವ ಸಂದರ್ಭ ಇಂದಿನದಾಗಿದೆಯೆಂಬುದು ಆತಂಕಕಾರಿ ಸಂಗತಿ. ರಾಷ್ಟ್ರೀಯತೆಯನ್ನು ಅಮೂರ್ತ ನೆಲೆಯಲ್ಲಿ ವ್ಯಾಖ್ಯಾನಿಸುತ್ತಾ ಭಾವಪರವಶರಾಗಿಬಿಟ್ಟರೆ ಅದೇ ಅಮೂಲ್ಯ ರಾಷ್ಟ್ರೀಯತೆಯೆಂಬ ಅರ್ಥರಹಿತ ವ್ಯಾಖ್ಯಾನಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಗುರೂಜಿ ಎಂದು ಪ್ರಸಿದ್ಧರಾಗಿದ್ದ ಎಂ. ಎಸ್. ಗೋಲ್ವಾಲ್ಕರ್ ಗುಲಗುಂಜಿಯಷ್ಟು ತೂಕವೂ ಇಲ್ಲದ ವ್ಯಾಖ್ಯಾನಗಳನ್ನು ನೀಡಿರುವುದುಂಟು. ಅವುಗಳಲ್ಲಿ ಒಂದನ್ನು ಮಾತ್ರ ಪ್ರಸ್ತಾಪಿಸಬಹುದು. ಅವರ ಮಾತುಗಳನ್ನು ಮೂಲದಲ್ಲಿರುವಂತೆ ಉದ್ಧರಿಸುವ ಬದಲು ಅವನ್ನು ಸಂಗ್ರಹಿಸುವುದು ಉತ್ತಮವೆಂದು ತೋರುತ್ತದೆ. ಅವರ ಪ್ರಕಾರ ಅತಿಶ್ರೇಷ್ಠ ಸಂಸ್ಕೃತಿಯನ್ನುಳ್ಳ ಭಾರತದಲ್ಲಿ ಜನಿಸಿದರೆ ಮಾತ್ರ ಮೋಕ್ಷವು ಲಭ್ಯವಾಗಬಹುದು. ಅಂದರೆ, ನಮ್ಮ ರಾಷ್ಟ್ರವು ಅಷ್ಟು ಭವ್ಯವಾದ್ದು.

ಅಂತಹ ಮಹಾತ್ಮೆಯುಳ್ಳ ದೇಶವನ್ನು ಭಾವುಕತೆಯಿಂದ ಆರಾಧಿಸುವುದೇ ರಾಷ್ಟ್ರೀಯತೆಯ ಅತ್ಯುನ್ನತ ಲಕ್ಷಣ. – ಯಾವ ಜೀವಂತ ಸಮಸ್ಯೆಯೂ ಇದರಲ್ಲಿ ಗಣನೆಗೆ ಬರುವುದಿಲ್ಲ, ಎಳ್ಳುಕಾಳಿನಷ್ಟು ವೈಚಾರಿಕತೆಯೂ ಇದರಲ್ಲಿಲ್ಲ. ಬಹಳ ಹೆಚ್ಚೆಂದರೆ ಅದು ನಮ್ಮ ಜನಸಂಖ್ಯೆಯ ಬಾಹುಳ್ಯಕ್ಕೆ ಒಂದು ಅವಲಕ್ಷಣದ ವಿವರಣೆ ನೀಡಿದಂತಾಗುತ್ತದೆ ಅಷ್ಟೆ. ಮೋಕ್ಷಾರ್ಥಿಗಳೆಲ್ಲಾ ನಮ್ಮ ಈ ಭೂಮಿಯಲ್ಲೇ ಜನಿಸಬೇಕಾಗಿರುವುದರಿಂದ ನಮ್ಮ ಜನಸಂಖ್ಯೆಯು ಅಗಾಧವಾಗಿ ಬೆಳೆಯುತ್ತಿದೆಯೆಂಬುದು ಆ ವಿವರಣೆ. ಅದರಲ್ಲೂ ರಾಷ್ಟ್ರೀಯತೆಯ ಲೇಪವೇನೂ ಇಲ್ಲ. ಗೋಲ್ವಾಲ್ಕರ್ ಬಣದ ರಾಷ್ಟ್ರೀಯತೆಯ ವ್ಯಾಖ್ಯಾನಕ್ಕೆ ಇನ್ನೊಂದು ಮುಖವಿದೆ. ವೇದಕಾಲೀನ ಸಮಾಜದ ತಥಾಕಥಿತ ಮೌಲ್ಯಗಳನ್ನು ಆದರ್ಶೀಕರಿಸುವುದು ಮತ್ತು ಮಧ್ಯಕಾಲೀನ ಸಂದರ್ಭದ ಆಕ್ರಮಣಗಳನ್ನು ನಮ್ಮ ದೇಶದ ಅಧೋಗತಿಗೆ ಕಾರಣವನ್ನಾಗಿಸುವುದು ಅದರ ಸಾರಾಂಶ. ವೇದಕಾಲೀನ ಸಮಾಜದಲ್ಲಿ ದಸ್ಯುಗಳು, ಪಣಿಗಳು ಮುಂತಾದ ಬುಡಕಟ್ಟುಗಳ ಜನರ ದಮನವು ಹೇರಳವಾಗಿತ್ತು. ಅದಕ್ಕೆ ಮರುಗದೆ ಅದೊಂದು ಅದ್ಭುತ ಜಗತ್ತೆಂದು ನಲಿದಾಡುವುದು ಅನೈತಿಹಾಸಿಕ ದೃಷ್ಟಿಯಾಗುತ್ತದೆ. ವೇದಕಾಲದ ಮರುಸೃಷ್ಟಿಯು ಕನಸಿನ ಲೋಕದಲ್ಲಷ್ಟೇ ವಿಹರಿಸುವವರಿಗೆ ಮಾತ್ರ ಸಾಧ್ಯ. ಇನ್ನು ಮಧ್ಯಕಾಲೀನ ಭಾರತದ ಇತಿಹಾಸಕ್ಕೆ ಬಂದರೆ, ಆಕ್ರಮಣಗಳು ಘೋರವಾಗಿದ್ದವೆಂಬುದು ಕಟುವಾಸ್ತವ. ಅಂದಿನ ಪರಿಸ್ಥಿತಿಗೆ ಆಕ್ರಮಣಕಾರರ ಧೂರ್ತತನ ಮಾತ್ರ ಕಾರಣವಾಗಿತ್ತೆ ಅಥವಾ ನಮ್ಮ ದೇಶದ ಆಂತರಿಕ ಸಾಮಾಜಿಕ ವಿಭಜನೆ ಮತ್ತು ಆಯುಧ ತಂತ್ರಜ್ಞಾನದ ಕೊರತೆಯೂ ಕಾರಣವಾಗಿತ್ತೆ? ಜೊತೆಗೆ, ನಮ್ಮ ದೇಶದ ಅಂದಿನ ಜನರು ಏನೂ ಪ್ರತಿರೋಧ ಒಡ್ಡಲೇಇಲ್ಲವೆಂಬುದು ಸರಿಯಲ್ಲ. ಇನ್ನೂ ಹೆಚ್ಚಿನ ಪ್ರತಿರೋಧವು ಸಾಧ್ಯವಾಗದುದಕ್ಕೆ ಕಾರಣಗಳನ್ನು ಕಂಡುಕೊಳ್ಳಬೇಕು. ಅಂದಿನ ಸೋಲಿಗೆ ಇಂದು ಪ್ರತೀಕಾರಕ್ಕೆ ಹಾತೊರೆಯುವುದು ರಾಷ್ಟ್ರೀಯತೆಯ ಲಕ್ಷಣವಾಗುವುದಿಲ್ಲ; ಬದಲಾಗಿ ಅದು ಬಾಲಿಶ ವರ್ತನೆಯಾಗುತ್ತದೆ.

ಒಟ್ಟಿನಲ್ಲಿ, ರಾಷ್ಟ್ರೀಯತೆಯನ್ನು ವ್ಯಾಖ್ಯಾನಿಸಿಕೊಳ್ಳುವಾಗ, ಅನುಷ್ಠಾನಕ್ಕೆ ತರುವಾಗ ಮತ್ತು ನಮ್ಮ ಸಹ–ನಾಗರಿಕರೊಡನೆ ಬೆರೆತು ದೇಶದ ಆಗುಹೋಗುಗಳಿಗೆ ಮತ್ತು ಪ್ರಗತಿಗೆ ಐಕ್ಯತೆಯಿಂದ ಶ್ರಮಿಸುವಾಗ ಅಪೇಕ್ಷಣೀಯ ಮತ್ತು ಅನಪೇಕ್ಷಣೀಯ ಅಂಶಗಳನ್ನು ಸ್ಪಷ್ಟವಾಗಿ ಗುರುತಿಸಿಕೊಳ್ಳುವುದು ಅತ್ಯವಶ್ಯಕ. ಪೂರಕವಾದುವನ್ನು ಪೋಷಿಸುವುದು ಮತ್ತು ಮಾರಕವಾದುವನ್ನು ದೂರ ಮಾಡುವುದು ಆರೋಗ್ಯಕರ ವಾತಾವರಣ ಮತ್ತು ಬಾಂಧವ್ಯದ ನಿರ್ಮಿತಿಗೆ ಅಮೂಲ್ಯ ಸಾಮಗ್ರಿ. ಆ ದಿಕ್ಕಿನಲ್ಲಿ ಸಾಗಲು ಅನುಕೂಲ ಕಲ್ಪಿಸಬಹುದಾದ ಚಿಂತನೆಯ ಮಾದರಿಯಾಗಿ ನಾಲ್ಕು ಶ್ರೇಷ್ಠರ ವಿಶ್ಲೇಷಣೆಯನ್ನು ಸಂಕ್ಷಿಪ್ತವಾಗಿ ನೀಡಲಾಗುತ್ತದೆ. ಇವರು ಮುಖ್ಯರು, ಇತರರು ಗೌಣ, ಎಂಬ ದೃಷ್ಟಿಯಿಂದ ಇದನ್ನು ಪರಿಶೀಲಿಸಬಾರದು; ಬದಲಾಗಿ, ವಿವಿಧ ದೃಷ್ಟಿಗಳನ್ನು ಏಕತ್ರ ಸಮನ್ವಯಗೊಳಿಸಿಕೊಳ್ಳುವುದು ಹೇಗೆಂಬುದಕ್ಕೆ ಆದ್ಯತೆ ಇರಬೇಕು.

**೧) ಪ್ರಫುಲ್ಲ ಚಂದ್ರ ರೇ : ಸಮ್ಮಿಶ್ರಿತ ಸಂಸ್ಕೃತಿ ಮತ್ತು ರಾಷ್ಟ್ರೀಯತೆ**

ಇಂದಿನ ಭಾರತದಲ್ಲಿ ಸಮ್ಮಿಶ್ರಣಗೊಂಡ ರಾಷ್ಟ್ರೀಯ ವಿಭಾಗಗಳಿವೆ; ಕೆಲವರು ಅದನ್ನು ವಿಜಾತೀಯವೆಂದು ಹೇಳುವುದುಂಟು. ಆದರೆ ಎಲ್ಲ ವಿಭಾಗಗಳೂ ನಮ್ಮ ತಾಯ್ನಾಡಿಗೆ ಸಮಾನವಾದ ನಿಷ್ಠೆಯನ್ನು ಹೊಂದಿವೆಯೆಂಬುದು ಮುಖ್ಯ. ವಿಭಾಗಗಳು ದೊಡ್ಡವು ಅಥವಾ ಚಿಕ್ಕವು ಎಂಬುದು ತಾರತಮ್ಯಕ್ಕೆ ಕಾರಣವಾಗಬಾರದು. ಹಿಂದುಗಳು ಮತ್ತು ಮುಸಲ್ಮಾನರು ಸೌಹಾರ್ದತೆಯನ್ನು ಸಾಧಿಸಿದರೆ




ಎಷ್ಟೊಂದು ಬಾರಿ ಸೋತಿದ್ದೇನೆ
ಲೆಕ್ಕವಿಲ್ಲ:
ಸೋಲು ಕೂಡಾ ಅಸ್ತ್ರವಾಗಿದೆ;
ಗೆಲ್ಲುವಾಸೆ ಉಳಿದಿಲ್ಲ
ಸೋಲು ಗೆಲುವುಗಳೆರಡೊಂದಾಗಿ
ಅಂತರಂಗದೊಳಗೆ ಸುಪ್ತವಾಗಿವೆ!

• ಗೋಪಿ •
ಹಿರೇಬೆಟ್ಟು

ಭಾರತೀಯ ರಾಷ್ಟ್ರೀಯತೆಯು ಖಂಡಿತವಾಗಿಯೂ ಸಿದ್ಧಿಸುತ್ತದೆ, ಇತರ ವಿಭಾಗಗಳೂ ಇದರಲ್ಲಿ ಕೈ ಜೋಡಿಸುತ್ತವೆ. ಮುಸಲ್ಮಾನರು ಹೇಗೆ ನಮ್ಮ ದೇಶದಲ್ಲಿ ಕಾಲಿರಿಸಿದರು ಎಂಬುದು ಸಾಕಷ್ಟು ಹಿಂದಿನ ಕಾಲದ ವಿಷಯ. ಎಷ್ಟು ಕಾಲದಿಂದ ಅವರು ಮತ್ತು ಹಿಂದುಗಳು ಭ್ರಾತೃತ್ವದಿಂದ ಹೆಜ್ಜೆ ಹಾಕಿದ್ದಾರೆಂಬುದು ಹೆಚ್ಚು ಮುನ್ನೆಲೆಗೆ ಬರುತ್ತದೆ. ಅವರೆಲ್ಲರ ಜೀವನ, ಆಸಕ್ತಿ ಮತ್ತು ಆಶಯಗಳು ಗಾಢವಾಗಿ ಬೆಸೆದಿವೆ. ಭಾರತವು ತಮ್ಮ ಮಲತಾಯಿಯೆಂದೇನಾದರೂ ಮುಸಲ್ಮಾನರು ಭಾವಿಸಿಕೊಂಡರೆ ಅದು ತಪ್ಪು ನಡೆ; ಅವರ ಹಿತವು ಬೇರೆಲ್ಲೋ ಊರ್ಜಿತವಾಗುವುದೆಂದು ಕಲ್ಪಿಸಿಕೊಳ್ಳುವುದು ಅಶಕ್ಯ. ಎಷ್ಟೋ ಶತಮಾನಗಳ ನಂತರ ಈಗ ಅದು ಊಹಾತೀತ ಕೂಡ. ಇಂದಿನ ಇಂಗ್ಲಿಷರಿಗೆ ಪೂರ್ವಜನು ವಿಲಿಯಂ, ಅವನು ಫ್ರಾನ್ಸಿನವನಾಗಿದ್ದ ಮತ್ತು ಇಂಗ್ಲೆಂಡನ್ನು ಗೆದ್ದುಕೊಂಡ. ಹಾಗೆಂದು ಇಂಗ್ಲಿಷರು ಫ್ರಾನ್ಸಿಗೆ ತಮ್ಮ ನಿಷ್ಠೆಯನ್ನು ತೋರುವುದಿಲ್ಲ. ಆರ್ಯರು ನಮ್ಮ ದೇಶಕ್ಕೆ ಬಂದದ್ದು ಮಧ್ಯ ಏಷ್ಯಾದಿಂದ, ಆದರೆ ಅವರು ಮಧ್ಯ ಏಷ್ಯಾಕ್ಕೆ ನಿಷ್ಠೆ ತೋರುವುದಿಲ್ಲ; ಮುಸಲ್ಮಾನರು ನಮ್ಮ ದೇಶದಲ್ಲಿ ಹೊರಗಿನವರಂತೆ ಜೀವಿಸಿಲ್ಲ. ನಮ್ಮ ದೇಶದ ಕಲೆ, ವಾಸ್ತುಶಾಸ್ತ್ರ, ಸಂಗೀತ, ಸಾಹಿತ್ಯ ಮುಂತಾದವುಗಳಿಗೆ ಅವರ ಕೊಡುಗೆ ಇದೆ. ಭಾರತೀಯ ಸಂಸ್ಕೃತಿಯೆಂಬ ವಸ್ತ್ರಕ್ಕೆ ಬಣ್ಣ ಬಣ್ಣದ ಎಷ್ಟೋ ನೂಲುಗಳನ್ನು ಅವರು ಕೂಡಿಸಿದ್ದಾರೆ. ಕುತುಬ್ ಮಿನಾರ್, ಸಿಕಿಂದ್ರ, ತಾಜಮಹಲ್ ಅಷ್ಟೇ ಅವರ ಕೊಡುಗೆಯಲ್ಲ. ಹಿಂದು–ಮುಸಲ್ಮಾನ ಸೋದರತ್ವವು ಇಂದು–ನಿನ್ನೆಯದಲ್ಲ, ವಿದೇಶದ ವಸಾಹತುಶಾಹಿಯನ್ನು ಜಂಟಿಯಾಗಿ ವಿರೋಧಿಸಿರುವುದು ಮಾತ್ರವೇ ಅದರ ಮೂಲ ಲಕ್ಷಣವಲ್ಲ. ಬೇಕೆಂದೇ ಬ್ರಿಟಿಷರು ಅದನ್ನು ಕೇಂದ್ರೀಕರಿಸಿ ವಿಶ್ಲೇಷಣೆ ನೀಡಿದ್ದಾರೆಂಬುದನ್ನು ಗಮನಿಸಬೇಕು. ಮುಸಲ್ಮಾನ ದೊರೆಗಳ ಮತ್ತು ಸಾಮ್ರಾಟರ ಪ್ರಸಿದ್ಧ ಸೇನಾಧಿಕಾರಿಗಳಲ್ಲಿ ಅದೆಷ್ಟು ಮಂದಿ ಹಿಂದುಗಳಿದ್ದಾರೆ, ಎಷ್ಟು ಮಂದಿ ಖ್ಯಾತ ಸಚಿವರಿದ್ದಾರೆ, ಲೇವಾದೇವಿಗಾರರಿದ್ದಾರೆ, ಅಲ್ಲವೆ? ಬ್ರಿಟಿಷರು ಒಬ್ಬ ಸಿನ್ಹನನ್ನು 'ಲಾರ್ಡ್' ಮಾಡಿದ್ದರು, ಆದರೆ ಮುಸಲ್ಮಾನರ ಆಳ್ವಿಕೆಯಲ್ಲಿ ಎಷ್ಟೊಂದು ಸಿನ್ಹರಿದ್ದಾರೆ, ನೋಡಿ: ಮಾನಸಿಂಗ್, ಜಸ್ವಂತ್ ಸಿಂಗ್, ಜೈಸಿಂಗ್ ಇತ್ಯಾದಿ. ಯೂರೋಪಿಯನ್ನರು ಮೊಹಮ್ಮದ್ ತುಘಲಕ್ ಮತ್ತು ಅಲ್ಲಾವುದ್ದೀನ ಖಿಲ್ಜಿ ಇಬ್ಬರನ್ನು ಹೆಸರಿಸಿ ಧೂರ್ತತನವನ್ನು ಗುರುತಿಸುತ್ತಾರೆ. ನಾನು ಸ್ಕಾಟ್ಲೆಂಡಿನ ಎಡಿನ್‌ಬರೋದಲ್ಲಿ ವಿದ್ಯಾರ್ಥಿಯಾಗಿದ್ದಾಗಿನಿಂದ ಗಮನಿಸಿದ್ದೇನೆ. ಇಂಗ್ಲಿಷರು ಮತ್ತು ಸ್ಕಾಟಿಷ್ ಜನರ ನಡುವಿನ ಬಾಂಧವ್ಯಕ್ಕಿಂತಲೂ ಉತ್ತಮವಾದ ಬಾಂಧವ್ಯವು ನಮ್ಮ ದೇಶದ ಹಿಂದು–ಮುಸಲ್ಮಾನರಲ್ಲಿದೆ. ಮುಸಲ್ಮಾನರ ತುಷ್ಟೀಕರಣಕ್ಕೆಂದು ನಾನು ಈ ಮಾತು ಹೇಳುತ್ತಿಲ್ಲ.

ಇಂಗ್ಲೆಂಡಿನ ರಾಣಿ ತನ್ನ ಪ್ರಜೆಗಳನ್ನು ಬೆಂಕಿಗೆ ತಳ್ಳಿ ಕೊಲ್ಲುತ್ತಿದ್ದ ಕಾಲದಲ್ಲಿ ಅಕ್ಬರ್ ನಮ್ಮ ದೇಶದಲ್ಲಿ ಮೌಲ್ವಿ, ಪಂಡಿತ, ರ್‍ಯಾನ್ ಬೈ ಪಾದ್ರಿಗಳನ್ನು ಕರೆಸಿಕೊಂಡು ಮುಕ್ತ ಚರ್ಚೆಗಳನ್ನೇರ್ಪಡಿಸುತ್ತಿದ್ದ. ಔರಂಗಜೇಬನನ್ನು ನೋಡಿ ಬೇರೆಲ್ಲ ಸೌಹಾರ್ದ ಪರಂಪರೆಗಳನ್ನು ತಳ್ಳಿಹಾಕಲಾಗುವುದಿಲ್ಲ. ಔರಂಗಜೇಬನ ಸೇನಾಧಿಕಾರಿಗಳಲ್ಲಿ ಜಸೋವಂತ ಸಿನ್ಹ ಮತ್ತು ಜೈಸಿಂಗ್ ಇದ್ದರೆಂಬುದನ್ನು ಮರೆಯಬೇಡಿ. ಇಪ್ಪತ್ತನೆಯ ಶತಮಾನದ ಉದಾರವಾದಿ ಸಹನೆಯ ಹಿನ್ನೆಲೆಯಲ್ಲಿ ನಮ್ಮ ದೇಶದ ಮಧ್ಯಕಾಲೀನ ಯುಗದ ಮುಸಲ್ಮಾನ ಆಳ್ವಿಕೆಯನ್ನು ಮಾಪನ ಮಾಡುವುದಿದ್ದರೆ ಅದೇ ಕಾಲದಲ್ಲಿ ಕ್ರೈಸ್ತ ಸಮುದಾಯವು ಯೂರೋಪಿನಲ್ಲಿ ಹೇಗೆ ವರ್ತಿಸುತ್ತಿತ್ತೆಂಬುದನ್ನು ನೋಡಬೇಕು. ಎಷ್ಟು ಹಿಂಸಾತ್ಮಕ ಕಾರ್ಯಾಚರಣೆಗಳು ಇನ್‌ಕ್ವಿಸಿಷನ್ ಹೆಸರಿನಲ್ಲಿ ನಡೆದವು, ಜೀವಂತ ಸುಡಲ್ಪಟ್ಟವರೆಷ್ಟು ಮಂದಿ, ಲೆಕ್ಕ ಮಾಡಿ ನೋಡಿ. ಕ್ರಾಮ್‌ವೆಲ್‌ನು ದ್ರೋಘೇದ

ಎಂಬ ಒಂದು ಜಾಗದಲ್ಲೇ ಸಾವಿರಾರು ಮಂದಿಯನ್ನು ಕೊಂದುಹಾಕಿದ್ದ ಮತ್ತು ಮಿಲ್ಟನ್ ಅವನನ್ನು ಶ್ಲಾಘಿಸಿದ್ದ! ನಮ್ಮ ದೇಶಕ್ಕೆ ಬಂದಿದ್ದ ಶೇರ್ ಶಹ ಒಬ್ಬ ಪಠಾಣ. ಅವನು ಹಿಂದುಗಳನ್ನು ಹೇಗೆ ನಡೆಸಿಕೊಂಡ, ಸಾರ್ವಜನಿಕ ಸೇವೆಗಳನ್ನು ವಿಸ್ತರಿಸಿದ, ಎಂಬುದಕ್ಕೆ ನಿದರ್ಶನಗಳು ಹತ್ತಾರಿವೆ. ಇಂಗ್ಲಿಷ್ ಇತಿಹಾಸಕಾರ ಡಬ್ಲ್ಯು. ಕ್ರೂಕ್ಸ್ ಹೇಳುತ್ತಾನೆ, "ಜನತಾ ಆಶಯಗಳಿಗೆ ಅನುಗುಣವಾಗಿ ಸಾಮ್ರಾಜ್ಯವನ್ನು ಕಟ್ಟಿದವರಲ್ಲಿ ಅವನು ಮೊದಲಿಗ" ಎಂದು. ಕೇನ್ ಹೇಳುತ್ತಾನೆ, "ಬ್ರಿಟಿಷರೂ ಸೇರಿದಂತೆ ಯಾರೂ ಆ ಪಠಾಣನಷ್ಟು ಧೀಮಂತಿಕೆ ತೋರಲಿಲ್ಲ" ಎಂದು. ಯೂರೋಪಿನ ಹಾಡ್ರಿಯನ್, ಆಂಟೋನಿಯಸ್ ಪಯಸ್ ಮತ್ತು ಮಾರ್ಕಸ್ ಅರೀಲಿಯಸ್‌ಗೆ ಸಮಾನರು ಬಾಬರ್, ಹುಮಾಯೂನ್ ಮತ್ತು ಅಕ್ಬರ್.

ಹಿಂದು-ಮುಸಲ್ಮಾನ ಐಕ್ಯತೆ, ವಿಚಾರಗಳ ಸಮ್ಮಿಲನ ಮತ್ತು ಪರಂಪರೆಗಳು ಕೇವಲ ರಾಜಕೀಯ ಕ್ಷೇತ್ರಕ್ಕೆ ಸೀಮಿತವಾಗಿಲ್ಲ. ಸಾಮಾಜಿಕ ಸಂರಚನೆಯ ಬೇರೆ ಸ್ತರಗಳಿಗೂ ಅದು ವ್ಯಾಪಿಸಿದೆ, ವಿಶೇಷತಃ ಸಾಮಾಜಿಕ ಮತ್ತು ಮತ ಧಾರ್ಮಿಕ ಕ್ಷೇತ್ರಗಳಿಗೆ. ಗುರು ನಾನಕ್, ಕಬೀರ್, ಚೈತನ್ಯ ಇಂಥವರು ಅದರ ಪ್ರತಿಫಲನವೇ. ಬೇರೆ ಬೇರೆ ಮತಧರ್ಮಗಳ ನಡುವಣ ಪರಸ್ಪರ ಸಂಪರ್ಕಗಳ ಸೂಚಕ ಇದು. ಬಂಗಾಳದ ಮುಸಲ್ಮಾನ ದೊರೆ ಹುಸೇನ್ ಶಾನನ್ನು ವಿದ್ಯಾಪತಿ "ಐದು ಗೌಡ ಸಮುದಾಯಗಳ ಪ್ರಭು" ಎನ್ನುವುದು ಸಾಮಾನ್ಯವಲ್ಲ. ಹಿಂದು ವ್ಯವಸ್ಥೆಯ ಜಾತಿ ವಿಂಗಡಣೆಯ ಮೇಲೆ ಇಸ್ಲಾಂ ಪ್ರಭಾವವು ಇದರಲ್ಲಿ ವ್ಯಕ್ತವಾಗಿದೆ. ಮುಸಲ್ಮಾನರು ಹಿಂದುಗಳ ಪೂಜೆಗಳಲ್ಲಿ, ಸಾಮಾಜಿಕ ಹಬ್ಬಗಳಲ್ಲಿ, ಪಾಲ್ಗೊಳ್ಳುವುದೂ ಇದೆ. ಈ ರೀತಿಯ ಸೌಹಾರ್ದತೆ ಎಷ್ಟು ವ್ಯಾಪಕವಾಗಿದೆಯೆಂದರೆ ಅದರಲ್ಲೀಗ ನಮಗೆ ವಿಶೇಷತೆಯೇನೂ ಕಾಣುವುದಿಲ್ಲ. ಆದ್ದರಿಂದಲೇ ಯಾವುದಾದರೂ ಹುಳಿ ಹಿಂಡುವ ಕೆಲಸವನ್ನು ಮಾಡುವವರನ್ನು ನೋಡಿದಾಗ ನಾವು ಉದ್ವಿಗ್ನರಾಗುತ್ತೇವೆ. ಮುಸಲ್ಮಾನರ ಹಿತಾಸಕ್ತಿಗಳು ಬೇರೆ, ಹಿಂದೂಗಳದ್ದು ಬೇರೆ ಎಂದು ಭಾವಿಸುವವರು ಕೆಲವೊಮ್ಮೆ ಮುಸಲ್ಮಾನರು ಭಾರತಕ್ಕೆ ನಿಷ್ಠರಾಗಿರುವುದೇ ಕೂಡದು ಎನ್ನುವ ಮಟ್ಟಕ್ಕೆ ಹೋಗಿಬಿಡುತ್ತಾರೆ. ನಮ್ಮೆಲ್ಲ ಮತಸ್ಥರ ತಾಯಿಯಾದ ಭಾರತಕ್ಕೆ ಇದು ಅಪಚಾರವೇ ಸರಿ. ನಾವೆಲ್ಲರೂ ಭಾರತೀಯರು; ಆಮೇಲೆ ಹಿಂದುಗಳು, ಮುಸಲ್ಮಾನರು, ಸಿಖ್ಖರು, ಕ್ರೈಸ್ತರು, ಪಾರ್ಸಿಗಳು ಇತ್ಯಾದಿ. ಫ್ರಾನ್ಸಿನಲ್ಲಿ ರಿಚೆಲ್ಯು ಎಂಬ ಕಾರ್ಡಿನಲ್ ಇದ್ದ ಮತ್ತು ಆತ ರಾಜಕೀಯ ನಾಯಕನೂ ಆಗಿದ್ದ; ಅವನ ನಿಷ್ಠೆಯು ಫ್ರಾನ್ಸಿಗೆತ್ತೇ ವಿನಾ ರೋಮನ್ ಕ್ಯಾಥೋಲಿಕ್ ಚರ್ಚಿಗೆ ಸೀಮಿತವಾಗಿರಲಿಲ್ಲ. ತಾಯ್ನಾಡಿನ ಬಗೆಗಿನ ನಮ್ಮ ನಿಷ್ಠೆಯು ಗಡಿಗಳಾಚೆಗಿನ ದೇಶಭಕ್ತಿಯಾಗಿ ಬೆಳೆಯುವುದಕ್ಕೆ ಅವಕಾಶ ಖಂಡಿತ ಕೂಡದು.

ನಮ್ಮಲ್ಲಿ "ರಾಷ್ಟ್ರೀಯ ಶಿಕ್ಷಣ" ಎಂಬುದು ಸಲ್ಲದ ಅರ್ಥಗಳಿಗೆ ಗುರಿಯಾಗಿದೆ. 'ರಾಷ್ಟ್ರೀಯ' ಎಂದ ತಕ್ಷಣ ಮುಜುಗರಗಳ ಅಲೆಗಳೆದ್ದುಬಿಡುತ್ತವೆ. ರಾಷ್ಟ್ರೀಯ ವೆಂದರೆ ವಿದೇಶೀಯವಾದುವನ್ನೆಲ್ಲಾ ತಳ್ಳಿಹಾಕಬೇಕೆಂಬ ಅಭಿಪ್ರಾಯ ಅನೇಕ ವೇಳೆ ವ್ಯಕ್ತವಾಗುತ್ತದೆ; ಅಂದರೆ, ಪಾಶ್ಚಿಮಾತ್ಯ ನಾಗರಿಕತೆಯ ಅಂಶಗಳನ್ನು ಬಹಿಷ್ಕರಿಸಿ ನಮ್ಮ ದೇಶದವನ್ನು ಮಾತ್ರ ಪುರಸ್ಕರಿಸಬೇಕೆಂಬ ಅಭಿಪ್ರಾಯ. ಇದರಲ್ಲಿ ಎಷ್ಟೋ ವೇಳೆ ವಿವೇಚನೆಯ ಲವಲೇಶವೂ ಇರುವುದಿಲ್ಲ. ಹತ್ತೊಂಬತ್ತನೆಯ ಶತಮಾನದಲ್ಲಿ ಪಾಶ್ಚಿಮಾತ್ಯವಾದುದರ ಆರಾಧನೆಯೇ ನಡೆದುಹೋಯಿತು; ಈಗ ಅದರ ಸ್ಪರ್ಶವೂ ಕೂಡದೆಂಬ ವಲಯ ಬೆಳೆದಿದೆ. ಈ ಪ್ರವೃತ್ತಿಯು ಸಲ್ಲದು. "ಸರಿಯೋ ತಪ್ಪೋ, ನಮ್ಮ ದೇಶಕ್ಕೆ ಬೆಂಬಲ" ಎಂದು ಹೇಳುತ್ತಾ ಬ್ರಿಟನ್ನಿನ ಪ್ರಧಾನಿಯು ಮಹಾಯುದ್ಧಕ್ಕೆ ಕಾರಣನಾದ. "ಬೇರೆಲ್ಲ ದೇಶಗಳಿಗಿಂತಲೂ ಜರ್ಮನಿಗೇ ಮನ್ನಣೆ" ಎಂಬುದು ಇನ್ನೊಂದು ಮಹಾಯುದ್ಧದತ್ತ ವಿಶ್ವವನ್ನು ಕೊಂಡೊಯ್ಯುತ್ತಿದೆ. ಹಿಂದುಗಳ ಒಂದು ಪ್ರಭಾವೀ ವಲಯವು ಈಗ ನಾವು ವೇದ, ರಾಮಾಯಣ, ಮಹಾಭಾರತಗಳ ಕಾಲಕ್ಕೆ ಹಿಂದಿರುಗಬೇಕೆನ್ನುತ್ತಿದೆ. ಮುಸಲ್ಮಾನರ ಒಂದು ವಲಯವು ಇಸ್ಲಾಂನ ಶುದ್ಧ ಸಂಪ್ರದಾಯಗಳಿಗೆ ಶಾಶ್ವತ ಮನ್ನಣೆ ಬೇಕೆಂದು ಆಗ್ರಹಿಸುತ್ತಿದೆ. ಸಾಮಾನ್ಯ ಹಿಂದು ಮತ್ತು ಮುಸಲ್ಮಾನ ವ್ಯಕ್ತಿಗಳನ್ನು 'ರಾಷ್ಟ್ರೀಯ'ವೆಂದರೇನೆಂದು ಕೇಳಿದರೆ ಬಹುಶಃ ಅಸ್ಪಷ್ಟವಾದ ಕೆಲವು ಯಾಂತ್ರಿಕ ಘೋಷಣೆಗಳನ್ನು ನೀಡಿಯಾರು. ಇಂತಹ ಕುಬ್ಜ ರಾಷ್ಟ್ರೀಯತೆ ನಮಗೆ ಬೇಡ; ಅದು ಮಧ್ಯಕಾಲೀನತೆಯ ಲಕ್ಷಣ. ನಾವು ಹಿಂದಕ್ಕೆ ಸರಿಯಲು ಸಾಧ್ಯವಾಗದಂತಹ ರಾಷ್ಟ್ರೀಯ ಜೀವನದ ಹೊಳೆಯಲ್ಲಿ ಈಸುತ್ತಿದ್ದೇವೆ. ನಮ್ಮದೇ ದ್ವೀಪಗಳನ್ನು ರಚಿಸಿಕೊಳ್ಳುವುದು, ಸಾಂಸ್ಕೃತಿಕ ಮೊಂಡುತನವನ್ನು ಬೆಳೆಸಿಕೊಳ್ಳುವುದು, ಯಾವ ಪ್ರಭಾವವೂ ಇಲ್ಲದ ಸ್ವಂತಿಕೆಗಾಗಿ ಹಲುಬುವುದು, ಇವೆಲ್ಲಾ ಮಾರಕ. ಇಡೀ ವಿಶ್ವದ ಚಿಂತನೆಯ ಪರಿಚಯ ಮತ್ತು ಪರಾಮರ್ಶೆ, ನಿರಂತರ ಸಂಪರ್ಕದಿಂದ ಮೌಲ್ಯಯುತವಾದುದರ ಆಯ್ಕೆ, ಅವು ಇಂದಿನ ಅಗತ್ಯ.

ಜಾಮಿಯ ಮಿಲಿಯ ವಿಶ್ವವಿದ್ಯಾಲಯದ ಘಟೀಕೋತ್ಸವದಲ್ಲಿ ಭಾಗಿಗಳಾಗುತ್ತಿರುವ ನನ್ನ ಮುಸಲ್ಮಾನ ಸ್ನೇಹಿತರೆ, ಇಸ್ಲಾಂನ ಪ್ರಜಾಪ್ರಭುತ್ವವಾದಿ ಸಂದೇಶವು ಮಹತ್ವದ್ದು. ಜನಾಂಗ, ಮೈಬಣ್ಣ, ಸಂಪತ್ತು ಇವುಗಳನ್ನಾಧರಿಸಿದ ಪಾಶ್ಚಿಮಾತ್ಯ ಪ್ರಜಾಪ್ರಭುತ್ವವು ನಮಗೆ ಅಷ್ಟು ಮಾನ್ಯವಲ್ಲ. ಹಿಂದು ಸಮಾಜವು ಛಿದ್ರಗೊಂಡಿದೆ, ಮೇಲು-ಕೀಳುಗಳೆಂಬ ವಿಭಜನೆ ಸಾಂದ್ರವಾಗಿದೆ, ನಮ್ಮ ಜಾತಿವ್ಯವಸ್ಥೆಯು ಅನೇಕ ಅಡೆತಡೆಗಳನ್ನು ನಿರ್ಮಿಸಿದೆ. ಹಿಂದು ಸೇವಾ ವಲಯ ಗಳಲ್ಲಿ ಸಹ ಈ ಭೇದಗಳು ವ್ಯವಸ್ಥೆಯಾಗಿ ಪ್ರಕಟಗೊಳ್ಳುತ್ತವೆ. ಮಸೀದಿಗಳಲ್ಲಿ ಅಮೀರ್ ಮತ್ತು ಫಕೀರರು ಒಂದು ಸಾಲಿನಲ್ಲಿ ನಿಂತು ಪ್ರಾರ್ಥನೆ ಸಲ್ಲಿಸುವ ಪದ್ಧತಿಯು ಒಂದು ರೀತಿಯ ಸಮಾನತೆಯ ಪ್ರತಿಪಾದನೆಯಾಗಿದೆ. ಅಂತಹ ಪ್ರಜಾಪ್ರಭುತ್ವವಾದಿ ಸಂಹಿತೆಯು ನಮಗೆ ಅಗತ್ಯವಿದೆ. ಸಮಾನತೆ ಮತ್ತು ಭ್ರಾತೃತ್ವ ನಮ್ಮ ದಾರಿದೀಪಗಳಾಗಬೇಕು. ನಮ್ಮ ದೇಶದ ಎಲ್ಲ ಮತಧರ್ಮಗಳು, ಸಮುದಾಯಗಳು, ಜನಾಂಗಗಳು ಒಟ್ಟಾಗಿ ಭಾರತದ ರಾಷ್ಟ್ರೀಯತೆಯನ್ನು ಹಿಗ್ಗಿಸ ಬೇಕು, ಗಟ್ಟಿಗೊಳಿಸಬೇಕು. ನಮ್ಮ ಶಕ್ತಿ, ಸ್ಥೈರ್ಯ ಮತ್ತು ಸ್ವಾತಂತ್ರ್ಯ ಒಂದು ಕಾಲಕ್ಕೆ ಏಷ್ಯಾದ ಕೀರ್ತಿಯಾಗಿದ್ದವು, ವಿಶ್ವದ ಅದ್ಭುತವಾಗಿದ್ದವು. ನಮ್ಮ ಸ್ವಾತಂತ್ರ್ಯದಲ್ಲಿ ನಾವು ನಲಿಯಬೇಕು, ಸಂಕಷ್ಟದಲ್ಲಿರುವ ದೇಶಗಳನ್ನು ಪಾರುಮಾಡುವ ಸೌಭಾಗ್ಯ ನಮ್ಮದಾಗಬೇಕು. ಅದು ನಮ್ಮ ರಾಷ್ಟ್ರೀಯತೆ, ವಂದೇ ಮಾತರಂ.

*(ಮುಂದುವರಿಯುತ್ತದೆ)*

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ಸುಟ್ಟುಬಿಡಿ



ಅಪಾಯಕಾರಿ ಪುಸ್ತಕಗಳನ್ನು
ಬಹಿರಂಗವಾಗಿ ಸುಡಿರೆಂದು
ಆಡಳಿತವು ಆದೇಶಿಸಿದಾಗ, ಎಲ್ಲೆಡೆಯಿಂದ
ಎತ್ತುಗಳು
ಬಂಡಿಗಟ್ಟಲೆ ಹೊರೆಹೊರೆ ಪುಸ್ತಕಗಳನ್ನು
ಬಯಲುರಿಯತ್ತ ಎಳೆದೊಯ್ದಾಗ,
ಗಡಿಪಾರಾದ ಕವಿ, ಅತಿ ಶ್ರೇಷ್ಠರಲ್ಲೊಬ್ಬ,
ನಿಷಿದ್ಧ ಪುಸ್ತಕಗಳ ಪಟ್ಟಿಯಲ್ಲಿ
ತನ್ನ ಪುಸ್ತಕಗಳ ಹೆಸರೇ ಇಲ್ಲವೆಂದು ಹೌಹಾರಿದ
ತನ್ನ ಮೇಜಿನತ್ತ ಓಡಿ, ಕೋಪದಲಿ ಕೆಂಡಕಾರುತ್ತಾ
ಬರೆದನೊಂದು ಪತ್ರವ ಆಳರಸರಿಗೆ
ಸುಡಿರಿ ನನ್ನ! ಶರವೇಗದಲ್ಲಿ ಓಡುವ ಲೇಖನಿಯಲ್ಲಿ ಗೀಚಿದನು
ಸುಡಿರಿ ನನ್ನ! ಹೀಗೆ ಕಾಡದಿರಿ ನನ್ನ, ಉಳಿಸಬೇಡಿ ನನ್ನ
ನನ್ನ ಪುಸ್ತಕಗಳಲ್ಲಿ ಸದಾ ಸತ್ಯವನ್ನೇ ಬರೆದವನಲ್ಲವೇ ನಾನು ?
ಈಗೇಕೆ ನನ್ನ ಸುಳ್ಳುಗಾರನೆಂದೆಣಿಸುವಿರಿ?
ನಿಮಗಿದೋ ನನ್ನ ಆದೇಶ ! ಸುಡಿರಿ ನನ್ನ !

ಮೂಲ : **ಬರ್ಟೋಲ್ಟ್ ಬ್ರೆಕ್ಟ್**, ಜರ್ಮನ್‌ನಿಂದ ಕನ್ನಡಕ್ಕೆ : **ಮೈತ್ರಿ**
ಬೆಂಗಳೂರು



ಉಕ್ಕಿದ ಪಯಸ್ವಿನಿ ನದಿ ದಾಟಿಸಲು ನೆರವು



ಜಾರಿದ ಕಟ್ಟಡ ಸಂಕೀರ್ಣ

# ಕೊಡಗಿನ ನೆಲ–ಜಲದ ದುರಂತ ದೂಷಿಸುವುದು ಯಾರನ್ನ?

ಈ ಆಗಸ್ಟ್, ಕೊಡಗಿಗೆ ದುರಂತದ ತಿಂಗಳು. ವಾಡಿಕೆ ಮಳೆಗಿಂತ ಸುಮಾರು ಎರಡು ಪಟ್ಟು ಮಳೆ; ಒಂದೂವರೆ ತಿಂಗಳಲ್ಲಿ ನದಿ, ತೊರೆಗಳೆಲ್ಲ ಹುಚ್ಚೆದ್ದು ಹರಿದು ಕೊಡಗಿನವರ ಬಹಳಷ್ಟು ಮಂದಿಯ ಬದುಕನ್ನು ಮೂರಾಬಟ್ಟೆ ಮಾಡಿತು. ಇದೇ ಮಳೆ ನೆಲ ಕುಸಿಯಲು ಪ್ರೇರಕವಾಗಿ ಸಂಕಟದ ಹೊಸ ಅಧ್ಯಾಯ ಬರೆಯಿತು. ಕಾವೇರಿ ಹುಟ್ಟುವ ಭಾಗಮಂಡಲ ಜಲಾವೃತವಾಗಿ ಹಿಂದೆಂದೂ ಕಾಣದಿದ್ದ ದೃಶ್ಯ ಥಟ್ಟೆಂದು ಕಂಡು ಬಂತು.

ಉಡುಪಿಯ ಕಾರ್ಕಳ ತಾಲ್ಲೂಕಿನ ಅನೇಕ ಭಾಗಗಳಲ್ಲಿ ಕಲ್ಲು ಗಣಿಗಳ ಕಾರ್ಯಾಚರಣೆಯಿಂದಾಗಿ ಕುಡಿಯುವ ನೀರು ಕಲುಷಿತವಾಗಿದೆ ಎಂದು ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಹೈಕೋರ್ಟ್ ಕೈಗೆತ್ತಿಕೊಂಡು ಕಡಕ್ಕಾಗಿ ಎಚ್ಚರಿಕೆ ನೀಡಿತು. ಈ ಎಚ್ಚರಿಕೆ ಕೊಡಗಿಗೂ ಅನ್ವಯಿಸುತ್ತಾದ್ದರಿಂದ ಇಲ್ಲಿ ಅದರ ಪ್ರಸ್ತಾಪ ಪ್ರಸ್ತುತ. ಹೈಕೋರ್ಟ್ ಮುಖ್ಯ ನ್ಯಾಯಾಧೀಶರಾದ ದಿನೇಶ್ ಮಾಹೇಶ್ವರಿ ಅವರ ಎಚ್ಚರಿಕೆಯ ಮಾತುಗಳು ಇವು : 'ಇವೆಲ್ಲವೂ ರಾತ್ರೋರಾತ್ರಿ ಆದಂಥವಲ್ಲ, ಅನೇಕ ವರ್ಷಗಳಿಂದ ಈ ಭಾಗದಲ್ಲಿ ನೆಲದ ಅವನತಿ ಆಗುತ್ತಿರುವುದು ಸ್ಪಷ್ಟವಾಗಿದೆ. ಭೂಕಂಪನವಾದರೆ ಅದು ದಿಢೀರೆಂದು ಆಗುತ್ತದೆ; ಅರ್ಥ ಮಾಡಿಕೊಳ್ಳಬಹುದು. ಆದರೆ ನದಿಯ ಪ್ರವಾಹ, ಭೂಪಾತಗಳು ಸೇರಿದಂತೆ ಕೆಲವು ಅವಘಡಗಳು ನಿಸರ್ಗಕೃತವಲ್ಲ, ಅವು ಮನುಷ್ಯಕೃತ. ಮುಂದಿನ ದಿನಮಾನಗಳಲ್ಲಿ ಮನುಷ್ಯಕೃತ ವಿಕೋಪಗಳ ಬಗ್ಗೆ ನಾವು ಇನ್ನಷ್ಟು ಎಚ್ಚರಿಕೆಯಿಂದ ಇರಬೇಕಾಗುತ್ತದೆ'.

ಹೈಕೋರ್ಟ್ ಈ ಚಾಟಿ ಬೀಸುತ್ತಲೇ ಮುಖ್ಯಮಂತ್ರಿ ಎಚ್. ಡಿ. ಕುಮಾರಸ್ವಾಮಿ ಅವರು ತ್ವರಿತವಾಗಿ ಎಚ್ಚರಗೊಂಡರು. ಮಲೆನಾಡು ಮತ್ತು ಕರ್ನಾಟಕದ ತೀರ ಪ್ರದೇಶಗಳಲ್ಲಿ ಭೂಪರಿವರ್ತನೆಗೆ ಇನ್ನು ಮುಂದೆ ಸರ್ಕಾರ ಅವಕಾಶ ಕೊಡುವುದಿಲ್ಲ ಎಂದು ಹೇಳಿದರಲ್ಲದೆ ಸಂಬಂಧಿಸಿದ ಅಧಿಕಾರಿಗಳಿಗೆ ಕೊಡಗಿನಲ್ಲಿ ಆದ ವಿಕೋಪದಲ್ಲಿ ಮನುಷ್ಯನ ಪಾತ್ರ ಎಷ್ಟು ಇದೆ ಅಧ್ಯಯನ ಮಾಡಿ ವರದಿ ನೀಡಿ ಎಂದು ಆದೇಶ ಕೊಟ್ಟರು. ಕೊಡಗಿನ ವನ್ಯಜೀವಿ ಸಂಘದ ಅಧ್ಯಕ್ಷ ಕರ್ನಲ್ ಸಿ. ಮುತ್ತಣ್ಣನವರು ನೀಡಿರುವ ಹೇಳಿಕೆ ಬಹು ಗಂಭೀರವಾದ್ದು; ನಿರ್ಲಕ್ಷಿಸಲಾಗದು. ಹಾರಂಗಿ ನದಿಯ ಎರಡೂ ಬದಿಗಳನ್ನು ಅತಿಕ್ರಮಿಸಿ ಅಲ್ಲಿ ಜನವಸತಿಗಳನ್ನು ಮಾಡಲಾಗಿದೆ. ಇಲ್ಲಿ ಹೊಸದಾಗಿ ಕೃಷಿ ಮಾಡುತ್ತಿರುವುದರ ಜೊತೆಗೆ ನದಿಯ ಮರಳನ್ನು ಎಗ್ಗಿಲ್ಲದೆ ತೆಗೆಯುತ್ತಿದ್ದಾರೆ ಎಂದಿದ್ದಾರೆ. ಈ ಸತ್ಯವನ್ನು, ಕೊಡಗಿನ ದುರಂತದಲ್ಲಿ ಸಿಲುಕಿದ್ದವರನ್ನು ರಕ್ಷಿಸಲು ಹೋರಾಡಿದ ಸೈನ್ಯಪಡೆ, ಸರ್ಕಾರೇತರ ಸಂಸ್ಥೆಗಳು



ಭಾಗಮಂಡಲ ಜಲಾವೃತ

ಅಂತಿಮವಾಗಿ ಆದದ್ದೇನೆಂದರೆ ಈ ಎರಡೂ ಸಮಿತಿಗಳು ಕೊಟ್ಟ ವರದಿಗಳನ್ನು ಸರ್ಕಾರ ಪರಿಗಣಿಸದೆ ಕಾಲಹರಣ ಮಾಡುತ್ತ ಹೋಯಿತು. ಸದ್ಯ ಕೊಡಗಿಗೆ ಕಸ್ತೂರಿ ರಂಗನ್ ವರದಿ ಬೇಡ ಎಂಬ ತೀರ್ಮಾನಕ್ಕೆ ರಾಜ್ಯ ಸರ್ಕಾರ ಬಂದಿದೆ. ಈ ಕುರಿತು ಇನ್ನೂ ಕೇಂದ್ರ ಸರ್ಕಾರದಿಂದ ಅಧಿಸೂಚನೆ ಬರಬೇಕಾಗಿದೆ. ಆದರೆ ನಿಸರ್ಗ ನಮ್ಮ ಯಾವ ವರದಿಗೂ ಕಾಯುವುದಿಲ್ಲ. ಅದರ ಪಾಡಿಗೆ ಅದು ಏನು ಮಾಡಬೇಕೋ ಅದನ್ನೇ ಮಾಡುತ್ತದೆ. ಪಶ್ಚಿಮ ಘಟ್ಟದ ಅಧಃಪತನವೆಂದರೆ ಅದು ನಮ್ಮ ಬದುಕಿನ ಅಧಃಪತನ ಎಂಬ ಸತ್ಯ ಗೊತ್ತಿದ್ದರೂ ಸರ್ಕಾರ ಎಂದಿನಂತೆ ತನ್ನ ಅಸಡ್ಡೆಯನ್ನು ತೋರುತ್ತಲೇ ಬಂದಿದೆ. ಈ ಬಾರಿ ಪ್ರಕೃತಿ ಕೊಡಗಿನ ಮೇಲೆ ತೋರಿಸಿದ ಮುನಿಸು ಮತ್ತೆ ಜಡಚೇತನರನ್ನು ಬಡಿದೆಬ್ಬಿಸಿದೆ.

**ಡಾ॥ ಟಿ. ಆರ್. ಅನಂತರಾಮು**

ಕಣ್ಣಾರೆ ಕಂಡಿವೆ. 'ಡೌನ್ ಟು ಅರ್ಥ್' ಎಂಬ ಪ್ರಭಾವಿ ಪರಿಸರ ಪತ್ರಿಕೆ ಕೊಡಗಿನ ದುರಂತ ಕುರಿತು ಸ್ಥಳ ಪರಿಶೀಲನೆ ಮಾಡಿದ ವರದಿಯನ್ನು ಪ್ರಕಟಿಸಿದೆ. ಈ ವರದಿಯನ್ನು ಗಮನಿಸಿದರೆ ಸಾಮಾನ್ಯ ಜನರಿಗೂ ಒಂದು ಅಂಶ ಎದ್ದುಕಾಣುತ್ತದೆ. ಈ ದುರಂತದ ಹಿಂದೆ ಮನುಷ್ಯನ ದುರಾಸೆ ಕೆಲಸ ಮಾಡಿದೆ.

ಕೊಡಗಿನ ಭೂವಿಜ್ಞಾನ ಕರ್ನಾಟಕದ ಭೂವಿಜ್ಞಾನದ ಒಂದು ಭಾಗವೇ. ಬೇಗ ಪುಡಿಯಾಗುವ ಪ್ರಾಚೀನ ಮೃದುಶಿಲೆಗಳಿವೆ ಹಾಗೆಯೇ ಅವುಗಳನ್ನು ತೂರಿ ನಿಂತ ಗ್ರಾನೈಟ್ ಶಿಲೆಗಳೂ ಇವೆ. ಕೊಡಗಿಗೆ ದೊಡ್ಡ ಪ್ರಮಾಣದ ಕುತ್ತು ತಂದಿರುವುದು ಈ ಗ್ರಾನೈಟ್ ಶಿಲೆಗಳೇ. ಏಕೆಂದರೆ ಕಲ್ಲು ಗಣಿಗಳು ಲಾಭದಾಯಕವಾಗಿ ಕೆಲಸ ಮಾಡುವುದು ಇಂಥ ಶಿಲೆಗಳನ್ನೇ ಆಧರಿಸಿ. ನಾಟ ಮಾಫಿಯ ಬೇಕಾಬಿಟ್ಟಿ ಕೊಡಗಿನ ಕಾಡನ್ನು ನಾಶಮಾಡಿದೆ. ಇದರ ಜೊತೆಜೊತೆಗೆ ವಿಸ್ತರಿಸಿದ ಕೃಷಿ ಭೂಮಿ ಕಾಡನ್ನು ದೊಡ್ಡ ಪ್ರಮಾಣದಲ್ಲಿ ನುಂಗಿದೆ. ಹೀಗೆ ವಿಸ್ತರಿಸುವ ಆಸೆಬುರುಕರಿಗೆ ಪರಿಸರಕ್ಕೆ ಎಂಥ ಹಾನಿಯಾಗುತ್ತದೆಂಬ ಕನಿಷ್ಠ ಜ್ಞಾನವೂ ಇಲ್ಲ. ಕಾಫಿ, ಏಲಕ್ಕಿ, ಮೆಣಸಿನ ತೋಟಗಳ ಜೊತೆಗೆ ರಬ್ಬರ್ ತೋಟಗಳೂ ಅನಿಯಂತ್ರಿತವಾಗಿ ವಿಸ್ತರಿಸುತ್ತಿವೆ, ಕಾನೂನುಬಾಹಿರವಾಗಿ. ಕಾಡನ್ನು ನಾಶಮಾಡದೆ ಇವನ್ನು ವಿಸ್ತರಿಸುವಂತಿಲ್ಲ. ಹಿಂದೆಂದೂ ಇರದಷ್ಟು ಪ್ರಮಾಣದಷ್ಟು ಹೋಂ ಸ್ಟೇಗಳು–ಸುಮಾರು ನಾಲ್ಕು ಸಾವಿರದಷ್ಟು ತಲೆಯೆತ್ತಿವೆ. ಇನ್ನು ರೆಸಾರ್ಟ್‌ಗಳ ಮೇಲಂತೂ ಸರ್ಕಾರದ ನಿಯಂತ್ರಣವೇ ಇಲ್ಲ. ಕೊಡಗಿಗೆ ಬೇಡವಾದ ಕೆಲವು ಯೋಜನೆಗಳನ್ನು ಸರ್ಕಾರ ಮುತುವರ್ಜಿಯಿಂದ ಎತ್ತಿಕೊಂಡಿರುವುದನ್ನು ಈ ವರದಿ ಉಲ್ಲೇಖಿಸುತ್ತದೆ. ಮೈಸೂರಿನಿಂದ ಕೋಝಿಕೋಡ್‌ಗೆ ೨೦೧೫–೧೬ರಲ್ಲಿ ವಿದ್ಯುತ್ ಲೈನ್ ಎಳೆಯಲು ಕೊಡಗೊಂದರಿಂದಲೇ ೫೫,೦೦೦ ಮರಗಳನ್ನು ಕೊಚ್ಚಿಹಾಕಲಾಯಿತು. ರಾಷ್ಟ್ರೀಯ ಹೆದ್ದಾರಿ ಎನ್. ಎಚ್. ೨೭೫ ಮತ್ತು ರಾಜ್ಯ ಹೆದ್ದಾರಿಗಳನ್ನು ಅಗಲ ಮಾಡಲು ೮೮ ಲಕ್ಷ ಮರಗಳಿಗೆ ಗರಗಸ ಹಾಕಲಾಯಿತು. ಮುಂದಿನ ಯೋಜನೆಗಳು ಕೊಡಗಿನ ಪರಿಸರದ ಮಟ್ಟಿಗೆ ವಿನಾಶಕಾರಿಯೇ. ಮೈಸೂರಿನಿಂದ ಕುಶಾಲನಗರಕ್ಕೆ ವಿಸ್ತರಿಸಲು ಯೋಜಿಸಿರುವ ರೈಲ್ವೇ ಯೋಜನೆ ತಲಸೇರಿಯಿಂದ ಮೈಸೂರನ್ನು ಸಂಪರ್ಕಿಸುವ ಯೋಜನೆಯಾಗಿತ್ತು. ಇವೆಲ್ಲ ಮೆಗಾ ಯೋಜನೆಗಳು. ೫,೨೮೦ ಕೋಟಿ ರೂಪಾಯಿ ಖರ್ಚು ಬೇಡುವಂಥವು ಎಂಬುದು ಕೂಡ ಗಮನ ಸೆಳೆದಿರುವ ಅಂಶ.

ಕಲ್ಲುಗಣಿಯ ಸ್ಫೋಟ, ಹೆದ್ದಾರಿಯ ಅಭಿವೃದ್ಧಿ ನಿಸ್ಸಂಶಯವಾಗಿ ನೆಲವನ್ನು ಅಸ್ಥಿರಗೊಳಿಸುತ್ತವೆ. ದೊಡ್ಡ ಪ್ರಮಾಣದ ಮಣ್ಣಿನ ಪದರ ಇಳಿಜಾರಿನಲ್ಲಿ ಯಾವಾಗಬೇಕಾದರೂ ಜರಗಬಹುದು. ಪಶ್ಚಿಮಘಟ್ಟದ ಹೆಚ್ಚಿನ ಪಾಲು ಶಿಲೆ ಜ್ವಾಲಾಮುಖಿಯ ಲಾವಾರಸದಿಂದ ಗಟ್ಟಿಯಾದ ಬಸಾಲ್ಟ್ ಎಂಬ ಬಗೆಯ ಶಿಲೆ. ಕೋಟ್ಯಂತರ ವರ್ಷಗಳ ನಂತರ ಮಳೆ, ಬಿಸಿಲಿಗೆ ಒಡ್ಡಿಕೊಂಡಾಗ ಅದು ಎರೆಮಣ್ಣಾಗುತ್ತದೆ. ಕೊಡಗಿನಲ್ಲಿ ಕೆಲವೆಡೆ ರಸ್ತೆ ಮಾಡಲು ಇಂಥ ಪದರಗಳಲ್ಲಿ ೨೦ ಮೀಟರ್ ಆಳದವರೆಗೆ ಬಗೆದಿರುವುದುಂಟು. ಕೊಡಗಿನ ಭೂಪಾತ ಕುರಿತೇ ೨೦೧೬ರಲ್ಲಿ 'ಇಂಟರ್‌ನ್ಯಾಷನಲ್ ಜರ್ನಲ್ ಆಫ್ ಇನ್ನೊವೇಟಿವ್ ರೀಸರ್ಚ್ ಇನ್ ಸೈನ್ಸ್, ಎಂಜಿನಿಯರಿಂಗ್ ಅಂಡ್ ಟೆಕ್ನಾಲಜಿ' ಎಂಬ ವಿಜ್ಞಾನ ಪತ್ರಿಕೆಯಲ್ಲಿ ತಜ್ಞರು ಗಂಭೀರವಾದ ವರದಿಯನ್ನೇ ಪ್ರಕಟಿಸಿದ್ದರು. ಕೊಡಗಿನ ಶೇ. ೧೭ ಭಾಗ ನದಿಯ ಪ್ರವಾಹಕ್ಕೆ ತುತ್ತಾಗುವ ಸಾಧ್ಯತೆ ಇದೆಯೆಂದೂ ಶೇ. ೧೧.೫ ಭಾಗದಲ್ಲಿ ಜನವಸತಿ ನಿರ್ಮಿಸುವುದು ಅತ್ಯಂತ ಅಪಾಯಕಾರಿ ಎಂದು ಅದರಲ್ಲಿ ಸೂಚಿಸಿತ್ತು. ಇದನ್ನು ಪ್ರಮಾಣೀಕರಿಸುವಂತೆ ಈಗ ಎಲ್ಲಿ ನೈಸರ್ಗಿಕವಾಗಿ ಕಾಡು ನಾಶವಾಗಿದೆಯೋ ಅಲ್ಲೇ ಹೆಚ್ಚಿನ ಪಾಲು ಭೂಕುಸಿತ ಉಂಟಾಗಿದೆ. ಮಡಿಕೇರಿ, ಜೋಡುಪಾಲ, ಮಣ್ಣಂಗಾರಿ, ಭಾಗಮಂಡಲ, ಮಕ್ಕಂದೂರು ಜಲಾವೃತವಾಗಿ ಅಲ್ಲಿನ ನಿವಾಸಿಗಳನ್ನು ರಕ್ಷಣೆ ಮಾಡಬೇಕಾದರೆ ದಕ್ಷಿಣ ಕನ್ನಡ ಜಿಲ್ಲಾ ಪೊಲೀಸರು,





ಹೆಲಿಕಾಪ್ಟರ್ ಬಳಸಿ ಸಂತ್ರಸ್ತರ ರಕ್ಷಣೆ

ರಾಷ್ಟ್ರೀಯ ವಿಪತ್ತು ನಿರ್ವಹಣಾ ದಳ, ಅಗ್ನಿಶಾಮಕ ಮತ್ತು ತುರ್ತು ಸೇವೆಯ ಪಡೆ, ಗೃಹ ರಕ್ಷಣಾ ದಳದ ಸಿಬ್ಬಂದಿ ದೊಡ್ಡ ಸಾಹಸವನ್ನೇ ಮಾಡಬೇಕಾಯಿತು. ಈಚೆಗೆ ತಲೆ ಎತ್ತಿರುವ ರಬ್ಬರ್ ಪ್ಲಾಂಟೇಷನ್ ಪಶ್ಚಿಮ ಘಟ್ಟಕ್ಕೇ ಶಾಪವಾಗಿ ಪರಿಣಮಿಸುತ್ತಿದೆ. ಇವು ಆಳ ಬೇರು ಇಳಿಸುವುದಿಲ್ಲ, ಇನ್ನು ಮಣ್ಣನ್ನು ಹಿಡಿದಿಡುವ ಮಾತೆಲ್ಲಿ?

**ದುರಂತದ ಒಳನೋಟ**

ಕೊಡಗಿನಲ್ಲಿ ಮಳೆ ಮತ್ತು ಏಕಕಾಲಕ್ಕೆ ಭೂಕುಸಿತ ಉಂಟಾಗಿ ಸಂಪಾಜೆ ಸಮೀಪದ ಜಿಲ್ಲಾ ಗಡಿ ಭಾಗದಲ್ಲಿರುವ ಕೊಡಗು ಜಿಲ್ಲೆಯ ಜೋಡುಪಾಲದಲ್ಲಿ ಹಾಯುವ ರಾಷ್ಟ್ರೀಯ ಹೆದ್ದಾರಿ ಎನ್. ಎಚ್. ೨೭೫ ದೊಡ್ಡ ಪ್ರಮಾಣದಲ್ಲಿ ಈ ಅವಘಡಕ್ಕೆ ತುತ್ತಾಯಿತು. ಅದೇ ರೀತಿ ಬೆಂಗಳೂರು–ಮಂಗಳೂರು ನಡುವಿನ ಶಿರಾಡಿ ಘಾಟ್, ಹಾಸನ–ಸಕಲೇಶಪುರ ಸಂಪರ್ಕ ಕಲ್ಪಿಸುವ ಬಿಸಿಲೇ ಘಾಟ್ ರಸ್ತೆ, ಸುಬ್ರಹ್ಮಣ್ಯ–ಸೂಳ್ಯ–ಮಡಿಕೇರಿ ರಸ್ತೆ, ಮೈಸೂರು ಮತ್ತು ಕೇರಳ ಸಂಪರ್ಕಿಸುವ ರಸ್ತೆ ಭಾರಿ ಪ್ರಮಾಣದ ಭೂಕುಸಿತ ಅನುಭವಿಸಿದವು. ಈ ಸಲದ ಮುಂಗಾರು ಆರ್ಭಟಿಸುತ್ತಲೇ ಬಂತು. ಜುಲೈನಿಂದ ಆಗಸ್ಟ್ ಮಧ್ಯದ ವೇಳೆಗೆ ಹತ್ತಿರ ಹತ್ತಿರ ೩,೦೦೦ ಮಿಲಿ ಮೀಟರ್ ಮಳೆ ದಿಢೀರನೆ ಬಿತ್ತು. ೧೫, ೧೬ ಮತ್ತು ೧೭ನೇ ಆಗಸ್ಟ್‌ರಂದು ಬಿದ್ದ ಮಳೆ ಪ್ರಮಾಣವನ್ನು ಅಳೆದಾಗ ಅದು ೭೬೮ ಮಿಲಿ ಮೀಟರ್ ತೋರಿಸಿತು. ೧೯೩೧ರ ಆಗಸ್ಟ್‌ನಲ್ಲಿ ೧,೫೫೯ ಮಿಲಿ ಮೀಟರ್ ಮಳೆಯಾಗಿತ್ತಂತೆ. ಆ ದಾಖಲೆಯನ್ನೂ ಇದು ಮುರಿಯಿತು. ಕೊಡಗಿನಲ್ಲಿ ವಾಡಿಕೆಯ ಮಳೆ ೧,೮೦೦ ಮಿಲಿ ಮೀಟರ್ ಆಸುಪಾಸು ಎಂದು ಹವಾಮಾನ ಇಲಾಖೆ ತಾನಿಟ್ಟಿರುವ ದಾಖಲೆಯನ್ನು ತೋರಿಸುತ್ತದೆ. ಮಡಿಕೇರಿ ತಾಲ್ಲೂಕಿನ ಅರೆಕಲ್ಲು, ಕಾಟಗಾರಿ ಊರುಗಳಲ್ಲೂ ಕಣ್ಣೆದುರಿಗೆ ಬೆಟ್ಟವೇ ಇಳಿದು ಮೆಲ್ಲನೆ ಕೆಳಗಿಳಿಯುತ್ತಿದ್ದ ದೃಶ್ಯ ಅಲ್ಲಿನ ನಿವಾಸಿಗಳಿಗೆ ದಿಗ್ಭ್ರಮೆಗೊಳಿಸಿತು. ಭೂಪಾತವಾಗಬೇಕಾದರೆ ಮೇಲು ಮಣ್ಣಿನ ಸ್ತರ ಯಾವ ಕೋನದಲ್ಲಿದೆ ಎಂಬ ತಾಂತ್ರಿಕ ಅಂಶಗಳನ್ನು ಗಮನಿಸಬೇಕಾಗುತ್ತದೆ. ಮಣ್ಣೇ ಬಿರುಕು ಬಿಟ್ಟಿದ್ದರೆ ಮಳೆ ಬಿದ್ದೊಡನೆಯೇ ನೀರು ಅದರಲ್ಲಿ ಸೇರಿ ಮಣ್ಣಿನ ಗುಡ್ಡವೇ ಜಾರುವಂತೆ ಮಾಡುತ್ತದೆ. ಇಂಥ ಇಳಿಜಾರುಗಳಲ್ಲಿ ನಿರ್ಮಿಸಿದ ವಸತಿಗಳು ಎಂದೂ ಸುರಕ್ಷಿತವಲ್ಲ ಎಂಬುದು ಮತ್ತೊಮ್ಮೆ ಸಾಬೀತಾಯಿತು.

ಕೊಡಗಿನ ಭಾಗ ಗಟ್ಟಿ ಶಿಲೆಯಿಂದ ಆವೃತವಾಗಿದೆ ಎಂದು ಭಾವಿಸಿದರೂ ಈ ಭಾಗ, ಅಷ್ಟೇ ಏಕೆ ಅತ್ತ ನೀಲಗಿರಿ ಪರ್ವತಗಳಿಂದ ತೊಡಗಿ, ಇತ್ತ ಉಡುಪಿವರೆಗಿನ ಜಾಡು ಭೂಕಂಪನ ವಲಯದಲ್ಲಿದೆ ಎಂಬುದನ್ನು ಅಧ್ಯಯನ ಮಾಡಿ ಅದರ



ಭೂ ಕುಸಿತ

ನಕ್ಷೆಯನ್ನೂ ಬಿಡುಗಡೆಮಾಡಲಾಗಿದೆ. ನಕ್ಷೆಯಲ್ಲಿ ಅದರ ಸ್ಥಾನ – ೩ ಅಂದರೆ ತೀರ ದುರ್ಬಲವೂ ಅಲ್ಲದ, ಅತ್ತ ಅತಿ ಶಕ್ತಿಶಾಲಿಯೂ ಅಲ್ಲದ ಭೂಕಂಪನಗಳು ಸಂಭವಿಸುವ ಜಾಡು. ಕೊಡಗಿನಲ್ಲಿ ೨೦೧೧ರಲ್ಲಿ, ೨೦೧೨ರಲ್ಲಿ, ಈ ವರ್ಷದ ಜುಲೈ ೯ರಂದು ಲಘು ಭೂಕಂಪನಗಳಾಗಿದ್ದವು. ನಗರಗಳಾಗಿದ್ದರೆ ಇದೇನೂ ಮಹತ್ವದ ವಿಚಾರವಾಗುತ್ತಿರಲಿಲ್ಲ, ಕಟ್ಟಡವೂ ಕುಸಿಯುತ್ತಿರಲಿಲ್ಲ. ಆದರೆ ದಪ್ಪ ಮಣ್ಣಿನ ಪದರ– ಇಳಿಜಾರು, ಭಾರಿ ಮಳೆ ಇದ್ದಾಗ ಸಣ್ಣ ಪ್ರಮಾಣದಲ್ಲಿಯಾದರೂ ಕಂಪನ ಮಣ್ಣನ್ನು ಅಲುಗಿಸುತ್ತದೆ. ಅಂದರೆ ಭೂಕುಸಿತಕ್ಕೆ ಅದೂ ಪರೋಕ್ಷವಾಗಿ ನೆರವಾಗಬಹುದು. ಭೂಕಂಪನದಿಂದಾಗಿಯೇ ಇಲ್ಲಿ ಭೂಪಾತವಾಗಿದೆ ಎಂದು ಯಾವ ತಂತ್ರಜ್ಞರೂ ಹೇಳುತ್ತಿಲ್ಲ. ಕೊಡಗಿನ ಸ್ಥಿತಿ ಹೇಗೆಂದರೆ ರೋಗಿಯೊಬ್ಬನ ಬಹು ಅಂಗಾಂಗಗಳು ವೈಫಲ್ಯವಾದರೆ ಸ್ಥಿತಿ ಹೇಗಿರುತ್ತದೋ ಹಾಗೆ.

ಕೊಡಗಿನಲ್ಲಿ ವಿಶೇಷವಾಗಿ ಮಡಿಕೇರಿಯ ಸುತ್ತಮುತ್ತ ೨೮೦೦ ಎಕರೆಯಷ್ಟು ಗುಡ್ಡದ ನೆಲವನ್ನು ಅಭಿವೃದ್ಧಿಯ ಹೆಸರಿನಲ್ಲಿ ಒತ್ತುವರಿ ಮಾಡಲಾಗಿದೆ ಎಂದು ಇನ್ನೊಂದು ವರದಿ ತಿಳಿಸುತ್ತದೆ. ಕಾಫಿ ತೋಟಗಳ ಮೂಲ ವಿಸ್ತೀರ್ಣ ಎಷ್ಟು? ಅವುಗಳ ಒತ್ತುವರಿಯಾದದ್ದರಿಂದ ಕಾಡು ಬೋಳಿಸಿರುವ ಪ್ರಮಾಣವೆಷ್ಟು ಎಂಬ ಸತ್ಯಾಂಶವನ್ನು ವರದಿ ಮಾಡುವ ಪ್ರಯತ್ನ ಆಗಿಯೇ ಇಲ್ಲ. ಕೊಡಗಿನಲ್ಲೇ ೪,೦೦೦ ಸ್ಟೇ ಹೋಂಗಳಿವೆಯೆಂದು ಸ್ಥಳೀಯರಿಗೂ ಗೊತ್ತು. ಇವೆಲ್ಲ ನಿಂತಿರುವುದು ಅಸ್ಥಿರ ಭೂಭಾಗದ ಮೇಲೆ. ಇದರ ಜೊತೆಗೆ ಇನ್ನೂ ಒಂದು ವಿದ್ಯಮಾನದತ್ತ ಸ್ಥಳೀಯರು ಬೊಟ್ಟುಮಾಡಿ ತೋರಿಸುತ್ತಾರೆ. ಕೆರೆಗಳೇನಿದ್ದರೂ ಗುಡ್ಡಗಳ ಬುಡದಲ್ಲಿ ನೀರು ಹರಿಯುವ ಜಾಗದಲ್ಲಿ ನಿರ್ಮಾಣವಾಗುತ್ತವೆ. ಆದರೆ ಕೊಡಗಿನ ಸುತ್ತಮುತ್ತ ಪ್ಲಾಂಟೇಷನ್ ಮಾಲೀಕರು ತಮಗೆ ಬೇಕಾದ ನೀರನ್ನು ಪಡೆಯಲು ಅಂದಾಜು ೪೦ ಕೆರೆಗಳನ್ನು ನಿರ್ಮಿಸಿದ್ದಾರೆ ಎಂಬುದು ಕೂಡ ಸ್ಥಳೀಯರೇ ನೀಡಿರುವ ಸುದ್ದಿ. ಈ ಕೆರೆಗಳು ನಿರ್ಮಾಣವಾಗಿರುವುದು ಗುಡ್ಡಗಳ ನೆತ್ತಿಯಲ್ಲಿ. ಅಂದರೆ ಸತತವಾಗಿ ನೀರಿನ ಒತ್ತಡ ಇದ್ದೇ ಇರುತ್ತದೆ. ಮಹಾರಾಷ್ಟ್ರದ ಕೊಯ್ನಾ ಅಣೆಕಟ್ಟಿನ ನೀರಿನ ಭಾರದಿಂದ ಅಲ್ಲಿ ೧೯೬೭ರಲ್ಲಿ ದೊಡ್ಡ ಪ್ರಮಾಣದ ಭೂಕಂಪನವಾಗಿತ್ತು ಎಂಬ ಸತ್ಯವನ್ನು ಮರೆಯುವಂತಿಲ್ಲ. ಕೆರೆಯ ನೀರಿನ ಒತ್ತಡವಿರಬಹುದು ಅಥವಾ ಅಲ್ಲಿಂದ ನೀರು ಮಣ್ಣಿಗೆ ಸೋರಿ ಗುಡ್ಡವನ್ನು ಅಸ್ಥಿರ ಮಾಡಿರಬಹುದೆಂಬ ಸಾಧ್ಯತೆಯನ್ನು ವಿಜ್ಞಾನಿಗಳು ನಿರಾಕರಿಸುತ್ತಿಲ್ಲ.

ಇಂಡಿಯಾ ಕಾಫಿ ಬೋರ್ಡ್ ವರದಿ ಮಾಡಿರುವಂತೆ ಭಾರತದ ಶೇ. ೫೩ ಭಾಗ ಕಾಫಿ ಉತ್ಪಾದನೆಗೆ ಕೊಡಗೇ ಮೂಲ. ಇಲ್ಲಿ ೧,೦೬,೦೮೯ ಹೆಕ್ಟೇರು ಕಾಫಿ ಪ್ಲಾಂಟೇಷನ್ ಇದೆ. ದುರಂತವೆಂದರೆ ಎಷ್ಟು ಭಾಗ ಇಲ್ಲಿ ಅತಿಕ್ರಮವಾಗಿದೆ ಎಂಬುದು ಉಪಗ್ರಹಗಳ ಛಾಯಾಚಿತ್ರಗಳಿಂದಲೂ ಸರಿಯಾಗಿ ನಿರ್ಣಯಿಸಲು ಆಗುವುದಿಲ್ಲ. ಈಗ ಈ ಜಲಪ್ರಳಯದಿಂದ ಕಾಫಿ ಬೆಳೆಗಾರರೂ ಕಂಗೆಟ್ಟಿದ್ದಾರೆ. ಈ ವರ್ಷ ಶೇ. ೫೧ ಪ್ರಮಾಣ ಕೂಡ ಕಾಫಿ ಬೀಜದ ಉತ್ಪಾದನೆಯಾಗುವುದಿಲ್ಲ ಎಂದು ನಿರಾಶೆ ತೋಡಿಕೊಂಡಿದ್ದಾರೆ. ಅತ್ತ ಸಂತ್ರಸ್ತರ ಸಂಖ್ಯೆ ೬,೦೦೦ಕ್ಕೆ ತಲಪಿದೆ. ೩೧ ನಿರಾಶ್ರಿತ ಶಿಬಿರಗಳಲ್ಲಿ ಇವರನ್ನು ನಿರ್ವಹಿಸಲು ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ಹೆಣಗುತ್ತಿವೆ. ಮುಖ್ಯಮಂತ್ರಿ ಎಚ್.ಡಿ. ಕುಮಾರಸ್ವಾಮಿ ಅವರು ತಂಡವನ್ನು ಕಟ್ಟಿಕೊಂಡು ಪ್ರಧಾನಿಯವರನ್ನು ಭೇಟಿಯಾಗಿದ್ದಾರೆ. ಕೊಡಗನ್ನು ಈಗಿನ ಸ್ಥಿತಿಯಲ್ಲಿ ನಿರ್ವಹಿಸಲು ೨,೦೦೦ ಕೋಟಿ ರೂಪಾಯಿಯ ಪ್ಯಾಕೇಜ್ ನೀಡಲು ಕೋರಿದ್ದಾರೆ.

**ಪರಿಸರ ವರದಿಯ ನಿರ್ಲಕ್ಷ್ಯ**

ಪ್ರೊ॥ ಮಾಧವ ಗಾಡ್ಗೀಳರು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಪರಿಸರ ವಿಜ್ಞಾನದಲ್ಲಿ ದೊಡ್ಡ ಕೆಲಸ ಮಾಡಿದವರು. ಕೇಂದ್ರ ಸರ್ಕಾರ ೨೦೧೦ರಲ್ಲಿ ಅವರನ್ನು 'ಪಶ್ಚಿಮ ಘಟ್ಟದ ಜೀವಿ ಪರಿಸ್ಥಿತಿ ಸಮಿತಿ'ಯ ಮುಖ್ಯಸ್ಥರನ್ನಾಗಿ ನೇಮಿಸಿತು. ಪಶ್ಚಿಮ ಘಟ್ಟದ ಸೂಕ್ಷ್ಮ ಪ್ರದೇಶ, ಇಲ್ಲಿನ ವಿಶೇಷ ಜೀವಿ ವೈವಿಧ್ಯ, ಮಾನವ ಚಟುವಟಿಕೆಯಿಂದ ಆಗಬಹುದಾದ ಹಾನಿ–ಎಲ್ಲವನ್ನೂ ಕುರಿತಂತೆ ಅಧ್ಯಯನ ಮಾಡಲು ಕೋರಿತು. ಅವರು ಮತ್ತು ತಂಡ ಅತ್ಯಂತ ನಿಷ್ಠೆಯಿಂದ ಅಧ್ಯಯನ ಮಾಡಿ ಪಶ್ಚಿಮ ಘಟ್ಟದಲ್ಲಿ ಅನುಸರಿಸಬೇಕಾದ ನಿಯಂತ್ರಣ, ಸಂರಕ್ಷಣೆ ಮುಂತಾದವನ್ನು ಕುರಿತಂತೆ ದೀರ್ಘ ವರದಿ ತಯಾರುಮಾಡಿತು. ಈ ವರದಿಯ ಪ್ರಕಾರ ೧೬೦೦ ಕಿ.ಮೀ. ಉದ್ದವಿರುವ ಆರೂ ರಾಜ್ಯಗಳಲ್ಲಿ ಹಂಚಿಹೋಗಿರುವ ಪಶ್ಚಿಮ ಘಟ್ಟದ ೧,೬೦,೦೦೦ ಚದರ ಕಿಲೋ ಮೀಟರ್ ವಿಸ್ತೀರ್ಣದಲ್ಲಿ ಶೇ. ೬೪ ಭಾಗ ಸೂಕ್ಷ್ಮವಲಯ ಎಂದು ಗುರುತಿಸಿತು. ಅಷ್ಟೇ ಅಲ್ಲ ಈ ಭಾಗದಲ್ಲಿ ಯಾವುದೇ ಕಾರಣಕ್ಕೂ ವಿಶೇಷ ಆರ್ಥಿಕ ವಲಯದ (ಎಸ್.ಇ.ಜೆಡ್) ಅಭಿವೃದ್ಧಿಗೆ ಅವಕಾಶ ನೀಡಬಾರದು, ಕುಲಾಂತರಿ ಬೆಳೆಗೆ ಕುಮ್ಮಕ್ಕು ಕೊಟ್ಟು ಸ್ಥಳೀಯ ತಳಿಗಳಿಗೆ ಹಾನಿಮಾಡಬಾರದು, ಸರ್ಕಾರಿ ಭೂಮಿಯನ್ನು ಖಾಸಗಿ ಭೂಮಿಯನ್ನಾಗಿ ಪರಿವರ್ತಿಸಬಾರದು, ಪರಿಸರ ಸ್ನೇಹಿ ಕಟ್ಟಡಗಳನ್ನು ನಿರ್ಮಾಣ ಮಾಡಲು ಉತ್ತೇಜನ ಕೊಡಬೇಕು. ಹೊಸತಾಗಿ ಯಾವುದೇ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಲು ಅವಕಾಶ ಕೊಡಬಾರದು. ವಿದ್ಯುತ್ ಯೋಜನೆಗಳಿಗಾಗಿ ಯಾವುದೇ ನದಿಯ ಸಹಜ ಹರಿವನ್ನು ತಿರುಗಿಸಬಾರದು. ಭೂಮಿಯನ್ನು ಇಲ್ಲಿ ಕೃಷಿಯೇತರ ಉದ್ಯಮಕ್ಕೆ ಬಳಸಬಾರದು. ಹಂತಹಂತವಾಗಿ ಕೀಟನಾಶಕಗಳ ಬಳಕೆಯನ್ನು ಕಡಿಮೆ ಮಾಡಬೇಕು. ನದಿಯ ಮರಳನ್ನು ಎತ್ತುವ ದಂಧೆಯನ್ನು ಆದ್ಯತೆಯ ಮೇರೆಗೆ ನಿಯಂತ್ರಿಸಬೇಕು. ನೀಲಗಿರಿಯಂಥ ಒಂದೇ ಪ್ರಭೇದದ ಸಸ್ಯವನ್ನು ಬೆಳೆಸಬಾರದು–ಇವೇ ಮುಂತಾದ ಅಂಶಗಳನ್ನು ತಮ್ಮ ವರದಿಯಲ್ಲಿ ಸ್ಪಷ್ಟವಾಗಿ ನಮೂದಿಸಿದ್ದರು.


ಪರಿಸರ ತಜ್ಞ ಪ್ರೊ॥ ಮಾಧವ ಗಾಡ್ಗೀಳ್

ಆದರೆ ಕೇಂದ್ರ ಸರ್ಕಾರ ಈ ವರದಿಯನ್ನು ಒಪ್ಪಲಿಲ್ಲ. ಇದರ ಮೇಲೆ ಇನ್ನೊಂದು ಸಮಿತಿ ರಚಿಸಿ ಅದಕ್ಕೆ ಖ್ಯಾತ ಬಾಹ್ಯಾಕಾಶ ವಿಜ್ಞಾನಿ ಕಸ್ತೂರಿರಂಗನ್ ಅವರನ್ನು ಅಧ್ಯಕ್ಷರನ್ನಾಗಿ ಮಾಡಿತು. ಈ ಸಮಿತಿ ಮಾಡಿದ ಮೊದಲ ಕೆಲಸವೆಂದರೆ ಗಾಡ್ಗೀಳರು ಬೇರೆ ಬೇರೆ ಅಂಶಗಳನ್ನು ಪರಿಗಣಿಸಿ ಗುರುತಿಸಿದ್ದ ವಲಯವಾರು ವಿಂಗಡನೆಯನ್ನು ಕೈಬಿಟ್ಟಿತು. ಕೆಲವು ನಿಷೇಧಗಳನ್ನು ಕೈಬಿಟ್ಟು ಬೇರೊಂದು ಅಂಶಗಳನ್ನು ಸೇರಿಸಿತು. ಗಾಡ್ಗೀಳರ ವರದಿಯನ್ನು ಒಪ್ಪಿಕೊಂಡರೆ ಪಶ್ಚಿಮ ಘಟ್ಟದಲ್ಲಿರುವ ಹಳ್ಳಿಗಳ ಅಭಿವೃದ್ಧಿ ಸಾಧ್ಯವಿಲ್ಲ ಎಂದು ವರದಿಕೊಟ್ಟಿತು. ಈ ವರದಿಯ ಪ್ರಕಾರ ಶೇ. ೩೭ ಭಾಗವನ್ನು ಮಾತ್ರ ಸೂಕ್ಷ್ಮ ಪ್ರದೇಶವೆಂದು ಗುರುತಿಸಿ, ಅಲ್ಲಿ ಭಾರಿ ಕಟ್ಟಡಗಳು, ಗಣಿಗಾರಿಕೆ, ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಬಾರದು. ಉಳಿದ ಭಾಗದಲ್ಲಿ ಆಯಾ ಸ್ಥಳೀಯ ಪರಿಸರ ಅಂಶಗಳನ್ನು ಪರಿಗಣಿಸಿ ಅಭಿವೃದ್ಧಿ ಮಾಡಬಹುದು ಎಂದು ವರದಿ ಕೊಟ್ಟಿತು.

ಅಂತಿಮವಾಗಿ ಆದದ್ದೇನೆಂದರೆ ಈ ಎರಡೂ ಸಮಿತಿಗಳು ಕೊಟ್ಟ ವರದಿಗಳನ್ನು ಸರ್ಕಾರ ಪರಿಗಣಿಸದೆ ಕಾಲಹರಣ ಮಾಡುತ್ತ ಹೋಯಿತು. ಸದ್ಯ ಕೊಡಗಿಗೆ ಕಸ್ತೂರಿ ರಂಗನ್ ವರದಿ ಬೇಡ ಎಂಬ ತೀರ್ಮಾನಕ್ಕೆ ರಾಜ್ಯ ಸರ್ಕಾರ ಬಂದಿದೆ. ಈ ಕುರಿತು ಇನ್ನೂ ಕೇಂದ್ರ ಸರ್ಕಾರದಿಂದ ಅಧಿಸೂಚನೆ ಬರಬೇಕಾಗಿದೆ. ಆದರೆ ನಿಸರ್ಗ ನಮ್ಮ ಯಾವ ವರದಿಗೂ ಕಾಯುವುದಿಲ್ಲ. ಅದರ ಪಾಡಿಗೆ ಅದು ಏನು ಮಾಡಬೇಕೋ ಅದನ್ನೇ ಮಾಡುತ್ತದೆ. ಪಶ್ಚಿಮ ಘಟ್ಟದ ಅಧಃಪತನವೆಂದರೆ ಅದು ನಮ್ಮ ಬದುಕಿನ ಅಧಃಪತನ ಎಂಬ ಸತ್ಯ ಗೊತ್ತಿದ್ದರೂ ಸರ್ಕಾರ ಎಂದಿನಂತೆ ತನ್ನ ಅಸಡ್ಡೆಯನ್ನು ತೋರುತ್ತಲೇ ಬಂದಿದೆ. ಈ ಬಾರಿ ಪ್ರಕೃತಿ ಕೊಡಗಿನ ಮೇಲೆ ತೋರಿಸಿದ ಮುನಿಸು ಮತ್ತೆ ಜಡಚೇತನರನ್ನು ಬಡಿದೆಬ್ಬಿಸಿದೆ.

**ಡಾ॥ ಟಿ. ಆರ್. ಅನಂತರಾಮು**
ನಂ.೫೩೪, ೭೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ ೧ನೇ ಹಂತ, ಬೆಂಗಳೂರು – ೫೬೦ ೧೧೧



ಬಹುನಿರೀಕ್ಷಿತ ಭಾರತ – ಅಮೆರಿಕ ರಕ್ಷಣಾ ಮತ್ತು ವಿದೇಶಾಂಗ ಸಚಿವರ ಮಾತುಕತೆ ಕಳೆದ ತಿಂಗಳು ಕೊನೆಗೂ ನಡೆಯಿತು. ೨೦೧೭ರಲ್ಲಿ ಪ್ರಧಾನಿ ನರೇಂದ್ರ ಮೋದಿ ಮತ್ತು ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ವಾಷಿಂಗ್‌ಟನ್‌ನಲ್ಲಿ ಭೇಟಿಯಾದಾಗ ಹೊಸ ರೀತಿಯಲ್ಲಿ ಸಚಿವರುಗಳ ಮಟ್ಟದಲ್ಲಿ ಮಾತುಕತೆ ಪ್ರಾರಂಭಿಸುವ ವಿಚಾರವನ್ನು ಪ್ರಸ್ತಾಪ ಮಾಡಿದ್ದರು. ಹಲವು ತಿಂಗಳುಗಳ ನಂತರ ಎರಡೆರಡು ಬಾರಿ ಮುಂದೂಡಿದ ಮೇಲೆ ಮಾತುಕತೆ ದೆಹಲಿಯಲ್ಲಿ ನಡೆಯಿತು. ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರಗಳ ಜೊತೆ ಮಾತುಕತೆಗಳು ನಡೆದಾಗ ಸಾಮಾನ್ಯವಾಗಿ ಅಮೆರಿಕ ತನಗೆ ಬೇಕಾದಂಥ ಒಪ್ಪಂದಗಳನ್ನು ಮಾಡಿಕೊಳ್ಳುತ್ತದೆ. ಹಾಗಾಗಿ ಈಚೆಗೆ ನಡೆದ ಮಾತುಕತೆ ೨+೨ರಲ್ಲೂ ಕೂಡ ಎರಡೂ ದೇಶಗಳ ಮಧ್ಯೆ

# ೨+೨ = ೦ : ಭಾರತ–ಅಮೆರಿಕ ಮಾತುಕತೆ

ಸಂವಹನ ಸಮನ್ವಯ ಹಾಗೂ ಭದ್ರತಾ ಒಪ್ಪಂದಕ್ಕೆ ಸಹಿಯಾಗಿದೆ. ಉಳಿದಂತೆ ಭಾರತಕ್ಕೆ ಅಗತ್ಯವಾಗಿರುವ ಗಡಿಯಾಚೆಯ ಭಯೋತ್ಪಾದನೆ, ಪರಮಾಣು ಸರಬರಾಜುದಾರ ಗುಂಪಿಗೆ ಭಾರತದ ಸೇರ್ಪಡೆ, ಹೆಚ್1ಬಿ ವೀಸಾ ಪ್ರಕ್ರಿಯೆ ಮೊದಲಾದ ವಿಷಯಗಳು ಪ್ರಸ್ತಾಪವಾದರೂ ಇತ್ಯರ್ಥವೇನಾಗಲಿಲ್ಲ. ಮಾತುಕತೆಗಳ ನಂತರ ಹೊರಗೆಡಹಿದ್ದು ಕಡಿಮೆ. ಅಮೆರಿಕದ ವಿದೇಶಾಂಗ ಸಚಿವರು ಹಾಗೂ ರಕ್ಷಣಾ ಸಚಿವರು ಪ್ರಧಾನಿ ಮೋದಿಯವರನ್ನು ಭೇಟಿಯಾಗಿ ವಿಚಾರ ವಿನಿಮಯ ಮಾಡಿಕೊಂಡರು. ಎರಡೂ ರಾಷ್ಟ್ರಗಳ ೨+೨ ಸಚಿವರ ಮಧ್ಯೆ ಸಂಪರ್ಕಕ್ಕೆ ನೇರವಾದ ಹಾಟ್‌ಲೈನ್ ಮತ್ತು ಸೇನಾ ಕಸರತ್ತಿಗೆ ವ್ಯವಸ್ಥೆಯಾಗಿದೆ.

ಮೋದಿ ನೇತೃತ್ವದ ಭಾಜಪ ಸರಕಾರ ಅಧಿಕಾರಕ್ಕೆ ಬಂದ ಮೇಲೆ ಭಾರತ – ಅಮೆರಿಕ ಸಂಬಂಧಗಳು ಹೊಸ ಮಜಲನ್ನು ತಲಪಿವೆ. ಎರಡೂ ದೇಶಗಳಲ್ಲಿ ಬಲಪಂಥಿಯರು ಅಧಿಕಾರಕ್ಕೇರಿರುವುದರಿಂದ ಸಂಬಂಧಗಳು ಬೆಸೆಯುವುದಕ್ಕೆ ಯಾವ ಅಡ್ಡಿಯೂ ಇಲ್ಲ. ಕಳೆದ ಏಳು ದಶಕಗಳಿಂದ ನಮ್ಮ ರಕ್ಷಣಾ ವ್ಯವಸ್ಥೆಗೆ ಅಗತ್ಯವಾದ ಸಾಮಗ್ರಿ ಒದಗಿಸುತ್ತ ಬಂದಿದ್ದ ರಷ್ಯವನ್ನು ಈಗ ಹಿಂದೆ ಸರಿಸಲಾಗಿದೆ. ಅಮೆರಿಕ ಈಗ ಅದಕ್ಕೆ ಪ್ರಮುಖ ಪಾಲುದಾರ. ಮೋದಿ – ಟ್ರಂಪ್ ವ್ಯೂಹಾತ್ಮಕ ಪಾಲುದಾರಿಕೆ (ಸ್ಟ್ರಾಟೆಜಿಕ್ ಪಾರ್ಟ್‌ನರ್ಷಿಪ್) ಪ್ರಾರಂಭಿಸಿದ್ದಾರೆ. ಅಮೆರಿಕದೊಂದಿಗೆ ಆತ್ಮೀಯ ಸಂಬಂಧ ಕುದುರಿಸಲು ಕಾಂಗ್ರೆಸ್ – ಭಾಜಪಗಳು ಒಂದು ರೀತಿಯಲ್ಲಿ ಪೈಪೋಟಿ ನಡೆಸಿವೆ ಎಂದೇ ಹೇಳಬೇಕು. ಮೋದಿ ಈ ವ್ಯವಹಾರದಲ್ಲಿ ಮುಂದಿದ್ದಾರೆ.



ಅಮೆರಿಕ ಇದುವರೆಗೆ ಭಾರತಕ್ಕೆ ಯಾವ ವಿಶೇಷ ರಿಯಾಯಿತಿಯನ್ನೂ ತೋರಿಲ್ಲ. ಮೊದಲಿನಿಂದಲೂ ಭಾರತವನ್ನು ಅನುಮಾನದಿಂದಲೇ ನೋಡುತ್ತಿತ್ತು. ಪಾಕಿಸ್ತಾನ ಯಾವತ್ತೂ ಅಮೆರಿಕೆಯ ನಿಷ್ಠಾವಂತ ಮಿತ್ರರಾಷ್ಟ್ರ. ಮೋದಿ ಸರಕಾರ ಈಗ ಅಮೆರಿಕದ ಜೊತೆ ಹೊಸ ನೆಂಟಸ್ಥಿಕೆ ಸ್ಥಾಪಿಸಲು ಪಾಕಿಸ್ತಾನವನ್ನು ಅಮೆರಿಕ ಅವಕೃಪೆಗೆ ಒಳಗಾಗಿಸಲು ಪ್ರಯತ್ನಿಸುತ್ತಿದೆ. ಇದು ಎಷ್ಟು ಮಟ್ಟಿಗೆ ಫಲಪ್ರದವಾದೀತು ನೋಡಬೇಕು. ಏನೇ ಆದರೂ ಭಾರತ ಅಮೆರಿಕದ ಜ್ಯೂನಿಯರ್ ಪಾಲುದಾರಿಕೆಗೆ



ತೃಪ್ತಿಪಟ್ಟುಕೊಳ್ಳಬೇಕು ಅಷ್ಟೆ. ಮೋದಿ ಅದಕ್ಕೂ ಸೈ ಎಂದರೆ ಅದು ಭಾರತದ ದುರಂತ ಅಷ್ಟೆ. ೨+೨ ಮಾತುಕತೆ ಪ್ರಾರಂಭವಾಗುವುದಕ್ಕೆ ಮುಂಚೆ ಭಾರತದ ಮೇಲೆ ಅಮೆರಿಕ ಬೇಕಾದಷ್ಟು ಒತ್ತಡ ತಂದಿದ್ದುದನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಟ್ರಂಪ್ ಅಧಿಕಾರಕ್ಕೆ ಬಂದಾಗಿನಿಂದ ಭಾರತದ ಐಟಿ ಉದ್ಯಮಕ್ಕೆ ಹೆಚ್1ಬಿ ವೀಸಾ ನೀಡಿಕೆಯ ಕಿರುಕುಳ ಇದ್ದೇ ಇದೆ. ಇದರ ಬಗ್ಗೆ ಅಮೆರಿಕ ಸರಕಾರದಿಂದ ಯಾವುದೇ ಬಗೆಯ ಪರಿಹಾರವಾಗಲಿ, ಭರವಸೆಯಾಗಲಿ ಇದುವರೆಗೆ ಲಭಿಸಿಲ್ಲ. ರಷ್ಯದಿಂದ ಪಡೆಯುತ್ತಿರುವ ರಕ್ಷಣಾ ವ್ಯವಸ್ಥೆಯ ಸರಕುಗಳ ಮೇಲೆ ಅವಲಂಬನೆಯನ್ನು ಕಡಿಮೆಮಾಡಬೇಕೆಂಬ ಒತ್ತಡವೂ ಭಾರತದ ಮೇಲಿದೆ.

ಅಂದರೆ ಭಾರತ ಸಾಕಷ್ಟು ದೀರ್ಘಕಾಲದಿಂದ ಬೆಳೆಸಿಕೊಂಡು ಬಂದಿರುವ ಸಂಬಂಧಗಳನ್ನು ಔಪಚಾರಿಕ ಮಟ್ಟಕ್ಕಿಳಿಸಲು ಅಮೆರಿಕ ಹಾತೊರೆಯುತ್ತಿದೆ. ಇರಾನ್ ಯಾವತ್ತೂ ಭಾರತದೊಂದಿಗೆ ಒಳ್ಳೆಯ ಸಂಬಂಧ ಹೊಂದಿದೆ ಮಾತ್ರವಲ್ಲ, ಭಾರತಕ್ಕೆ ತೈಲ ಮತ್ತು ತೈಲೋತ್ಪನ್ನಗಳನ್ನು ಪೂರೈಸುವುದರಲ್ಲಿ ಅಗ್ರಪಂಕ್ತಿಯಲ್ಲಿದೆ. ಈಗ ಭಾರತದ ಮೇಲೆ ಅದನ್ನು ಕಡಿಮೆ ಮಾಡಿಕೊಳ್ಳುವಂತೆ ಅಮೆರಿಕ ಒತ್ತಡ ತರುತ್ತಿದೆ. ಇರಾನಿನೊಂದಿಗೆ ಒಬಾಮಾ ಆಡಳಿತದ ಕಾಲದಲ್ಲಿ ಮಾಡಿಕೊಂಡಿದ್ದ ಒಪ್ಪಂದವನ್ನು ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಏಕಪಕ್ಷೀಯವಾಗಿ ರದ್ದುಗೊಳಿಸಿದ್ದಾರೆ. ಮತ್ತೆ ಆರ್ಥಿಕ ದಿಗ್ಬಂಧನವನ್ನು ಇರಾನಿನ ಮೇಲೆ ಹೇರಿದ್ದಾರೆ. ಅಮೆರಿಕದ ಈ ಕ್ರಮವನ್ನು ಯೂರೋ ರಾಷ್ಟ್ರಗಳು ಬಲವಾಗಿ ವಿರೋಧಿಸಿವೆ. ನವೆಂಬರ್ ೪ರಂದು ಅಮೆರಿಕದ ಆರ್ಥಿಕ ದಿಗ್ಬಂಧನ ಜಾರಿಯಾಗಲಿದೆ. ಭಾರತ ಈಗಾಗಲೇ ಅಂತರ ರಾಷ್ಟ್ರೀಯ ತೈಲದ ದರ ವಿಪರೀತವಾಗಿ ಹೆಚ್ಚಾಗಿರುವುದರಿಂದ ಡಾಲರ್ ಬೆಲೆ ಕುಸಿಯುತ್ತಿರುವುದರಿಂದ ತೊಂದರೆ ಅನುಭವಿಸುತ್ತಿದೆ. ದೇಶದಲ್ಲಿ ತೈಲ ಬೆಲೆ ಒಂದೇ ಸಮನಾಗಿ ಏರುತ್ತಿರುವುದರಿಂದ ಜನ ಬೇಸತ್ತಿದ್ದಾರೆ ಇದರ ಮೇಲೆ ಇರಾನಿನಿಂದ ತೈಲದ ಆಮದು ನಿಂತರೆ ಬೆಲೆ ಏರಿಕೆ ಇನ್ನಷ್ಟು ಹೆಚ್ಚುವುದು ಖಚಿತ. ಹಾಗೆ ಭಾರತ ಇರಾನಿನ ಚಾಬಹಾರ್ ಬಂದರಿನಲ್ಲಿ ಬಂಡವಾಳ ಹೂಡಲಿದೆ. ಈ ಬಗ್ಗೆ ದ್ವಿಪಕ್ಷೀಯ ಮಾತುಕತೆಗಳಲ್ಲಿ ಯಾವ ಭರವಸೆಯೂ ಇರಲಿಲ್ಲ ಎಂಬುದು ಸ್ಪಷ್ಟವಾಗಿದೆ. ಅಮೆರಿಕ ನಡೆಸುವ ಮಾತುಕತೆಗಳಲ್ಲಿ ಹಿಂದಿನಿಂದ ಬಂದಿರುವ ಪರಿಪಾಠ ಅಮೆರಿಕಕ್ಕೆ ಅನುಕೂಲಕರವಾದ ವಿಷಯಗಳಲ್ಲಿ ಮಾತ್ರ ಆಸಕ್ತಿ. ೨+೨ ಮಾತುಕತೆಗಳ ವಿಚಾರದಲ್ಲೂ ಕೂಡ ಹಾಗೆಯೇ ಆಗಿದೆ. ಅಮೆರಿಕಕ್ಕಷ್ಟೇ ಲಾಭವಾಗಿದೆ. ಭಾರತದ ಹಿತಾಸಕ್ತಿಗಳನ್ನು ಮೋದಿ ಸರಕಾರ ಬಲಿಕೊಟ್ಟಿದೆ. ಭಾರತ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಪರದಾಡಬೇಕಾಗಿ ಬಂದಿದೆ. ಸ್ವತಂತ್ರ ವಿದೇಶಾಂಗ ನೀತಿ ಅನುಸರಿಸುತ್ತಿದ್ದ ಕಾಲ ಆಲಿಪ್ತ ಚಳವಳಿಯ ಕಾಲಕ್ಕಾಯಿತು. ಈಗ ಟ್ರಂಪ್ – ಮೋದಿ ಯುಗದಲ್ಲಿ ಎಲ್ಲವೂ ತಲೆಕೆಳಗು, ಅಮೆರಿಕಕ್ಕೆ ಶರಣು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಲಿಂಗ ಸಮಾನತೆ ಮತ್ತು ಅಸಮಾನತೆಯ ಅಭಿವೃದ್ಧಿ ಮಾದರಿಗಳು

## ಒಂದು ತುಲನಾತ್ಮಕ ವಿಶ್ಲೇಷಣೆ

ಡಾ॥ ಟಿ. ಆರ್. ಚಂದ್ರಶೇಖರ

**ಪ್ರಸ್ತಾವನೆ**

ಲಿಂಗ ಸಮಾನತೆಯನ್ನು ಇಂದು ಅಭಿವೃದ್ಧಿಯ ಚಾಲಕ ಶಕ್ತಿಯಾಗಿ ಪರಿಗಣಿಸಲಾಗಿದೆ. ವಿಶ್ವ ಬ್ಯಾಂಕು ೨೦೧೨ರಲ್ಲಿನ ತನ್ನ ವರದಿಯಲ್ಲಿ ಲಿಂಗ ಸಮಾನತೆಯನ್ನು ಸ್ಮಾರ್ಟ್ ಎಕನಾಮಿಕ್ಸ್ ಎಂದು ಕರೆದಿದೆ. ಸ್ಮಾರ್ಟ್ ಎಕನಾಮಿಕ್ಸ್ ಪರಿಭಾವನೆಯ ಬಗ್ಗೆ ಸ್ತ್ರೀವಾದಿ ಅರ್ಥಶಾಸ್ತ್ರಜ್ಞರು ಸಕಾರಣವಾಗಿ ಟೀಕೆ ಮಾಡುತ್ತಿದ್ದಾರೆ. ಏಕೆಂದರೆ ಅಮರ್ತ್ಯ ಸೇನ್ ಅವರ ಭಾಷೆಯಲ್ಲಿ ಹೇಳುವುದಾದರೆ ಇದೊಂದು ಸಾಧನಸಂಪನ್ಮೂಲ (ಇನ್‌ಸ್ಟ್ರುಮೆಂಟಲ್) ದೃಷ್ಟಿಕೋನವಾಗಿದೆ. ಇದನ್ನು ಅಭಿವೃದ್ಧಿಯ ಸಾಧನವನ್ನಾಗಿ ಪರಿಕಿಸುವುದು ಒಂದು ಕ್ರಮವಾದರೆ, ಅದನ್ನು ಮಹಿಳೆಯರ ಅಂತರ್ಗತ ಘನತೆಗೆ ಮತ್ತು ಗೌರವದ ಬದುಕಿಗೆ ಸಂಬಂಧಿಸಿದ (ಇನ್ಟ್ರಿನ್ಸಿಕ್) ಸಂಗತಿಯಾಗಿದೆ. ಅದು ಅಭಿವೃದ್ಧಿ ಸಾಧನವಾಗಿ ಮಾತ್ರ ನಮಗೆ ಮುಖ್ಯವಲ್ಲ. ಅದಕ್ಕಿಂತ ಅಧಿಕವಾಗಿ ಅದು ಮಹಿಳೆಯರನ್ನು ಸೇರಿಸಿಕೊಂಡು ಜನರ ಬದುಕನ್ನು ಹಸನುಮಾಡುತ್ತದೆ. ಇದು ಭಾರತದ ಸಂದರ್ಭದಲ್ಲಿ ಸಂವಿಧಾನಾತ್ಮಕ ಹಕ್ಕಾಗಿದೆ (ಪರಿಚ್ಛೇದ ೧೫). ಇದು ಮಾನವ ಹಕ್ಕೂ ಹೌದು. ಸಮಾಜ ವಿಜ್ಞಾನಗಳಿಗೆ ಇದನ್ನು ಅರ್ಥ ಮಾಡಿಕೊಳ್ಳಲು ಅನೇಕ ಶತಮಾನಗಳು ಹಿಡಿದವು. ಇಂದು ಇವು ಮಹಿಳಾವಾದಿ ಪರಿಷ್ಕಾರಕ್ಕೆ ಒಳಗಾಗಿವೆ. ಸಾಂಪ್ರದಾಯಿಕ ಅಭಿವೃದ್ಧಿ ಸಿದ್ಧಾಂತಗಳನ್ನು ಲಿಂಗ ನಿರಪೇಕ್ಷ ಎಂದು ಟೀಕಿಸಲಾಗುತ್ತದೆ. ಇಂದು ಮಹಿಳಾ ಸಂಗತಿಗಳನ್ನು ಒಳಗು ಮಾಡಿಕೊಳ್ಳಲು ಸಮಾಜ ವಿಜ್ಞಾನಗಳು ಪ್ರಯತ್ನಿಸುತ್ತಿವೆ.

ಕಳೆದ ನಾಲ್ಕಾರು ವರ್ಷಗಳಿಂದ ಗುಜರಾತ್ ಅಭಿವೃದ್ಧಿ ಮಾದರಿಯ ಬಗ್ಗೆ ಹೆಚ್ಚು ಚರ್ಚೆ ನಡೆಯುತ್ತಿದೆ. ಈ ಮಾದರಿಯನ್ನು ರಾಜಕಾರಣದ ಬೆಂಬಲದಿಂದ ವೈಭವೀಕರಿಸಲಾಗಿದೆ. ಅದು ಶುದ್ಧಾಂಗ ಪೊಳ್ಳು ಮಾದರಿ ಎಂಬುದನ್ನು ಅನೇಕ ಅಧ್ಯಯನಗಳು ದೃಢಪಡಿಸಿವೆ. ಇತ್ತೀಚೆಗೆ ಉತ್ತರ ಪ್ರದೇಶದ ಮುಖ್ಯಮಂತ್ರಿಗಳು ಅಭಿವೃದ್ಧಿ ಬಗ್ಗೆ ಪಾಠ ಮಾಡಲು ದಕ್ಷಿಣ ಭಾರತದ ರಾಜ್ಯಗಳಿಗೆ ಭೇಟಿ ನೀಡುತ್ತಿದ್ದಾರೆ. ದಕ್ಷಿಣ ಭಾರತದ ರಾಜ್ಯಗಳ ಸಾಧನೆಯ ಬಗ್ಗೆ ಅಸೂಯಾಪರ ಟೀಕೆಗಳು ಉತ್ತರ ಭಾರತದ ರಾಜಕಾರಣಿಗಳಿಂದ ಕೇಳಿಬರುತ್ತಿವೆ. ಪ್ರಸ್ತುತ ಪ್ರಬಂಧದಲ್ಲಿ ಅಭಿವೃದ್ಧಿಯಲ್ಲಿ ಲಿಂಗ ಸಮಾನತೆಯನ್ನು ಸಾಧಿಸಿಕೊಂಡಿರುವ ಕೇರಳ ಮತ್ತು ಅದರ ದಾರಿಯಲ್ಲಿ ನಡೆದಿರುವ ಕರ್ನಾಟಕ ಅಭಿವೃದ್ಧಿ ಮಾದರಿಗಳನ್ನು ಲಿಂಗ ಅಸಮಾನತೆಯ ಕೂಪದಲ್ಲಿರುವ ಗುಜರಾತ್ ಮತ್ತು ಉತ್ತರ ಪ್ರದೇಶಗಳ ಅಭಿವೃದ್ಧಿ ಮಾದರಿಗಳ ಜೊತೆ ತುಲನೆ ಮಾಡಿ ಅವುಗಳ ನಡುವಿನ ಭಿನ್ನತೆಯನ್ನು ವಿಶ್ಲೇಷಿಸಲಾಗಿದೆ. ಕಾಲಕಾಲಕ್ಕೆ ಕೇಂದ್ರ ಸರ್ಕಾರವು ನಡೆಸುವ ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆಯ ೪ನೆಯ ಸುತ್ತಿನ ದತ್ತಾಂಶಗಳನ್ನು ಇಲ್ಲಿ ಚರ್ಚೆಗೆ ಬಳಸಿಕೊಳ್ಳಲಾಗಿದೆ. ಇವೆಲ್ಲ ಅಧಿಕೃತ ಅಂಕಿಅಂಶಗಳಾಗಿವೆ. ಈ ಅಂಕಿಅಂಶಗಳು ೨೦೧೫-೧೬ನೆಯ ಸಾಲಿಗೆ ಅನ್ವಯವಾಗುವ ಸಂಗತಿಗಳಾಗಿವೆ.

**ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆ-೪ (೨೦೧೫-೧೬) ದತ್ತಾಂಶ**

| ಮಹಿಳೆಯರ ಸ್ಥಿತಿಗತಿ ಸೂಚಿಗಳು | ಕರ್ನಾಟಕ | ಕೇರಳ | ಗುಜರಾತ್ | ಉತ್ತರ ಪ್ರದೇಶ |
|---|---|---|---|---|
| ಲಿಂಗ ಅನುಪಾತ (ಪ್ರತಿ ಸಾವಿರ ಪುರುಷರಿಗೆ ಮಹಿಳೆಯರ ಸಂಖ್ಯೆ) | ೯೭೯ | ೧೦೪೯ | ೯೫೦ | ೯೯೫ |
| ಮಹಿಳೆಯರ (೧೫-೪೯ ವರ್ಷ ವಯೋಮಾನ) ಸಾಕ್ಷರತಾ ಪ್ರಮಾಣ | ೭೧.೭ | ೯೭.೯ | ೭೨.೯ | ೬೧.೦ |
| ಪುರುಷರ (೧೫-೪೯ ವರ್ಷ ವಯೋಮಾನ) ಸಾಕ್ಷರತಾ ಪ್ರಮಾಣ | ೮೫.೧ | ೯೮.೭ | ೮೯.೬ | ೮೨.೪ |
| ಶಾಸನಾತ್ಮಕ ವಯಸ್ಸಿಗೆ ಮೊದಲೆ (೧೮ ವರ್ಷಗಳು) ಮದುವೆಯಾದ ೨೦-೨೪ ವಯೋಮಾನದ ಮಹಿಳೆಯರು (ಶೇ.) | ೨೧.೪ | ೭.೬ | ೨೪.೯ | ೨೧.೨ |
| ಶಿಶು (ಒಂದು ವರ್ಷದೊಳಗೆ) ಮರಣ ಪ್ರಮಾಣ (ಪ್ರತಿ ಸಾವಿರ ಜನನಕ್ಕೆ) | ೨೮ | ೬ | ೩೪ | ೬೪ |
| ಮಕ್ಕಳ (ಐದು ವರ್ಷದೊಳಗೆ) ಮರಣ ಪ್ರಮಾಣ (ಪ್ರತಿ ಸಾವಿರ ಜನನಕ್ಕೆ) | ೩೨ | ೭ | ೪೩ | ೭೮ |
| ಒಟ್ಟು ಸಂತಾನೋತ್ಪತ್ತಿ ಪ್ರಮಾಣ (ಮಹಿಳೆಯೊಬ್ಬಳು ತನ್ನ ಸಂತಾನೋತ್ಪತ್ತಿ ಅವಧಿಯಲ್ಲಿ ಜನ್ಮ ನೀಡುವ ಮಕ್ಕಳ ಸಂಖ್ಯೆ) | ೧.೮ | ೧.೬ | ೨.೦ | ೨.೭ |
| ಮಹಿಳೆಯರಲ್ಲಿ (೧೫-೪೯ ವರ್ಷ ವಯೋಮಾನ) ಅನೀಮಿಯ (ಶೇ.) | ೪೪.೮ | ೩೪.೨ | ೫೪.೯ | ೫೨.೪ |
| ಮಕ್ಕಳಲ್ಲಿ (೬ರಿಂದ ೫೯ ತಿಂಗಳ ವಯೋಮಾನ) ಅನೀಮಿಯ (ಶೇ.) | ೬೦.೯ | ೩೫.೬ | ೬೨.೬ | ೬೩.೨ |
| ಗರ್ಭಿಣಿ ಮಹಿಳೆಯರಲ್ಲಿ ಅನೀಮಿಯ (ಶೇ.) | ೪೫.೪ | ೨೨.೬ | ೫೧.೩ | ೫೧.೦ |
| ಮನೆ / ಭೂಮಿ ಮಾಲೀಕತ್ವ ಹೊಂದಿರುವ ಮಹಿಳೆಯರ ಪ್ರಮಾಣ (ಶೇ.) | ೫೧.೮ | ೩೪.೪ | ೨೭.೨ | ೩೪.೨ |
| ಸಾಂಸ್ಥಿಕ ಹೆರಿಗೆ (ಶೇ.) | ೯೪.೩ | ೯೯.೯ | ೮೮.೭ | ೬೭.೮ |



ಈ ಕೋಷ್ಟಕದಲ್ಲಿ ಕೇರಳ ಮತ್ತು ಕರ್ನಾಟಕ ರಾಜ್ಯಗಳು ಮಹಿಳಾಪರ ಅಭಿವೃದ್ಧಿ ಮಾದರಿಯನ್ನು ಪ್ರತಿನಿಧಿಸಿದರೆ ಗುಜರಾತ್ ಮತ್ತು ಉತ್ತರ ಪ್ರದೇಶ ರಾಜ್ಯಗಳು ಲಿಂಗ ಅಸಮಾನತೆಯ ಅಭಿವೃದ್ಧಿ ಮಾದರಿಯನ್ನು ಪ್ರತಿನಿಧಿಸುತ್ತವೆ. ಅನೇಕರು ಗುಜರಾತ್ ಮತ್ತು ಉತ್ತರ ಪ್ರದೇಶ ಅಭಿವೃದ್ಧಿ ಮಾದರಿಗಳಿಂದ ಉಳಿದ ರಾಜ್ಯಗಳು ಪಾಠ ಕಲಿಯಬೇಕು ಎಂದು ಒತ್ತಾಯಿಸುತ್ತಿದ್ದಾರೆ. ಭಾರತವೂ ಕೂಡ ಗುಜರಾತ್ ಅಭಿವೃದ್ಧಿ ಮಾದರಿಯನ್ನು ಅಳವಡಿಸಿಕೊಳ್ಳಬೇಕು ಎಂದು ಅನೇಕರು ಅಬ್ಬರಿಸುತ್ತಿದ್ದಾರೆ. ಇದೊಂದು ಪೊಳ್ಳುವಾದ ಎಂಬುದು ಕೋಷ್ಟಕದಲ್ಲಿನ ದತ್ತಾಂಶಗಳಿಂದ ಸ್ಪಷ್ಟವಾಗುತ್ತದೆ. ಇಲ್ಲಿ ನೀಡಿರುವ ೧೨ ಸೂಚಿಗಳಲ್ಲಿ ಉತ್ತರ ಪ್ರದೇಶದ ಲಿಂಗ ಅನುಪಾತವನ್ನು ಮತ್ತು ಗುಜರಾತಿನ ಸಾಕ್ಷರತೆ ಪ್ರಮಾಣಗಳನ್ನು ಬಿಟ್ಟರೆ ಉಳಿದಂತೆ ಲಿಂಗ ಸಮಾನತೆಯ ಸಾಧನೆಯಲ್ಲಿ ಕೇರಳ ಮತ್ತು ಅದರ ದಾರಿಯಲ್ಲಿ ನಡೆದಿರುವ ಕರ್ನಾಟಕ ಗೆಲುವನ್ನು ಸಾಧಿಸಿಕೊಂಡಿದ್ದರೆ ಗುಜರಾತ್ ಮತ್ತು ಉತ್ತರ ಪ್ರದೇಶ ಹೀನಾಯವಾಗಿ ಸೋತಿವೆ. ಮೊದಲ ಎರಡು ರಾಜ್ಯಗಳ ಅಭಿವೃದ್ಧಿಯು ಲಿಂಗ ಸಂವೇದಿಯಾಗಿದ್ದರೆ ಕೊನೆಯ ಎರಡು ರಾಜ್ಯಗಳ ಅಭಿವೃದ್ಧಿ ಲಿಂಗ ಅಸಮಾನತೆಯನ್ನು ಪೋಷಿಸುತ್ತಿರುವುದು ಕಂಡುಬರುತ್ತದೆ.

ಲಿಂಗ ಸಮಾನತೆಯು ತನ್ನಷ್ಟಕ್ಕೆ ತಾನೇ ಸಾಧ್ಯವಾಗುವ ಸಂಗತಿಯಲ್ಲ. ಸಾಕ್ಷರತೆ ಮತ್ತು ಶಿಕ್ಷಣದ ಮಟ್ಟ ಉತ್ತಮಗೊಂಡರೆ ಮತ್ತು ವರಮಾನದ ಮಟ್ಟ ಏರಿಕೆಯಾದರೆ ತನ್ನಷ್ಟಕ್ಕೆ ತಾನೇ ಲಿಂಗ ಸಮಾನತೆ ಬಂದುಬಿಡುತ್ತದೆ ಎಂಬ ಭ್ರಮೆ ಅನೇಕರಲ್ಲಿದೆ. ಇದು ಕೇವಲ ಒಂದು ಭ್ರಮೆ ಎನ್ನುವುದು ಮತ್ತೆ ಮತ್ತೆ ದೇಶದಾದ್ಯಂತ ನಡೆಯುತ್ತಿರುವ ಮಹಿಳೆಯರ ಮೇಲಿನ ಅತ್ಯಾಚಾರ, ದೌರ್ಜನ್ಯ, ಹಿಂಸೆ ಯಾವುದೇ ಅನುಮಾನವಿಲ್ಲದಂತೆ ಖಚಿತ ಪಡಿಸುತ್ತಿವೆ. ಅನೇಕ ಸಾಂಸ್ಕೃತಿಕ ನಾಯಕರು ಹೇಳುವಂತೆ ಇವೆಲ್ಲ ನಗರ ಪ್ರದೇಶಕ್ಕೆ ಮಾತ್ರ ಮೀಸಲಾದ ಅಥವಾ ಪಶ್ಚಿಮದ ಸಂಸ್ಕೃತಿಯಿಂದ ಉಂಟಾಗುತ್ತಿರುವ ವಿಕೃತಿಗಳಲ್ಲ. ಮಹಿಳೆಯರ ಮೇಲೆ ನಡೆಯುತ್ತಿರುವ ಹಿಂಸೆ, ದೌರ್ಜನ್ಯ, ಅತ್ಯಾಚಾರಗಳಲ್ಲಿ ನಮ್ಮ ಸಂಸ್ಕೃತಿಯನ್ನು ಹೆಮ್ಮೆಯಿಂದ ಪೊಗಳುವವರು, ಗ್ರಾಮೀಣರು, ವಯೋವೃದ್ಧರು, ಅಪ್ರಾಪ್ತ ವಯಸ್ಕರು ತೊಡಗಿರುವುದು ಕಂಡುಬರುತ್ತದೆ.

**ಲಿಂಗ ತಾರತಮ್ಯದ ಉತ್ತುಂಗ**

ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆ ೪ರ ಪ್ರಕಾರ ೨೦೧೫–೧೬ರಲ್ಲಿ ಸಾಕ್ಷರತೆಯಲ್ಲಿ ಲಿಂಗಸಂಬಂಧಿ ಅಸಮಾನತೆ ಗುಜರಾತ್ ಮತ್ತು ಉತ್ತರ ಪ್ರದೇಶಗಳಲ್ಲಿ ತೀವ್ರವಾಗಿರುವುದನ್ನು ಗಮನಿಸ ಬಹುದು. ಈ ತಾರತಮ್ಯದ ಪ್ರಮಾಣ ಕರ್ನಾಟಕದಲ್ಲಿ ಶೇ. ೧೩.೪ ಅಂಶಗಳಷ್ಟಿದ್ದರೆ ಕೇರಳದಲ್ಲಿ ಇದು ಕೇವಲ ಶೇ. ೦.೮ ಅಂಶಗಳಷ್ಟಿದೆ. ಆದರೆ ಗುಜರಾತ್ ಮತ್ತು ಉತ್ತರ ಪ್ರದೇಶ ರಾಜ್ಯಗಳಲ್ಲಿ ಇದು ಕ್ರಮವಾಗಿ ಶೇ. ೧೬.೭ ಮತ್ತು ಶೇ. ೨೧.೪ರಷ್ಟಿದೆ. ವಾಸ್ತವವಾಗಿ ಗುಜರಾತಿನ ಸಾಕ್ಷರತೆ ಪ್ರಮಾಣ ಕರ್ನಾಟಕದಲ್ಲಿನ ಸಾಕ್ಷರತೆ ಪ್ರಮಾಣಕ್ಕಿಂತ ಅಧಿಕವಾಗಿದೆ. ಆದರೆ ಲಿಂಗ ಸಂಬಂಧಿ ಸಾಕ್ಷರತಾ ಅಸಮಾನತೆ ಕರ್ನಾಟಕಕ್ಕಿಂತ ಗುಜರಾತಿನಲ್ಲಿ ಅಧಿಕವಾಗಿದೆ.

## ಉತ್ತರ ಪ್ರದೇಶ ರಾಜ್ಯದಲ್ಲಿ ಲಿಂಗ ಅನುಪಾತ?

ಈ ವಿಷಯಕ್ಕೆ ಸಂಬಂಧಿಸಿದಂತೆ ಒಂದು ಸಮಸ್ಯೆಯಿದೆ. ಈ ರಾಜ್ಯದ ಲಿಂಗ ಅನುಪಾತ ೨೦೦೧ರಲ್ಲಿ ೮೯೮ರಷ್ಟಿದ್ದುದು ೨೦೧೧ರಲ್ಲಿ ೯೧೨ರಷ್ಟಾಗಿದೆ. ಆದರೆ ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆ ೪ರ ಪ್ರಕಾರ ೨೦೧೫-೧೬ರಲ್ಲಿ ಇದರ ಲಿಂಗ ಅನುಪಾತ ೯೯೫. ಇದೊಂದು ಮಹತ್ವದ ಸುಧಾರಣೆಯಾಗಿದೆ. ಆದರೆ ಕೇವಲ ೪-೫ ವರ್ಷಗಳಲ್ಲಿ ಲಿಂಗ ಅನುಪಾತ ೯೧೨ರಿಂದ ೯೯೫ಕ್ಕೆ ಏರಿಕೆಯಾಗಿರುವುದು ಅಚ್ಚರಿಯ ಸಂಗತಿಯಾಗಿದೆ. ಕಳೆದ ೨೦೦೧ರಿಂದ ೨೦೧೧ರ ದಶಕದಲ್ಲಿ ಲಿಂಗ ಅನುಪಾತದಲ್ಲಿ ಉಂಟಾದ ಏರಿಕೆ ಕೇವಲ ೧೪. ಆದರೆ ೨೦೧೧ರಿಂದ ೨೦೧೫-೧೬ರಲ್ಲಿ ಉಂಟಾಗಿರುವ ಏರಿಕೆ ೮೩. ಇದನ್ನು ಎಚ್ಚರಿಕೆಯಿಂದ ಗಮನಿಸುವ ಅಗತ್ಯವಿದೆ.

ರಕ್ತಹೀನತೆ ಅಥವಾ ಅನೀಮಿಯ ರೋಗ ಮಹಿಳೆಯರನ್ನು ಕಾಡುತ್ತಿರುವ ರೋಗ. ಈ ವಿಷಯದಲ್ಲಿಯೂ ಗುಜರಾತ್ ಮತ್ತು ಉತ್ತರ ಪ್ರದೇಶಗಳ ಸಾಧನೆ ಕರ್ನಾಟಕ ಮತ್ತು ಕೇರಳ ರಾಜ್ಯಗಳೆದುರಿಗೆ ಅತ್ಯಂತ ಕೆಳಮಟ್ಟದಲ್ಲಿದೆ. ಈ ರಾಜ್ಯಗಳಲ್ಲಿ ಒಟ್ಟು ಗರ್ಭಿಣಿಯರಲ್ಲಿ ಶೇ. ೫೦ರಷ್ಟು ಅನೀಮಿಯ ಎದುರಿಸುತ್ತಿದ್ದಾರೆ. ಈ ವಿಷಯದಲ್ಲಿ ಅತ್ಯುತ್ತಮ ಸಾಧನೆ ಕೇರಳ ರಾಜ್ಯದ್ದಾಗಿದೆ. ಇದೇ ಸ್ಥಿತಿ ಶಿಶುಗಳ ಮತ್ತು ಮಕ್ಕಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆಯೂ ಕಾಣಬಹುದಾಗಿದೆ. ಅನೀಮಿಯಕ್ಕೆ ಅಂತರತಲೆಮಾರು ಆಯಾಮವಿದೆ. ಅನೀಮಿಯ ಎದುರಿಸುತ್ತಿರುವ ತಾಯಂದಿರು ಶಿಫಾರಸ್ಸು ಮಾಡಿದುದಕ್ಕಿಂತ ಕಡಿಮೆ ತೂಕದ ಮಕ್ಕಳನ್ನು ಹಡೆಯುತ್ತಾರೆ. ಹೀಗೆ ಅಪೌಷ್ಟಿಕತೆಯು ತಲೆಮಾರಿನಿಂದ ತಲೆಮಾರಿಗೆ ಹರಿಯುತ್ತದೆ. ಇದು ಮಕ್ಕಳ ಗ್ರಹಣಶಕ್ತಿಯನ್ನು ಕುಂದಿಸುತ್ತದೆ.

**ಆರ್ಥಿಕ ಸಮೃದ್ಧತೆ**

ಒಂದು ಕಾಲಕ್ಕೆ ಗುಜರಾತ್ ರಾಜ್ಯವು ಕೇರಳ ಮತ್ತು ಕರ್ನಾಟಕಗಳಿಗಿಂತ ಆರ್ಥಿಕವಾಗಿ ಹೆಚ್ಚು ಸಮೃದ್ಧವಾಗಿತ್ತು. ಈ ವಿಷಯವನ್ನಿಟ್ಟುಕೊಂಡು ಕೇರಳ ರಾಜ್ಯದ ಬೆಳವಣಿಗೆಯನ್ನು ಟೀಕಿಸಲಾಗುತ್ತಿತ್ತು. ಆದರೆ ಇಂದು ಕೇರಳ ಮತ್ತು ಕರ್ನಾಟಕ ರಾಜ್ಯಗಳು ಆರ್ಥಿಕವಾಗಿಯೂ ಸಮೃದ್ಧತೆಯನ್ನು ಅನುಭವಿಸುತ್ತಿವೆ. ಕೇಂದ್ರ ಆರ್ಥಿಕ ಸಮೀಕ್ಷೆ ೨೦೧೭–೧೮ರ ಪ್ರಕಾರ ೨೦೧೫–೧೬ರಲ್ಲಿ ಕೇರಳ ಮತ್ತು ಕರ್ನಾಟಕ ರಾಜ್ಯಗಳ ತಲಾ ನಿವ್ವಳ ರಾಜ್ಯ ಆಂತರಿಕ ಉತ್ಪನ್ನ (ಚಾಲ್ತಿ ಬೆಲೆ) ಕ್ರಮವಾಗಿ ರೂ. ೧೪೭೮೯೦ ಮತ್ತು ರೂ. ೧೪೨೯೦೬. ಆದರೆ ಅದೇ ವರ್ಷಕ್ಕೆ ಗುಜರಾತ್ ಮತ್ತು ಉತ್ತರ ಪ್ರದೇಶಗಳ ತಲಾ ನಿವ್ವಳ ರಾಜ್ಯ ಆಂತರಿಕ ಉತ್ಪನ್ನ ಕ್ರಮವಾಗಿ ರೂ. ೧೪೧೫೦೪ ಮತ್ತು ರೂ. ೪೬೨೯೫. ಲಿಂಗ ಸಮಾನತೆ ಮಾತ್ರವಲ್ಲ, ಆರ್ಥಿಕ ಸಮೃದ್ಧತೆಯಲ್ಲಿಯೂ ಕೇರಳ ಮತ್ತು ಕರ್ನಾಟಕ ಗುಜರಾತ್ ಮತ್ತು ಉತ್ತರ ಪ್ರದೇಶಗಳಿಗಿಂತ ಉತ್ತಮ ಸ್ಥಿತಿಯಲ್ಲಿವೆ. ದುರದೃಷ್ಟದ ಸಂಗತಿಯೆಂದರೆ ಉತ್ತರ ಪ್ರದೇಶದ ಮುಖ್ಯಮಂತ್ರಿ ಅಭಿವೃದ್ಧಿ ಬಗ್ಗೆ ಪಾಠ ಹೇಳಲು ಕೇರಳಕ್ಕೆ ಮತ್ತು ಕರ್ನಾಟಕಕ್ಕೆ ಬರುತ್ತಾರೆ. ಸತ್ಯ ಕಟುವಾಗಿರುತ್ತದೆ ಎಂದು ಹೇಳುತ್ತಾರೆ. ಅದನ್ನು ಅರಗಿಸಿಕೊಳ್ಳುವುದಕ್ಕೆ ಶಕ್ತಿ ಬೇಕು. ಅದು ಕೊರತೆಯಾದಾಗ ಶ್ರೇಷ್ಠತೆಯ ನಾಟಕವಾಡಬೇಕಾಗುತ್ತದೆ. ಹಾಗಾಗಿ ಗುಜರಾತ್ ಮಾದರಿಯು ಅಂತಹ ಒಂದು ನಾಟಕದ ಭಾಗ! ಅದರಲ್ಲಿ ಹುರುಳಿಲ್ಲ. ಇದನ್ನು ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆ ೪ ಅಂಕಿಸಂಖ್ಯೆಗಳು ದೃಢಪಡಿಸುತ್ತಿದೆ.

**ಡಾ|| ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕರು, ನಂ. ೯.೯/೧, ೪ನೇ ಮುಖ್ಯರಸ್ತೆ
೨ನೇ ಅಡ್ಡರಸ್ತೆ, ಬೇಗೂರು ಮುಖ್ಯರಸ್ತೆ
(ಶ್ರೀನಿವಾಸ ಕಲ್ಯಾಣ ಮಂಟಪದ ಹತ್ತಿರ)
ಹೊಂಗಸಂದ್ರ, ಬೆಂಗಳೂರು – ೫೬೦ ೦೬೮



ತಿಂಗಳ ಕಥೆ



'ಕ್ಷಮಿಸಿಬಿಡು... ಕ್ಷಮಿಸಿಬಿಡು... ಕ್ಷಮಿಸು ಪ್ಲೀಸ್...!' ಇನ್ನ್ಯಾವ ಹೇಳಿಕೆಗಳೂ ಬೇಡವಿತ್ತು ನನಗೂ... ಅಂದು ನಮ್ಮಿಬ್ಬರ ನಡುವೆ ಹೊಸ ಸಲುಗೆ, ಹೊಸ ನೋಟ... ಹೊಸ ಪ್ರೀತಿ... ಇವನೇನಾ ನನ್ನವ... ಓಹ್ ಮತ್ತೆ ಮೊದಲಿನಂತಾಗಿದ್ದಾನೆ... ನನ್ನವನೇ ಇವನು.. ನನ್ನ ಪ್ರೀತಿ-ಪ್ರೇಮ-ದೇಹ-ಕಾಮ ಎಲ್ಲದರ ಸ್ವತ್ತು.. ಇಂಥ ಸಂಭ್ರಮಕ್ಕಾಗಿಯೇ ನಾನು ಒಂಟೊಂಟಿಯಾಗಿ... ಅದೆಷ್ಟು ದಿನಗಳು ರೋದಿಸುತ್ತಾ ಇರುತ್ತಿದ್ದೆ.. ನೀನಿಲ್ಲದಿದ್ದರಂತೂ ನನ್ನೊಳಗೆ ನಾನೇ ಮಲಗಿಬಿಡುತ್ತಿದ್ದೆ... ಸಾವಾಗಿ! ನೀನು ಬಂದೆ.. ನಾನು ಬದುಕಿದೆ.... ಇಂದಿನವರೆಗೂ ನಾ ಬದುಕಿದ್ದರೆ... ಮನುಷ್ಯಳಾಗಿದ್ದರೆ... ಅದು ನಿನ್ನಿಂದಲೇ... ಕಣ್ಮುಚ್ಚಿದೆ...

# ವಿಚ್ಛೇದನ

ನಂಗೊತ್ತಿತ್ತು, ಇವತ್ತು ಅವನು ಬರುವ ಹೊತ್ತಿಗೆ ಯಾವುದಾದರೂ ವಿಷಯದಲ್ಲಿ ತಲೆಕೆಡಿಸಿಕೊಂಡವನಂತೆ ಬರುತ್ತಾನೆಂತ. ಆದರೆ ಹೀಗೆ ಬಂದು ಮನೆಯ ಬಾಗಿಲಲ್ಲಿ ನಿಂತಿದ್ದಾನೆ ಅನ್ನುವಾಗಲೇ ನನ್ನೊಳಗೊಂದು ಸಣ್ಣ ನಡುಕ ಹುಟ್ಟಿಕೊಂಡು ಬಿಟ್ಟಿರುತ್ತದೆ.  ಹೆಂಡತಿ ನಾನು, ಹೇಗಿದ್ದರೂ ಕಷ್ಟ.. ಹೀಗೆ ಅಂತ ಹೇಗೆ ಹೇಳಲಿ? ಯಾರಿಗೆ ಹೇಳಲಿ? ಸಮಾನತೆ, ಸಮಾನ ವಿಚಾರ, ಅನುಭವ, ವಿಶ್ಲೇಷಣೆ, ಜೊತೆಜೊತೆಗೆ ಬಾಳುವ ಜೋಡೆತ್ತುಗಳು.. ಒಂದೇ ಹಳಿಯ ಎರಡು ರಸ್ತೆಗಳು... ಇದೆಲ್ಲಾ ಸಂಸಾರದೊಳಗೆ ನಿಭಾಯಿಸುವಾಗ ಏನೇನೂ ಲಾಭ ತರದು... ಕೇಳುವುದು ಹೇಳಲಿಕ್ಕಾಗದು, ಹೇಳದೇ ಇರಲಾಗದ್ದನ್ನು ನುಂಗಿಯೇ ತೀರಬೇಕು... ಇಬ್ಬರು ಒಟ್ಟಾಗಿ ಹತ್ತು ವರ್ಷಗಳ ಹಿಂದೆ ಅನ್ಯೋನ್ಯವಾಗಿ ಬೆರೆತು ಸಂಸಾರ ನೌಕೆಗೆ ಸೇರಿದಾಗ ಎದೆಯುಬ್ಬಿಸಿ ಹೇಳಲು ನೂರಾರು ಕಾರಣಗಳಿದ್ದವು... ಈಗೀಗ ಮನೆಗೇಕೆ ಬರುತ್ತಾನೀತ? ಏಕಾದರೂ ಬಾಯಿ ತೆರೆಯುತ್ತಾನೋ? ಬರೀ ಖರ್ಚುಗಳ ಬಾಬ್ತು ತಿಳಿಸಿ ಒಂದಷ್ಟು ಸಂಬಳ ಕಸಿದುಕೊಳ್ಳುತ್ತಾನೆ, ಮತ್ತೇನಾದರೂ ಗುಮಾನಿಯಿಂದ ಮೊಬೈಲ್ ಮೇಲೆತ್ತಿಕೊಂಡು ನನ್ನ ವಾಟ್ಸ್ಯಾಪ್, ಫೇಸ್‌ಬುಕ್, ಟ್ವಿಟ್ಟರ್‌ಗಳಲ್ಲಿ ಕೈಯ್ಯಾಡಿಸಿ, ಏನೂ ಜಗಳಕ್ಕೆ ತಕ್ಕುದಾದ್ದು ಸಿಗಲಿಲ್ಲವೆಂದಾಗ, ಸಾಂಬಾರು ಖಾರವಿಲ್ಲ, ಮಜ್ಜಿಗೆ ಇನ್ನಷ್ಟು ಬೇಕಿತ್ತು, ಅಂತೇನೋ ಸಬೂಬು ಹೇಳಿ, ಮಲಗುವ ಮೊದಲು ತನ್ನ ಮೊಬೈಲ್ ತೆರೆದು ಮೆಸೇಜುಗಳನ್ನು ರವಾನಿಸಿ ಗೊರಕೆಗೆ ಬೀಳುತ್ತಾನೆ. ಮಹರಾಯ, ಒಮ್ಮೆ ನೋಡಲಾ ಅಂದರೆ ಪಾಸ್‌ವರ್ಡ್ ನಂಗೊತ್ತಿಲ್ಲವಲ್ಲ. ಇಂದೂ ಹಾಗೆಯೇ... ಟಿವಿ ಸ್ಟ್ಯಾಂಡಿನ ಮುಂದೆ ಕೂತು ನನ್ನದೇ ಪ್ರತಿಬಿಂಬವನ್ನ ನೋಡುತ್ತಾ ಇದನ್ನೆಲ್ಲ ಯೋಚಿಸುತ್ತಿರುವಾಗ, ಅವನು ಸದ್ದಿಲ್ಲದೆ ಬಂದು ಷೂ ಕಳಚಿ, ಸಾಕ್ಸ್ ಬಿಸುಟು ನನ್ನ ಪಕ್ಕದಲ್ಲಿ ಆಸೀನನಾಗಿದ್ದ. ನನ್ನಲ್ಲಿದ್ದ ಅಷ್ಟೂ ತಳಮಳಗಳೂ ಸಹ ಇದ್ದಹಾಗೇ ಇದ್ದುದರಿಂದ ನಂಬಿಕೆಯಿಲ್ಲದ ಜೀವನ ಇನ್ನೆಷ್ಟು ದಿನ, "ನೀನು ಡಿವೋರ್ಸ್ ಕೊಡು" ಅಂತೆಲ್ಲಾ ಕಳೆದ ಹಲವು ವರ್ಷಗಳಿಂದ ಕೇಳುತ್ತಿದ್ದ. ನಿತ್ಯ ಪ್ರಾರ್ಥನೆಯಂತಿರುವಾಗ ನನ್ನಂತೆ ನನ್ನ ಸ್ಥಾನದಲ್ಲಿರುವ ಹೆಣ್ಣುಮಗಳು ಇನ್ನೇನು ಮಾಡಬೇಕು? ಪಕ್ಕದಲ್ಲಿ ಗಂಡನೇ ಕೂತಿದ್ದಾನೆ, ಆದರೆ ಭಾವನೆ ಬರಬೇಕಲ್ಲ? ಏತಕ್ಕೆ ಮತ್ತಷ್ಟು ಹಿಂಸೆ, ಭಯ ನನ್ನನ್ನು ಕಾಡತೊಡಗುತ್ತಾ... ಆಫ್ ಮಾಡಿದ್ದ ಟಿವಿಯಲ್ಲಿ ನನ್ನ ಪಕ್ಕ ಕೂತ ಗಂಡನ ಪ್ರತಿಬಿಂಬ ನೋಡತೊಡಗಿದ್ದೆ. ಆತ ಎವೆಯಿಕ್ಕದೆ ನನ್ನನ್ನೇ ನೋಡುತ್ತಿದ್ದಾನೆ. ತಳಮಳ ಹೆಚ್ಚಾದರೂ, ಸಾವರಿಸಿಕೊಂಡು ಪ್ರತಿಬಿಂಬದಿಂದ ಹೊರಬಂದು ನನ್ನವನ ಕಡೆಗೆ ನೋಡತೊಡಗಿದೆ... ಕಣ್ಣಲ್ಲಿ ಯಾವುದೋ ಭಾವ... ಅವನು ಅವನಂತಿಲ್ಲದ ಹೊಸ ಹುಡುಗನ ಕಳೆ ಮೊಗದಲ್ಲಿ... ಚಿಂತಿಸಿ ಮುದುಕಿಯಾಗುತ್ತಿರುವ ನನ್ನ ಕಣ್ಣುಗಳು ಸುಳ್ಳು ಹೇಳುತ್ತಿಲ್ಲ... ಇವನು ಖರೇ ನನ್ನ ಗಂಡನೇ... ಇವನ ಹೊರತು ಇನ್ನ್ಯಾವ ಪುರುಷನೂ ಇಷ್ಟು ಹತ್ತಿರದಿಂದ ನನ್ನನ್ನು ನೋಡೇ ಇಲ್ಲ ಬಿಡಿ...

ನಾನು ಅವನಿಂದ ಓದಿಸಿಕೊಳ್ಳುವ ಪುಸ್ತಕವಾಗಬಾರದು... ಥಟ್ಟನೆ... ಎದ್ದು ಅಡುಗೆಮನೆಗೆ ಹೋದೆ... ಹಿಂದೆಯೇ ಬೆನ್ನತ್ತಿ ಬಂದ ನನ್ನವ... 'ದೂರವಾಗುವ ಮಾತನಾಡುತ್ತಲೇ ಬೆಳೆದೆಯಲ್ಲೋ ಹುಡುಗ... ಒಂದು ನಿಮಿಷವಾದರೂ ಹತ್ತಿರ ನಿಂತು ಎದೆಗೆ ಎದೆ ಕೊಟ್ಟು.. ಕಣ್ಣಲ್ಲಿ ಕಣ್ಣಿಟ್ಟು ಕಂಡಿದ್ದೀಯಾ ನನ್ನೊಳಗಿನ ಸುಖ!' ನನ್ನಾತ್ಮ ಒಳಗೊಳಗೆ ಚೀರುತಿತ್ತು..  ಸೀದಾ ಅಡುಗೆಮನೆಗೆ ಬಂದವರೇ... ನನ್ನೆರಡು ಕೈಗಳನ್ನು ಹಿಡಿದುಕೊಂಡರು..  ಏನೂ ಹೇಳಲು ಹಿಂಜರಿಕೆ ನನಗೆ... ಏನಾಗುತ್ತಿದೆ ಅಂತ ನಿಮ್ಮಷ್ಟೇ ಅಚ್ಚರಿಯಿಂದ ನೋಡುತ್ತಿದ್ದೇನೆ... ಆತ್ಮದ ಗೋಳು ಆಲಿಸಿದನೇ ಸಖ!

'ಕ್ಷಮಿಸಿಬಿಡು... ಕ್ಷಮಿಸಿಬಿಡು... ಕ್ಷಮಿಸು ಪ್ಲೀಸ್...!' ಇನ್ನ್ಯಾವ ಹೇಳಿಕೆಗಳೂ ಬೇಡವಿತ್ತು ನನಗೂ... ಅಂದು ನಮ್ಮಿಬ್ಬರ ನಡುವೆ ಹೊಸ ಸಲುಗೆ, ಹೊಸ ನೋಟ... ಹೊಸ ಪ್ರೀತಿ... ಇವನೇನಾ ನನ್ನವ... ಓಹ್ ಮತ್ತೆ ಮೊದಲಿನಂತಾಗಿದ್ದಾನೆ... ನನ್ನವನೇ ಇವನು.. ನನ್ನ ಪ್ರೀತಿ–

ನಳಿನ ಡಿ.

ಪ್ರೇಮ – ದೇಹ – ಕಾಮ ಎಲ್ಲದರ ಸ್ವತ್ತು.. ಇಂಥ ಸಂಭ್ರಮಕ್ಕಾಗಿಯೇ ನಾನು ಒಂಟೊಂಟಿಯಾಗಿ... ಅದೆಷ್ಟು ದಿನಗಳು ರೋದಿಸುತ್ತಾ ಇರುತ್ತಿದ್ದೆ.. ನೀನಿಲ್ಲದಿದ್ದರಂತೂ ನನ್ನೊಳಗೆ ನಾನೇ ಮಲಗಿ ಬಿಡುತ್ತಿದ್ದೆ... ಸಾವಾಗಿ! ನೀನು ಬಂದೆ.. ನಾನು ಬದುಕಿದೆ.... ಇಂದಿನವರೆಗೂ ನಾ ಬದುಕಿದ್ದರೆ... ಮನುಷ್ಯಳಾಗಿದ್ದರೆ... ಅದು ನಿನ್ನಿಂದಲೇ... ಕಣ್ಮುಚ್ಚಿದೆ...

ಅವನ ಬಿಸಿ ತುಟಿಗಳು ನನ್ನದೇ ಕಣ್ಣುಗಳ ಮೇಲೆ ಮುತ್ತಿಟ್ಟಿವೆ.. ನಂಬಲೇ ಬೇಕು... ಇದು ಇವರೇ... ಗಂಡನೇ ಪ್ರಿಯ ಸಖನಂತೆ.. ಆತ್ಮದ ಜೊತೆಗಾರನಂತೆ ಪ್ರತಿಕ್ಷಣವೂ ಮನಸ್ಸು ಮೀಟುವಂತಿದೆ ಈ ಶುಭ ಸಮಯ....

ಇಂದಿಲ್ಲ ಎಂದಿನಂತೆ... ಅನ್ನುವುದರಲ್ಲೇ ನನಗೆ ಮತ್ತಷ್ಟು ಖುಷಿಯಾಗುತ್ತಿದೆ.. ಏಕೆ ಅಷ್ಟು ದೊಡ್ಡ ಮೋಡಗಳು ಕಟ್ಟಿದ್ದವು.. ಅನ್ನುವುದು ಈಗ ಅರ್ಥ ವಾಯಿತು... ಜಗತ್ತಿನಲ್ಲಿ ಬೆಳಕಾಗಲು ನಿಧಾನವಿದೆ. ಆದರೆ ಕಾಳರಾತ್ರಿಯ ಕಗ್ಗತ್ತಲೇ ಸದಾ ಇಲ್ಲ. ಬೆಳಕಾಯಿತು, ಬದುಕು ಹಸನಾಯಿತು... ಇಂದು ಏಕಾಂತದಲ್ಲಿ ಹೊತ್ತುಕೊಂಡಿದ್ದ ದುಗುಡದ ಭಾರ ಇಳಿಯಿತು.

ಬೆಳಕಾಯಿತು.. ಅವರು ಹೊಸಬರಂತೆ ಮನೆಯ ಹೊರಗೆ ಒಳಗೆ ಅಡ್ಡಾಡುತ್ತಾ ನನ್ನನ್ನು ರಮಿಸಿ ಏನೇನೋ ವಿವರಿಸುತ್ತಾರೆ... ಲೋಕದ ಎಲ್ಲಾ ಹೆಣ್ಣುಮಕ್ಕಳಂತೆ ನಾನೂ ಇಂದು ಇದ್ದೇನೆ... ನನ್ನಲ್ಲಿಯೋ ಅದೆಂಥ ಕಳೆ... ಇಂದು ತಿಂಡಿ ಮಾಡುವಾಗ ಅವರೂ ಸಹಾಯಕ್ಕೆ ನಿಂತರು... ಒಂಟಿಯಲ್ಲದೆ ನನ್ನದೇ ಮನೆಯಲ್ಲಿ ನನಗಾಗಿ ಎಲ್ಲವೂ ಇರುವಂತೆ ಭಾಸವಾಗತೊಡಗಿದೆ... ರೇಡಿಯೋದಲ್ಲಿ ಹಾಡುತ್ತಿರುವ ಹಳೆಯ ಹಾಡಿನ ಮಧುರತೆ ನಮ್ಮಿಬ್ಬರಲ್ಲಿಯೂ... ಇವತ್ತು ಕಛೇರಿ ರಜೆ... ಅಂದೊಡನೆ ನಾನೂ ಹಾಕದೆ ಬಿಟ್ಟಿದ್ದ ಇಷ್ಟದ ಜೀನ್ಸ್–ಟಾಪ್ ಧರಿಸಿ ಕಾರ್ ಮರೆತು ಬೈಕಿನಲ್ಲಿ ಮೊದಲು ಭೇಟಿಯಾಗಿದ್ದ ಎಂ. ಜಿ. ರಸ್ತೆ ಬಳಿಗೆ ಹೊರಟಾಗ... ಮೊದಲ ಭೇಟಿಯ ಆಶ್ಚರ್ಯಗಳಂತೆಯೇ ಎಲ್ಲವೂ... ಒಂದಷ್ಟು ಖರೀದಿ... ಪ್ರೀತಿ... ಉಡುಗೊರೆ... ರಸ್ತೆಯುದ್ದಕ್ಕೂ ಅವನನ್ನು ತಬ್ಬಿಕೊಂಡಿದ್ದ ನಾನು... ಅವನು ಹೇಳುತ್ತಿದ್ದುದೆಲ್ಲಾ ನಮ್ಮ ಭವಿಷ್ಯದ ಕನಸುಗಳ ಬಗ್ಗೆ...

ಎಚ್ಚರವಾದಾಗ ಬಹುಶಃ ಎಂಟುಗಂಟೆ ಇರಬಹುದು... ಇಂದು ಹೆಚ್ಚಿಗೆ ನಿದ್ದೆ ಮಾಡಿದೆ ಅನ್ನಿಸಿತು... ಆದರೆ ಕನಸು ಏಕಾದರೂ ಹೀಗೆ ಬಿದ್ದಿತು... ಇಂದು ಅವನನ್ನು ನೋಡಬೇಕಿದೆ, ಅದಕ್ಕಾಗಿಯೇ ಈ ಕನಸು ಬಿದ್ದಿರಬಹುದೇ? ಬಹುಶಃ ಇಂದು ಇಬ್ಬರೂ ಡಿವೋರ್ಸ್‌ಗೆ ಸಹಿ ಮಾಡಲು ಒಟ್ಟು ಸೇರಿದಾಗ, ಅವನು ಡಿವೋರ್ಸ್ ತಿರಸ್ಕರಿಸಿ ನನ್ನನ್ನು ಮತ್ತೆ ಮನೆಗೆ ಕರೆದೊಯ್ಯಬಹುದೇ? ಇದಕ್ಕೇ ಏನಾದರೂ ಹೀಗೆ ಕನಸಾಯಿತಾ? ಇಷ್ಟು ವರ್ಷ ಅಪರಾಧಿಯಾಗಿದ್ದದ್ದಾಯಿತು... ಇಂದು ಬಿಡುಗಡೆಯ ದಿವಸ... ಮತ್ತೇಕೆ ಹೆಜ್ಜೆ ಹಿಂದಿಕ್ಕುವ ಮಾತು?

ಓ ಮನಸ್ಸೇ ನಿಲ್ಲು! ಹೆಜ್ಜೆ ಹಿಂದಿಕ್ಕುತ್ತಿಲ್ಲ ನಾನು.. ನಾನು ಮನುಷ್ಯನನ್ನು ಧಿಕ್ಕರಿಸಿ ಓಡುವ ಬದಲು, ವ್ಯಕ್ತಿತ್ವವೇ ಆಲಿಸಿ ಆಲಿಂಗಿಸಿದ್ದೇಕೆ ಎಂದಷ್ಟೇ ಕೇಳುತ್ತಿದ್ದೇನೆ... ನನಗೇನು ಹುಚ್ಚು.. ಕನಸಿನಲ್ಲಿ ಕನವರಿಸಲು ಬದುಕಿನಲ್ಲಿ ನಡೆಯದಿದ್ದುದನ್ನು... ಬೇಡಪ್ಪಾ... ಭಯಾನಕ ಸ್ವಪ್ನಗಳನ್ನೇ ಹುಟ್ಟಿಸುತ್ತಿದ್ದ ನಿದ್ದೆ ಇಂದೇಕೆ ಇಂಥ ತಲ್ಲಣಗಳನ್ನು ಸೃಷ್ಟಿಸಿಬಿಟ್ಟಿತು ಒಳಗೊಳಗೆ... ಕಾದಿದ್ದು ನಿಜ... ಆದರೆ ಅದೆಷ್ಟು ವರ್ಷಗಳ ತಾಳ್ಮೆಗೆ ಫಲ ನೀಡಿದ್ದು ನಾನೇ ನಾನು ವಿಚ್ಛೇದನ ಪಡೆದುಕೊಳ್ಳಲಿ ಎಂಬುದಷ್ಟೇ... ಗಂಡಸರ ಸ್ವೇಚ್ಛೆ, ಕಾಮ ಪೂರೈಕೆಯ ವಿಧಾನಗಳ ನಡುವೆ ನೈತಿಕವಾಗಿ ಕಟ್ಟಿಕೊಂಡ ಸಂಸಾರಗಳೆಷ್ಟು ಹಾಳಾಗುತ್ತಿಲ್ಲ ಹೇಳು... ವಿಚ್ಛೇದನ ಆತನಿಗೆ ಇಂದಿನವರೆಗೂ ಬೇಕಾಗಿಲ್ಲ. ಅದರ ಜೊತೆಗೆ ಒಟ್ಟಾಗಿ ಸಂಸಾರ ನಡೆಸುವುದೂ ಸಹ.. ಇದಕ್ಕೆಲ್ಲಾ ಕಾರಣ ನನಗೆ ಗೊತ್ತಿಲ್ಲವೆಂದಿಲ್ಲ... ಮನುಷ್ಯ ಹುಟ್ಟಿದಾಗಲೇ ಹುಟ್ಟಿಕೊಂಡ ಸತ್ಯಗಳನ್ನು ನಾನು ಇಂದು ಶೋಧಿಸಲು ಬಯಸುವುದಿಲ್ಲ...

ಸಮಯ ಮೀರುತ್ತಿದೆ... ತಿಂಡಿ ತಿನ್ನುವ ಮನಸ್ಸಿಲ್ಲ... ನಾನೊಬ್ಬಳೇ ಇರುವುದರಿಂದ ತಿನ್ನು ಎಂದು ಹೇಳಿಸಿಕೊಳ್ಳುವ ಸಂದರ್ಭವೂ ಇಲ್ಲ... ಹನ್ನೊಂದು ಗಂಟೆಗೆ ಫ್ಯಾಮಿಲಿ ಕೋರ್ಟ್ ಬಳಿ ಹೋಗಬೇಕು... ಎಂದಿನಂತೆ ಎಲ್ಲಿಗಾದರೂ ಹೋಗುವುದಾದರೆ ಹೊಸದಾಗಿಯೇ ಟ್ಯಾಕ್ಸಿ ಕರೆಸುವುದು... ಏಕೆಂದರೆ ಒಂಟಿ ಹೆಂಗಸು ಇರೋ ಮನೆ.. ಯಾರೂ ತೊಂದರೆ ಕೊಡಬಾರದು... ಪರಿಚಿತರಾದರೆ ಹೆಚ್ಚು ಸಮಸ್ಯೆ... ಹೀಗೆಲ್ಲಾ ಇರುತ್ತವಲ್ಲ...

ಕ್ಯಾಬ್‌ಅನ್ನು ಆ್ಯಪ್‌ನಲ್ಲಿ ಬುಕ್ ಮಾಡಿದೆ... ಸರಿಯಾಗಿ ಹತ್ತು ಗಂಟೆಗೆ ಬರುತ್ತದೆ... ಏನು ಮಾಡಲೂ ಮನಸ್ಸಿಲ್ಲ... ಕನಸಿನ ಕಡೆಗೆ ಹೊರಳುತಿದೆ ಮನಸ್ಸು... ಶತಪಥ ಮಂಚದ ಸುತ್ತ ತಿರುಗುತ್ತಾ ಇದ್ದೇನೆ... ಇಂದು ಒಂದು ಅವಕಾಶವಿದ್ದಿರಬಹುದೇ? ಅವನ ಎದೆಯಲ್ಲೂ ಮರಳಿ ಒಂದಾಗುವ ಆಸೆಗಳು ಕುಡಿಯೊಡೆದಿರಬಹುದೇ?

ಶವರ್... ನಲ್ಲಿಯ ತಣ್ಣನೆ ನೀರೂ ಬೆಚ್ಚಗಾದಂತೆ ಅನಿಸುತ್ತಿತ್ತು... ಇಂದೇಕೋ ಅವನು ಇಷ್ಟಪಡುತ್ತಿದ್ದ ಗುಲಾಬಿ ಬಣ್ಣದ ಸೀರೆ ಉಡಬೇಕೆನಿಸುತ್ತಿತ್ತು... ಉಟ್ಟು ಸಾಧಾರಣ ಮೇಕಪ್‌ನಲ್ಲಿ ಕನ್ನಡಿ ಮುಂದೆ ನಿಂತೆ... ಏನೂ ಬದಲಾಗಿಲ್ಲ... ನನ್ನ ಗಂಡ ಮಾತ್ರ ನನ್ನ ಬಳಿ ಇರಬೇಕಾದವನು ಇಲ್ಲವೇ ಇಲ್ಲ... ಇಂದು ಮರಳಿ ಬಂದರೆ...?

ಹುಚ್ಚಲ್ಲ ಇದು... ಇಷ್ಟು ದೊಡ್ಡ ಮೋಸವನ್ನು ಹೊತ್ತು ಹೊರಲಾರದೆ ಇರುವುದಕ್ಕೆ ಸಾಕಾಗಿದೆ... ಅವನು ಬದಲಾಗಿರಬಹುದೇ? ಮತ್ತೆ ಸುಮ್ಮನೆ ಇರುವ ಹಾಗೆ ನಾಟಕವಾಡುತ್ತಾ... ಛೇ... ನೆನೆಸಿಕೊಂಡರೆ ಮೈ... ಬೇಡಪ್ಪ ಆ ಹಿಂಸೆಗಳು... ಆದರೆ ಮನುಷ್ಯನಿಗೆ ಏನನ್ನೂ ಬದಲಾಯಿಸುವ ಮನಃಶಕ್ತಿ ಇದೆ...

ಕೋರ್ಟ್ ಹಾಲ್‌ನಲ್ಲಿ ಹಲವರಿದ್ದಾರೆ... ನನ್ನಂತೆ... ಆದರೆ ಪಾಪ... ಮಕ್ಕಳು ಮರಿ ಕಟ್ಟಿಕೊಂಡ ಹೆಂಗಸರು... ಆ ಮುಗ್ಧ ಮಕ್ಕಳ ಕಣ್ಣುಗಳಲ್ಲಿರುವ ಅಸಾಧಾರಣ ಹೊಳಪು... ಮತ್ತೇಕೆ ಅಪ್ಪಂದಿರು ದೂರಾದರು? ಮಕ್ಕಳ ಜೀವನ ನಿರ್ವಹಣೆಗಾಗಿ ಈ ತಾಯಂದಿರು ಅದೆಷ್ಟು ದಿವಸ ಕೋರ್ಟಿಗೆ ಅಲೆಯಬೇಕು? ನಮ್ಮ ಕಾನೂನು ವ್ಯವಸ್ಥೆಯ ನಿಧಾನಗತಿ ಸೇವೆಯಲ್ಲಿ ನ್ಯಾಯದ ಬಾಗಿಲಲ್ಲಿ ನಿಂತರೂ ನ್ಯಾಯದೇವತೆಯ ಕಣ್ಣಿಗೂ ಕತ್ತಲಾವರಿಸಿರುವಾಗ... ಇಲ್ಲೇ ಕಾಯಬೇಕು...

ಅದೇ ಹುಡುಗ... ಅಲ್ಲ ವ್ಯಕ್ತಿ... ಅಲ್ಲ ನನ್ನ ಗಂಡ... ನನ್ನನ್ನು ನೋಡಿಯೂ ನೋಡದಂತೆ ಹೋಗುತ್ತಿರುವಾಗ... ನಾನು ತಿರುಗಿ ನೋಡುವುದು... ಈ ಜನ್ಮದಲ್ಲಿಯೂ ಇಲ್ಲ... ಲಾಯರ್ ಮತ್ತೊಮ್ಮೆ ಕೇಳಿದರು... ಪಕ್ಕ ಪಕ್ಕದ ಸೀಟಿನಲ್ಲಿ ಕೂರಲು ಅವನಿಗೆ ಹಿಡಿಸಲಿಲ್ಲ... ಎರಡು ಚೇರ್ ಖಾಲಿ ಕುಂತವು... ಕೊನೆಯದರಲ್ಲಿ ಅವನು ಕೂತು ಬಹಳ ಸ್ಪಷ್ಟವಾಗಿ ಹೇಳಿದ... “ಹೌದು ಸರ್... ನಮ್ಮಿಬ್ಬರಿಗೂ ಜೊತೆಯಲ್ಲಿ ಬದುಕಲು ಯಾವುದೇ ಆಸಕ್ತಿ ಇಲ್ಲ... ನಾವು ಈಗಾಗಲೇ ಹಲವು ವರ್ಷಗಳಿಂದ ದೂರ ಇದ್ದೇವೆ... ದಯವಿಟ್ಟು ನಮಗೆ ವಿಚ್ಛೇದನ ಕೊಡಿಸಿ.”

ಲಾಯರ್ ನನ್ನ ಮುಖವನ್ನು ನೋಡಿದಾಗ... ನಾನು ಕತ್ತು ಅಲ್ಲಾಡಿಸಿದೆ... ಮೌನದಲ್ಲಿ ಗಂಟಲು ಹೊರಡದು ನನಗೆ... ದುಃಖವೆಂಬ ಸಂಗಾತಿ....

ಹೊರಗೆ ಪ್ರಖರ ಬಿಸಿಲು... ಕ್ಯಾಬ್ ಹುಡುಗ ಓಡೋಡಿ ಬಂದು ಬಾಗಿಲು ತೆಗೆದು ಸಹಕರಿಸಿದ... ಒಳಗೆ ಕುಂತೆ... ‘ಒಂದು ಸಂಬಂಧ ಗಟ್ಟಿಯಾಗಲು ಗಂಡಸಿನ ಒಪ್ಪಿಗೆ ಬೇಕೇ ಬೇಕು... ಆದರೂ ಹೆಂಗಸರ ಗೋಳಿಗೆ ಜಗತ್ತು ಮಿಡಿಯುವುದೇ ಇಲ್ಲವಾ... ಟ್ಯಾಕ್ಸಿ ಹುಡುಗ ಮರಳಿ ಮನೆಯ ದಾರಿಯಲ್ಲಿ ಹೋಗುತ್ತಿದ್ದ... ಮನಸು ಮತ್ತೆ ಮದುವೆ ದಿನದ ನೆನಪು ಮಾಡಿಕೊಳ್ಳುತ್ತಿತ್ತು... ಉತ್ತರವಿಲ್ಲದ ನೂರೊಂದು ಪ್ರಶ್ನೆ ಸಿಡಿದೇಳುತ್ತಿದೆ ಎದೆಯೊಳಗೆ... ಇದೇನಾ?... ಈ ಹೊತ್ತಿಗೇನಾ ಕಣ್ಣೀರು ಮಡಿಲಲ್ಲಿಟ್ಟು ಗಂಡನ ಹಿಂದೆ ತಾಳಿ ಕಟ್ಟಿಸಿಕೊಂಡು ನಡೆದುಬರ್ತೀವಿ? ಮೊಬೈಲ್‌ನಲ್ಲಿ ಇರಿಸಿಕೊಂಡಿದ್ದ ಹಳೆಯ ಮದುವೆ ಫೋಟೋ ನೋಡಬೇಕೆನಿಸಿತು, ಕಣ್ಣು ಮಂಜಾಗಹತ್ತಿತು...”

ನಳಿನ ಡಿ.
‘ಜನನಿ ನಿಲಯ’, ಬೋಜೇಗೌಡ ಲೇಔಟ್
ಐಐಟಿ ಇಂಜಿನಿಯರಿಂಗ್ ಕಾಲೇಜ್ ರಸ್ತೆ
ಜ್ಯೋತಿನಗರ ಪೋಸ್ಟ್, ಚಿಕ್ಕಮಗಳೂರು – ೫೭೭ ೧೦೨

## ಬೇಟೀ ಬಚಾವೋ

ಪ್ರಧಾನಿ ಪದೇ ಪದೇ
ಅನ್ನುತ್ತಿದ್ದ ಮಾತು
ಬೇಟೀ ಬಚಾವೋ
ಕೇಳಿ ಬರುತ್ತಿದೆ ಈಗ
ಉನ್ನಾವೊ ಮತ್ತು
ಕಥುವಾದಲ್ಲಿ
ಕಟುವಾದ
ಕಹಿ ಘಟನೆಗಳ
ನಂತರ!

ಡಾ॥ ಕಾಸರಗೋಡು ಅಶೋಕ್ ಕುಮಾರ್
ಮಂಗಳೂರು – ೫೭೫೦೦೮

ಮನುಷ್ಯ ಸ್ವತಂತ್ರ ಜೀವಿಯಾಗಿ ಜನಿಸುತ್ತಾನೆ. ಅವನಿಗೆ ಸ್ವಂತದ್ದೇ ಆಗಿರುವ ಆಲೋಚನೆಯಿರುತ್ತದೆ. ಅವನು ತನ್ನದೇ ಸ್ವತಂತ್ರವಾದ ಹಾದಿಯನ್ನು ಆಯ್ಕೆಮಾಡಬಹುದು. ಅವನು ಮೂಲದಲ್ಲಿ ನಿರ್ಮಲನೂ ಮತ್ತು ಉತ್ತಮನೂ ಆಗಿರುತ್ತಾನೆ. ಅವನು ಮನುಷ್ಯರೊಂದಿಗೆ ಮನುಷ್ಯರಂತೆಯೇ ವರ್ತಿಸುತ್ತಿರುತ್ತಾನೆ. ಆದರೆ ಸುತ್ತಲಿನ ವ್ಯವಸ್ಥೆ ಮತ್ತು ಅದರ ರಕ್ಷಕರು ಅವನ ಜೀವನದ ಸುತ್ತಲೂ ಕಾರಾಗೃಹದ ಗೋಡೆಯನ್ನು ಎದ್ದು ನಿಲ್ಲಿಸುತ್ತಾರೆ. ಒಬ್ಬ ಸ್ವತಂತ್ರ ಜೀವಿಯನ್ನು ಅವರು ಕೈದಿಯನ್ನಾಗಿ ಮಾಡುತ್ತಾರೆ. ತನ್ನ ನಿಯಮ ಮತ್ತು ಕಾನೂನನ್ನು ಪಾಲಿಸಲು ಹೇಳುತ್ತಾರೆ. ಅದರಲ್ಲಿ ಮಾನವನ ಮೂಲ ರೂಪ ಕಳೆದುಹೋಗುತ್ತದೆ. ಅವನು ವ್ಯವಸ್ಥೆಯಲ್ಲಿ ಬಂಧಿಸ್ಥನಾಗುತ್ತಾನೆ. ಈ ವ್ಯವಸ್ಥೆಯು ರಾಜಕೀಯವಾಗಿರುತ್ತದೆ. ಆರ್ಥಿಕ–ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿಯೂ ಇರುತ್ತವೆ. ಅವು ಮನುಷ್ಯನನ್ನು ಮನುಷ್ಯನಾಗಿ ಇರಲು ಬಿಡುವದಿಲ್ಲ.



# ಗಾಂಧೀಜಿ ಮತ್ತು ಟಾಲ್‌ಸ್ಟಾಯ್

ಏಸು ಕ್ರಿಸ್ತ ಬದುಕಿರುವವರೆಗೆ ಮಾತ್ರ ಅವನ ವಿಚಾರವು ಶುದ್ಧ ನಿರ್ಮಲ ಹಾಗೂ ಮಾನವೀಯತೆಯಿಂದ ಕೂಡಿತ್ತು. ಅಲ್ಲದೆ, ಅದು ಅವನಿಗಷ್ಟೇ ಸೀಮಿತವೂ ಆಗಿತ್ತು. ಅವನ ನಂತರ ಅವನ ಧರ್ಮದ ಸಂಘಟನೆಯು ತಲೆ ಎತ್ತಿತ್ತು. ಆಗ ಅದನ್ನು ಮಾಡುವಾಗ ಅದರಲ್ಲಿ ರಾಜಕೀಯ ಸೇರಿತು. ಆ ಕಲಬೆರಕೆಯಿಂದಾಗಿ ಅದರ ಶುದ್ಧತೆ ಕಡಿಮೆಯಾಯಿತು. ಕೊನೆಯ ಕ್ರಿಶ್ಚಿಯನ್ ಏಸು ಜೊತೆಗೆಯೇ ಶೂಲಕ್ಕೇರಿದ ಎಂದು ಈ ಕಾರಣದಿಂದಾಗಿಯೇ ಎನ್ನಲಾಗುತ್ತದೆ. ಚರ್ಚಿನ ಚರಿತ್ರೆಯು ಕೇವಲ ಕ್ರೌರ್ಯ ಹಾಗೂ ಭೀಷಣತೆಯಿಂದಲೇ ತುಂಬಿಕೊಂಡಿದೆ. ಇಲ್ಲವೇ 'ಪ್ರಪಂಚದ ಎಲ್ಲ ಕ್ರೈಸ್ತ ದೇವಾಲಯಗಳು ಏಸುವಿನ ನಿಜವಾದ ಬೋಧನೆಯನ್ನು ಹತ್ತಿಕ್ಕುವ ವಂಚಕ ಪ್ರಯತ್ನವನ್ನೇ ಮಾಡುತ್ತವೆ' ಎಂದು ಕಾಂಟ್ ಲಿಯೋ ಟಾಲ್‌ಸ್ಟಾಯ್ ಎಂಬ ರಶಿಯನ್ ಲೇಖಕ– ಚಿಂತಕ ಹೇಳಿದ್ದಾನೆ. ವಿಶ್ವದ ಸರ್ವಶ್ರೇಷ್ಠ ಕಾದಂಬರಿಗಳಲ್ಲೊಂದಾದ 'ವಾರ್ ಆ್ಯಂಡ್ ಪೀಸ್'ನ ಲೇಖಕ ಟಾಲ್‌ಸ್ಟಾಯ್‌ನು 'ಅನ್ನಾ ಕರೆನಿನಾ' ಮತ್ತು 'ರಿಸರಕ್ಶನ್'ನಂತಹ ಬೃಹತ್ ಹಾಗೂ ಅಸಾಮಾನ್ಯ ಕಾದಂಬರಿಗಳನ್ನು ಬರೆದ. ಅವು ಅವನ ಪ್ರತಿಭೆಗೆ ವಿಶ್ವಮಾನ್ಯತೆಯನ್ನು ದೊರಕಿಸಿಕೊಟ್ಟವು. ಆದರೆ ಈ ಭಾಗ್ಯಶಾಲಿ ಮನುಷ್ಯನಿಗೆ ಜೀವನವಿಡೀ ಕಾಡಿದ ಖೇದವೆಂದರೆ, 'ಕ್ರಿಸ್ತನ ಬೋಧನೆ ಮತ್ತು ಕ್ರೈಸ್ತ ಧರ್ಮದ ಮುನ್ನಡೆಯಲ್ಲಿ ಗೋಚರಿಸುವ ಬಿರುಕಿನ' ಬಗೆಗೆ ಸಂಬಂಧಿಸಿತ್ತು.

'ದೌಶಲ್ ಕಿಲ್ ನೋ ವನ್', 'ಲವ್ ವನ್ ಅನದರ್,' 'ವ್ಹಾಯ್ ಕ್ರಿಶ್ಚಿಯನ್ ಪೀಪಲ್ ಇನ್ ಜರ್ಮನಿ ಆ್ಯಂಡ್ ಸ್ಪೆಶಲಿ ಇನ್ ರಶಿಯಾ ಫಾಲ್ ಇನ್ ಡಿಸ್ಟ್ರೆಸ್,' 'ಟೀಚಿಂಗ್ ಆಫ್ ಕ್ರೈಸ್ಟ್ ಟು ಚಿಲ್ಡ್ರನ್', 'ಕ್ಯಾಪಿಟಲ್ ಪನಿಷ್‌ಮೆಂಟ್ ಆ್ಯಂಡ್ ಕ್ರಿಶ್ಚಿಯಾನಿಟಿ' 'ರಿಲಿಜಿಯಸ್ ಟಾಲರನ್ಸ್' ಮತ್ತು 'ಸೆಲ್ಫ್ ಪರ್‌ಫೆಕ್ಶನ್' – ಇವು ಇನ್ನುಳಿದ ಅವನ ಪ್ರಸಿದ್ಧ ಗ್ರಂಥಗಳು. ಆದರೆ ನಾವು ಧರ್ಮವೆಂಬ ಹೆಸರಿನ ಪವಿತ್ರವಾಗಿರಬೇಕಾದ ಇಂಥ ಸಂಘಟನೆಗಳು ನಡೆಯಿಸಿದ ಡಾಂಭಿಕ ನಿಯಂತ್ರಣದಲ್ಲಿರುತ್ತವೆ ಮತ್ತು ಡಾಂಭಿಕತೆಯು ದೌರ್ಜನ್ಯ ಮತ್ತು ಕ್ರೌರ್ಯದಿಂದಲೂ ಕೂಡಿರುತ್ತದೆ ಎಂದು ಸತತವಾಗಿ ಕಾಡುತ್ತಿರುವ ಅರಿವು ಆ ಸಂವೇದನಶೀಲ ಪ್ರತಿಭಾವಂತನನ್ನು ಕೊನೆವರೆಗೂ ಪೀಡಿಸುತ್ತಿತ್ತು. 'ಮಾರಲ್ ಟೈರನಿ' ಇಲ್ಲವೇ 'ರಿಲಿಜಿಯರ್ ಟೈರನಿ' – ಇದು ಸರ್ವಾಧಿಕಾರದ ದೌರ್ಜನ್ಯದ ಹೆಚ್ಚು ಭಯಗ್ರಸ್ತ ಪ್ರಕಾರವಾಗಿದೆ ಎಂದೆನ್ನಲಾಗುತ್ತಿದೆ.

ಜೀವನವಿಡೀ ಈ ಸರ್ವಾಧಿಕಾರದ ಬವಣೆಯಿಂದ ಬೇಯುತ್ತ ಮತ್ತು ಅದರ ವಿರುದ್ಧ ತನ್ನ ಲೆಕ್ಕಣಿಕೆಯ ಹಾಗೂ ವಾಣಿಯನ್ನು ಝುಳಪಿಸುತ್ತ ಬದುಕಿದ್ದ ಟಾಲ್‌ಸ್ಟಾಯ್‌ನು ೧೮೨೮ರಲ್ಲಿ ಶ್ರೀಮಂತ ಪಾಳೇಗಾರಿಕೆಯ ಕುಟುಂಬದಲ್ಲಿ ಜನಿಸಿದ. ಆದರೆ ವೈಭವದ ವ್ಯರ್ಥತೆಯು ಗಮನಕ್ಕೆ ಬರುತ್ತಲೇ ಶ್ರೀಮಂತಿಕೆಯ ಎಲ್ಲ ಆಡಂಬರವನ್ನು ತೊರೆದು, ಅವನು ಒಬ್ಬ ಸಾಮಾನ್ಯ ಮನುಷ್ಯನಂತೆ ಜೀವಿಸಲಾರಂಭಿಸಿದ. ನಗರ ತೊರೆದು ಹಳ್ಳಿಗೆ ಹೋದ, ಅಲ್ಲಿ ಕೃಷಿ ಕಾರ್ಯದಲ್ಲಿ ತನ್ಮಯಗೊಂಡ. ಬಡತನದಲ್ಲೇ ಜೀವನ ಕಳೆದ. ಅತ್ಯಂತ ಕಡಿಮೆ ಅಗತ್ಯಗಳೊಂದಿಗೆ ಮನುಷ್ಯ ಹೇಗೆ ಬದುಕಬಹುದು, ಆ ಜೀವನವನ್ನೂ ಸಹ ನೀತಿ ಹಾಗೂ ಶುದ್ಧತೆಯ ಒರೆಗಲ್ಲಿಗೆ ಹೇಗೆ ಇಳಿಸಬಹುದು ಎಂದವನು ತನ್ನ ಜೀವನವಿಡೀ ಪ್ರಯೋಗ ಮಾಡುತ್ತಲೇ ಇದ್ದ. ಟಾಲ್‌ಸ್ಟಾಯ್ ಕ್ರೈಸ್ತನಾಗಿದ್ದ. ಆದರೆ ಕ್ರಿಶ್ಚೆನಿಟಿಯನ್ನು ಎಂದೂ ಒಪ್ಪುತ್ತಿರಲಿಲ್ಲ. ಅವನು ಕ್ರಿಸ್ತತ್ವದಿಂದ ಬದುಕಿದ. ಯಾಸ್ನಾಯ ಪೋಲ್ಯಾನ ಎಂಬ, ಹಳ್ಳಿಯಲ್ಲಿರುವ ಅವನ ಮನೆಯ ವಿಶ್ವದ ಎಲ್ಲ ಸತ್ಯಶೋಧಕರಿಗಾಗಿ ತೆರೆದಿಟ್ಟ ಧಾರ್ಮಿಕ ಹಾಗೂ ನೈತಿಕ ತಾಣವಾಗಿದೆ. ಅವನನ್ನು ನೋಡಲು, ಭೇಟಿಯಾಗಲು ಮತ್ತು ಮಾತಾಡಲು ಅಮೆರಿಕೆಯಿಂದ ಜಪಾನ್‌ವರೆಗಿನ ಜನರು ಈ ಹಳ್ಳಿಗೆ ಭಕ್ತಿಭಾವದಿಂದ ಭೇಟಿ ನೀಡುತ್ತಿದ್ದರು. ಅವರಲ್ಲಿ ರಾಜರಿದ್ದರು, ಮಂತ್ರಿಗಳಿದ್ದರು, ಸೇನಾಧಿಕಾರಿಗಳಿದ್ದರು, ತತ್ವಜ್ಞಾನಿಗಳಿದ್ದರು, ವಿಚಾರವಾದಿಗಳಿದ್ದರು, ಹಾಗೆಯೇ ಜನಸಾಮಾನ್ಯರೂ ಇದ್ದರು. ಅವರ ತ್ಯಾಗದಲ್ಲಿ ಅವರ ಸಾಮರ್ಥ್ಯದ ದರ್ಶನವಾಗುತ್ತಿತ್ತು. ಆಶಯ ಮತ್ತು ಪದ, ನೀತಿ ಮತ್ತು ಜೀವನ ಇವುಗಳ ಐಕ್ಯವನ್ನು ಅದರಲ್ಲಿ ಅವರು ಕಾಣಬಹುದಾಗಿತ್ತು. ದೈಹಿಕ ಶ್ರಮ, ಅಸಂಗ್ರಹ ವೃತ್ತಿ ಮತ್ತು ಅಹಿಂಸೆ – ಈ ಸಂಗತಿಗಳು ಒಂದೆಡೆ ಇರುವ ವ್ಯಕ್ತಿತ್ವವು ಅವನ ರೂಪದಲ್ಲಿ ಎಲ್ಲರಿಗೂ ಕಾಣುತ್ತಿತ್ತು.

---

ಮರಾಠಿ ಮೂಲ : **ಸುರೇಶ ದ್ವಾದಶೀವಾರ್**     ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**

## ಕುಲದೀಪ್ ನಯ್ಯರ್‌ಗೆ ನಮನ

ಹಿರಿಯ ಪತ್ರಕರ್ತ, ಅಂಕಣಕಾರ, ಲೇಖಕ ಕುಲದೀಪ್ ನಯ್ಯರ್ ಇತ್ತೀಚೆಗೆ ನಿಧನರಾದರು. ಅವರಿಗೆ 'ಹೊಸತು' ಮತ್ತು 'ನವಕರ್ನಾಟಕ' ನಮನ ಸಲ್ಲಿಸುತ್ತದೆ. 'ಇಂಡಿಯನ್ ಎಕ್ಸ್‌ಪ್ರೆಸ್' ದಿನಪತ್ರಿಕೆಯ ಸಂಪಾದಕರಾಗಿದ್ದ ನಯ್ಯರ್ ಕಳೆದ ಕೆಲದಿನಗಳಿಂದ ಅನಾರೋಗ್ಯದಿಂದ ಬಳಲುತ್ತಿದ್ದರು. ಪಂಜಾಬ್ ಮೂಲದ ಕುಲದೀಪ್ ನಯ್ಯರ್ ಅವರು, ೧೪ ಭಾಷೆಗಳಲ್ಲಿ ೮೦ಕ್ಕೂ ಹೆಚ್ಚು ಪತ್ರಿಕೆಗಳ ಸಂಪಾದಕೀಯ ಪುಟಗಳಿಗೆ ಲೇಖನ ಬರೆಯುತ್ತಿದ್ದರು. ಕನ್ನಡದ ದಿನಪತ್ರಿಕೆ 'ಪ್ರಜಾವಾಣಿ'ಯಲ್ಲಿ ತಪ್ಪದೆ ಲೇಖನಗಳನ್ನು ಬರೆಯುತ್ತಿದ್ದರು. ೧೫ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿದ್ದಾರೆ. ಅವರ ಆತ್ಮಕಥೆ 'ಒಂದು ಜೀವನ ಸಾಲದು' ಕೃತಿಯನ್ನು ಆರ್. ಪೂರ್ಣಿಮಾ ಇವರು ಕನ್ನಡಕ್ಕೆ ಅನುವಾದಿಸಿದ್ದಾರೆ. ಅದನ್ನು ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಕಟಿಸಿದೆ.

*– ಸಂಪಾದಕ*

ಗಾಂಧೀಜಿಯೊಂದಿಗೆ ಟಾಲ್‌ಸ್ಟಾಯ್‌ಯ ಸಂಬಂಧ ಬರುವ ವಿಷಯವು ಆಕಸ್ಮಿಕವಾದುದಲ್ಲ, ಸ್ವಾಭಾವಿಕವಾದುದಾಗಿತ್ತು. 'ಕಿಂಗ್‌ಡಮ್ ಆಫ್ ಗಾಡ್ ಈಜ್ ವಿದಿನ್ ಯೂ' ಎಂಬ ಟಾಲ್‌ಸ್ಟಾಯ್‌ನ ಪ್ರಬಂಧವನ್ನು ಅವರು ಓದಿದರು. ಬಳಿಕ ಅವನಿಗೆ ಮೊದಲ ಪತ್ರ ಬರೆದರು. ಆ ಪತ್ರದ ದಿನಾಂಕವು ೧ ನವೆಂಬರ್ ೧೯೦೯ ಆಗಿತ್ತು. ಟಾಲ್‌ಸ್ಟಾಯ್‌ನ ಸಾವು ೨೦ ನವೆಂಬರ್ ೧೯೧೦ರಂದಾಯಿತು. ಇದನ್ನು ಗಮನಿಸಿದಾಗ ಅವನ ಹಾಗೂ ಗಾಂಧೀಜಿಯ ಸಂಬಂಧವು ಕೇವಲ ಒಂದೇ ವರ್ಷದ್ದು ಮತ್ತು ಅದೂ ಸಹ ಅವನ ಅನಾರೋಗ್ಯದ ಅವಸ್ಥೆಯಲ್ಲಿದ್ದಾಗಿನದು ಎನ್ನುವದು ಗಮನಕ್ಕೆ ಬರುತ್ತದೆ. ಗಾಂಧಿ ಮತ್ತು ಟಾಲ್‌ಸ್ಟಾಯ್ ಅವರ ಅಸಂಗ್ರಹ ವೃತ್ತಿಯನ್ನು ಇಲ್ಲಿ ನೋಂದಾಯಿಸಬೇಕಾದ ಅಗತ್ಯವಿದೆ. ಅತ್ಯಂತ ಕಡಿಮೆ ಅಗತ್ಯದೊಂದಿಗೆ ಮನುಷ್ಯನಾದವನು ಹೇಗೆ ಬದುಕಬಹುದು ಎನ್ನುವದನ್ನು ಗಾಂಧಿಯ ಬದುಕು ವಿಶ್ವಕ್ಕೆ ಹಲವು ಸಲ ತೋರಿಸಿಕೊಟ್ಟಿದೆ. ಚಮಚ ತುಂಡಾದರೆ ಅದಕ್ಕೆ ಕಡ್ಡಿ ಕಟ್ಟಿ ಬಳಸಬೇಕು. ಕನ್ನಡಕದ ಕಡ್ಡಿ ತುಂಡಾದರೆ ದಾರದಿಂದ ಕಟ್ಟುವದು. ಅಂಥ ಸ್ಥಿತಿಯಲ್ಲಿ ವೈಸರಾಯನಿಂದ ಹಿಡಿದು ಎಲ್ಲರನ್ನು ಭೇಟಿಯಾಗುವದು. ಮೀರಾಬೆನ್ ಅವರು ಅವರ ಇಂಥದೊಂದು ಮೋಜಿನ ಸಂಗತಿಯನ್ನು ದಾಖಲಿಸಿದ್ದಾರೆ. ಅವರ ಪೆನ್ಸಿಲ್‌ನ ಒಂದು ತುಣುಕು ಕಳೆದುಹೋಯಿತು. ಎಷ್ಟೇ ಹುಡುಕಿದರೂ ಸಿಗಲಿಲ್ಲ. ಅದರ ಬದಲಿಗೆ ಅವರಿಗೊಂದು ಹೊಸ ಪೆನ್ಸಿಲ್ ನೀಡಿದರು. ಅವರದನ್ನು ನಿರಾಕರಿಸಿದರು. ಅವರಿಗೆ ಅದೇ ತುಣುಕು ಬೇಕಾಗಿತ್ತು. ಸಂಪೂರ್ಣ ಸಾಬರಮತಿಯ ಆಶ್ರಮವು ಅದನ್ನು ಹುಡುಕಲು ಆರಂಭಿಸಿತು. ಕೊನೆಗೆ ಎಷ್ಟೋ ಹೊತ್ತಿನ ಬಳಿಕ ಅದು ಸಿಕ್ಕಿತು. ಆಗ ಗಾಂಧೀಜಿಯ ಮುಖದ ಮೇಲೆ ಎಂಥದೋ ಬೆಲೆಬಾಳುವ ವಸ್ತು ಸಿಕ್ಕ ಸಮಾಧಾನ ಕಾಣಿಸಿತು. ಅದೇ ಕಾಲಕ್ಕೆ ಸಾಬರಮತಿಯೂ ಬಿಡುಗಡೆಯ ನಿಟ್ಟುಸಿರು ಬಿಟ್ಟಿತ್ತು. 'ನನಗೆ ಹಣದ ಅಗತ್ಯವಿಲ್ಲ' ಎಂದು ನೊಬೆಲ್ ಪಾರಿತೋಷಕವನ್ನು ನಿರಾಕರಿಸುವ ಟಾಲ್‌ಸ್ಟಾಯ್ ಇಲ್ಲಿ ನೆನಪಾಗುತ್ತಾನೆ. ಅದೇ ಕಾಲಕ್ಕೆ ಗಾಂಧೀಜಿಗೆ ಆ ಪಾರಿತೋಷಕವನ್ನು ನೀಡದೆ ಇದ್ದುದರ ಬಗೆಗೆ ನೊಬೆಲ್ ಸಮಿತಿಗೂ ಆದ ಪಶ್ಚಾತ್ತಾಪವೂ ಇಲ್ಲಿ ನೆನಪಾಗುತ್ತದೆ.

ಏಸುವಿನ ಬೆಟ್ಟದ ಮೇಲಿನ ಪ್ರವಚನ (ಸರ್ಮನ್ ಆನ್ ದ ಮೌಂಟನ್) ಮತ್ತು ಭಗವದ್ಗೀತೆಯಲ್ಲಿಯ ಕರ್ಮಯೋಗದಲ್ಲಿ ಐಕ್ಯತೆಯನ್ನು ಕಾಣುವ ಗಾಂಧೀಜಿಗೆ ಟಾಲ್‌ಸ್ಟಾಯ್‌ನ ಬೋಧನೆ ಮೋಡಿ ಮಾಡಿತು. ಮನುಷ್ಯ ಸ್ವತಂತ್ರ ಜೀವಿಯಾಗಿ ಜನಿಸುತ್ತಾನೆ. ಅವನಿಗೆ ಸ್ವಂತದ್ದೇ ಆಗಿರುವ ಆಲೋಚನೆಯಿರುತ್ತದೆ. ಅವನು ತನ್ನದೇ ಸ್ವತಂತ್ರವಾದ ಹಾದಿಯನ್ನು ಆಯ್ಕೆಮಾಡಬಹುದು. ಅವನು ಮೂಲದಲ್ಲಿ ನಿರ್ಮಲನೂ ಮತ್ತು ಉತ್ತಮನೂ ಆಗಿರುತ್ತಾನೆ. ಅವನು ಮನುಷ್ಯರೊಂದಿಗೆ ಮನುಷ್ಯರಂತೆಯೇ ವರ್ತಿಸುತ್ತಿರುತ್ತಾನೆ. ಆದರೆ ಸುತ್ತಲಿನ ವ್ಯವಸ್ಥೆ ಮತ್ತು ಅದರ ರಕ್ಷಕರು ಅವನ ಜೀವನದ ಸುತ್ತಲೂ ಕಾರಾಗೃಹದ ಗೋಡೆಯನ್ನು ಎದ್ದು ನಿಲ್ಲಿಸುತ್ತಾರೆ. ಒಬ್ಬ ಸ್ವತಂತ್ರ ಜೀವಿಯನ್ನು ಅವರು ಕೈದಿಯನ್ನಾಗಿ ಮಾಡುತ್ತಾರೆ. ತನ್ನ ನಿಯಮ ಮತ್ತು ಕಾನೂನನ್ನು ಪಾಲಿಸಲು ಹೇಳುತ್ತಾರೆ. ಅದರಲ್ಲಿ ಮಾನವನ ಮೂಲ ರೂಪ ಕಳೆದುಹೋಗುತ್ತದೆ. ಅವನು ವ್ಯವಸ್ಥೆಯಲ್ಲಿ ಬಂಧಿಸ್ಥನಾಗುತ್ತಾನೆ. ಈ ವ್ಯವಸ್ಥೆಯು ರಾಜಕೀಯ ವಾಗಿರುತ್ತದೆ. ಆರ್ಥಿಕ – ಧಾರ್ಮಿಕ ಮತ್ತು ಸಾಂಸ್ಕೃತಿಕವಾಗಿಯೂ ಇರುತ್ತವೆ. ಅವು ಮನುಷ್ಯನನ್ನು ಮನುಷ್ಯನಾಗಿ ಇರಲು ಬಿಡುವದಿಲ್ಲ. ಅವು ಅವನಿಗೆ ದೇಶ, ಧರ್ಮ, ಸಂಸ್ಕೃತಿ ಮತ್ತು ಪರಂಪರೆ ಎಂಬ ಹೆಸರಿನ ಹಳೆಯ ಪೀಳಿಗೆಯ ಶೋಷಣೆಯನ್ನು ಅಂಟಿಸಿ, ಅವನ ಸ್ವಯಂಭೂತನವನ್ನು ಕೆಡಿಸುತ್ತವೆ... ಮನುಷ್ಯನನ್ನು ಮನುಷ್ಯನನ್ನಾಗಿರಲು ಬಿಡಿ ಎನ್ನುವದು ಟಾಲ್‌ಸ್ಟಾಯ್‌ನ ಸಾತ್ವಿಕ ಸಿಟ್ಟಾಗಿತ್ತು. ಈ ಕಾರಣಕ್ಕಾಗೇ ಅವನು ಇಡೀ ವ್ಯವಸ್ಥೆ ಮತ್ತು ಅದು ನಿರ್ಮಿಸಿದ ನಿಯಂತ್ರಣದ ಸಾಧನಗಳೊಂದಿಗೆ ಹೋರಾಡುತ್ತಿದ್ದನು. ಅವನದು ನಿಶ್ಶಸ್ತ್ರ ಹೋರಾಟವಾಗಿತ್ತು. ಲೆಕ್ಕಣಿಕೆ ಹಾಗೂ ವಾಣಿಯೇ ಅವನ ಶಸ್ತ್ರವಾಗಿತ್ತು. ಮಾರ್ಗ ತ್ಯಾಗದ್ದಾಗಿತ್ತು. ಬದುಕೇ ಅವನ ವಿಜಯವಾಗಿತ್ತು.

ಟಾಲ್‌ಸ್ಟಾಯ್ ರಾಜಸತ್ತೆಯ ನಿರ್ಬಂಧವನ್ನೂ ಸಹ ವಿರೋಧಿಸುತ್ತಿದ್ದ. ಎಲ್ಲ ಮಾನವರು ಸ್ವತಂತ್ರರಾಗಿ ಜನಿಸಿದ್ದರೂ ಯೂರೋಪದಲ್ಲಿಯ ಕ್ರೈಸ್ತ ಸರಕಾರವು ಅಲ್ಲಿಯ ಕೋಟ್ಯಂತರ ಜನರನ್ನು ತನ್ನ ನಿಯಂತ್ರಣದ ಸಂಕೋಲೆಯಲ್ಲಿ ಏಕೆ ಬಂಧಿಸುತ್ತದೆ? ಅವರಿಗೆ ಪೊಲೀಸ್, ಸೈನ್ಯ, ಕಾರಾಗೃಹ ಮತ್ತು ಯುದ್ಧವಾದರೂ ಏಕೆ ಬೇಕು? ಮನುಷ್ಯರನ್ನು ಮನುಷ್ಯರಂತೆ ಬದುಕಲು ಬಿಡಿ. ಅವರು ಹಾಗೆ ಬದುಕಿದಾಗಲೇ ಈ ಎಲ್ಲ ವಿಷಯಗಳ ನಿರರ್ಥಕತೆ ಮಾತ್ರವಲ್ಲ, ಭಯಾವಹವೂ ಎಲ್ಲರ ಗಮನಕ್ಕೆ ಬರುತ್ತದೆ. ಈಗಿನ ಎಲ್ಲ ಸರಕಾರಗಳು ಚೆಂಗೀಜ್ ಖಾನನ ಕೈಯಲ್ಲಿರುವ ಹತ್ಯಾರದಂತಿವೆ. ಅವರ ಆಜ್ಞೆಯನ್ನು ನಿರಾಕರಿಸಿ, ಅವರ ನಿಯಂತ್ರಣವನ್ನು ನಿರಾಕರಿಸಿ ಪೊಲೀಸ್ ಮತ್ತು ಸೈನ್ಯ ಭರ್ತಿಯನ್ನೂ ನಿರಾಕರಿಸಿ ನೀವಿದನ್ನು ಶಾಂತವಾಗಿ ಮಾಡುವಿರಾದರೆ, ನಿಮಗೇನೂ ಅವರು ಮಾಡುವದು ಸಾಧ್ಯವಾಗಲಾರದು.

ದಕ್ಷಿಣ ಆಫ್ರಿಕೆಯ ಗವರ್ನರ್ ಜನರಲ್ ಸ್ಮಟ್ಸ್ ಇವರ ಎದುರಿಗೂ ಗಾಂಧಿಯ ಬಗೆಗಿನ ಪೇಚು ಇದೇ ಆಗಿತ್ತು. ಕಾನೂನು ಕ್ರೂರವಾಗಿದೆ ಎಂದು ಗಾಂಧಿ ನಿರಾಕರಿಸುತ್ತಿದ್ದರು. ಪೊಲೀಸ್ ಮತ್ತು ಸೈನ್ಯವನ್ನು ಸೋದರ ಭಾವನೆಯಿಂದ ನೋಡುತ್ತಿದ್ದರು. ಅವರನ್ನು ಬಂಧುಗಳಂತೆ ಕಾಣುತ್ತಿದ್ದರು. ಕಾರಾಗೃಹವು ಅವರಿಗೆ ಬೋಧನೆಯ ಮತ್ತು ವಿಶ್ರಾಂತಿಯ ತಾಣವಾಗಿತ್ತು. ಗಾಂಧಿ ವಿರೋಧಿಸುವದಿಲ್ಲ. ಅವರನ್ನು ಕಾರಾಗೃಹಕ್ಕೆ ತಳ್ಳುವ ಸರಕಾರದೊಂದಿಗೂ ಅವರು ವಿನಯದಿಂದ ವರ್ತಿಸುತ್ತಾರೆ. ಇದು ಸ್ಮಟ್ಸ್‌ವಿಗೆ ಕಾಣುತ್ತಿತ್ತು. ಇಂಥ ಮನುಷ್ಯನಿಗೆ ಶಿಕ್ಷೆಯಾದರೂ ಹೇಗೆ ನೀಡುವದು ಮತ್ತು ಅವರ ಮೇಲೆ ದೌರ್ಜನ್ಯ ಮಾಡುವದಾದರೂ ಹೇಗೆ? ...ಟಾಲ್‌ಸ್ಟಾಯ್ ಹೇಗೆ ಬರೆಯುತ್ತಿದ್ದರೋ ಮಾತಾಡುತ್ತಿದ್ದರೋ ಹಾಗೆ ಗಾಂಧೀಜಿ ಬದುಕುತ್ತಿದ್ದರು. ಸ್ಮಟ್ಸ್‌ನ ಅನಿವಾರ್ಯತೆ ಗಾಂಧಿಗೆ ಕಾಣುತ್ತಿತ್ತು. ಆ ಅನಿವಾರ್ಯತೆಯಲ್ಲಿ ಅವರು ಸತ್ಯ ಮತ್ತು ಅಹಿಂಸೆಯ ವಿಜಯವನ್ನೂ ಕಾಣುತ್ತಿದ್ದರು. ಗಾಂಧೀಜಿಯು ಟಾಲ್‌ಸ್ಟಾಯ್‌ಗೆ ಬರೆದ ಮೊದಲ ಪತ್ರದಲ್ಲಿ ಟ್ರಾನ್ಸ್‌ವಾಲ್ (ದ.ಆಫ್ರಿಕಾ)ದಲ್ಲಿ ಅವರು ಆರಂಭಿಸಿದ ಸವಿನಯ ಕಾಯ್ದೆ ಭಂಗ ಚಳವಳಿಯ ವಿಷಯವನ್ನು ತಿಳಿಸಿದ್ದರು. ಅದು ಆ ಮುದಿ ತತ್ವ ಚಿಂತಕನ ಅಂತಃಕರಣವನ್ನು ತಟ್ಟಿದ್ದರಿಂದ ಅದನ್ನು ಅವನು ತನ್ನ ಗೆಳೆಯರ ಎದುರಿಗೆ ವ್ಯಕ್ತಪಡಿಸಿದನು. ಗಾಂಧಿಗೆ ಮಾರುತ್ತರ ನೀಡಿದ ಪತ್ರದಲ್ಲಿ ಟಾಲ್‌ಸ್ಟಾಯ್ ಹೀಗೆ ಬರೆಯುತ್ತಾರೆ, 'ನಿಮ್ಮ ಪತ್ರ ನನ್ನನ್ನು ಅಲುಗಾಡಿಸಿತು. ಪಾಷಣದ ವಿರುದ್ಧ ಮೆತ್ತಗಿನ ನೂಲಿನಿಂದ ಹೀಗೆಯೇ ಹೋರಾಡಬೇಕಾಗುತ್ತದೆ ಮತ್ತು ಹಿಂಸೆಯನ್ನು ಹೀಗೆಯೇ ಅಹಿಂಸೆಯಿಂದಲೇ ಮುಖಾಮುಖಿಯಾಗಬೇಕಾಗುತ್ತದೆ. ನಾನು ನಿಮ್ಮನ್ನು, ನಿಮ್ಮ ಎಲ್ಲ ಸಂಗಾತಿಗಳನ್ನು ಮನತುಂಬಿ ಅಭಿನಂದಿಸುತ್ತೇನೆ. ನಿಮ್ಮ ಹೋರಾಟಕ್ಕೆ ಜಯಸಿಗಲೆಂದು ಪ್ರಾರ್ಥಿಸುತ್ತೇನೆ.'

ಗಾಂಧೀಜಿಯವರು ಟಾಲ್‌ಸ್ಟಾಯ್‌ಗೆ ಬರೆದ

ಎರಡನೇ ಪತ್ರ ೪ ಏಪ್ರಿಲ್ ೧೯೧೦ರದ್ದು. ಆ ಪತ್ರದ ಜೊತೆಗೆ ಅವರು ತಮ್ಮ 'ಹಿಂದ್ ಸ್ವರಾಜ್' ಈ ಪುಸ್ತಿಕೆಯ ಅವರೇ ಮಾಡಿದ ಇಂಗ್ಲಿಷ್ ಅನುವಾದ ಮತ್ತು 'ಇಂಡಿಯನ್ ಹೋಮ್‌ರೂಲ್'ನ ಕೆಲವು ಬಿಡಿಸಂಚಿಕೆಗಳನ್ನು ಕಳಿಸಿದರು. 'ನಿಮ್ಮ ಆಪ್ತನಾಗಿ ಈ ಹೊತ್ತಿಗೆಗೆ ಬರೆಯುವ ಅಭಿಪ್ರಾಯ ಹಾಗೂ ನಮ್ಮ ಹೋರಾಟಕ್ಕೆ ನೀವು ನೀಡಿದ ಆಶೀರ್ವಾದವನ್ನು ನಾನು ಓದಲು ಬಯಸುತ್ತೇನೆ' ಎಂದೂ ಗಾಂಧೀಜಿ ಬರೆದರು... ಟಾಲ್‌ಸ್ಟಾಯ್ ಹಿಂದ್ ಸ್ವರಾಜ್ಯವನ್ನು ಓದಿದರು. 'ಅದೊಂದು ಮಹತ್ವದ ಗ್ರಂಥವೆಂದು ತನಗೆ ಅನಿಸಿತು' ಎಂದವರು ಒಂದೆಡೆ ಬರೆದರು. ಮುಂದೆ ೨೫ ಏಪ್ರಿಲ್ ೧೯೧೦ರಂದು ಅದರ ಬಗೆಗೆ ಸವಿಸ್ತಾರವಾದ ಪತ್ರವನ್ನೂ ಬರೆದರು. 'ಸವಿನಯ ಕಾಯ್ದೆಭಂಗ ಇದು ಇಂದಿನ ಎಲ್ಲ ದೌರ್ಜನ್ಯವನ್ನು ಗೆಲ್ಲುವ ಮಹತ್ವದ ಚಳವಳಿಯಾಗಿದೆ. ನೀವದನ್ನು ಕೈಗೆತ್ತಿಕೊಂಡಿರುವದು ನನಗೆ ಸಮಾಧಾನ, ಸಂತೋಷ ನೀಡಿದೆ.'

ಬೇಗ ಗಾಂಧೀಜಿಯವರು ಅವರ ಕಾಲೇನ್‌ಬಾಖ್ ಎಂಬ ಗೆಳೆಯನ ಸಹಾಯದಿಂದ ಟ್ರಾನ್ಸ್‌ವಾಲ್‌ನಲ್ಲಿ ತಮ್ಮ ಆಶ್ರಯವನ್ನು ನಿರ್ಮಿಸಿದರು. ಅದಕ್ಕೆ ಟಾಲ್‌ಸ್ಟಾಯ್ ಎಂಬ ಹೆಸರು ನೀಡಿದರು. ಬಳಿಕ ಟಾಲ್‌ಸ್ಟಾಯ್‌ಗೆ ಬರೆದ ಪತ್ರದಲ್ಲಿ ಅವರಿಗೆ ಕಾಲೇನ್‌ಬಾಖ್‌ನ ಮಾಹಿತಿ ನೀಡಿದರು. ತನ್ನ ಹೋರಾಟದ ವೃತ್ತಾಂತ ಮತ್ತು ಇಂಡಿಯನ್ ಒಪಿನಿಯನ್ ಈ ಪತ್ರಿಕೆಯನ್ನು ಕಳಿಸಿದರು. ಆಗ ಟಾಲ್‌ಸ್ಟಾಯ್ ಅನಾರೋಗ್ಯದಿಂದಾಗಿ ಕೊನೆಯ ಕ್ಷಣವನ್ನು ಎಣಿಸುತ್ತಿದ್ದರು. ಆದರೆ ಗಾಂಧಿಯ ಪತ್ರ ಓದಿ ಸಂಜೀವಿನಿ ಪ್ರಾಪ್ತವಾದವರಂತೆ ಅವರಲ್ಲಿ




ಉತ್ಸಾಹ ಸಂಚರಿಸಿತು. ಅನಂತರ ಅವರು ಗಾಂಧೀಜಿಗೆ ವಿವರವಾಗಿ ಉತ್ತರಿಸಿದರು. 'ಸವಿನಯ ಕಾಯ್ದೆ ಭಂಗವೆಂದರೆ ಬೇರೇನೂ ಆಗಿರದೆ ಪ್ರೇಮದ ಶಕ್ತಿಯ ಬಳಕೆಯಾಗಿದೆ. ಪ್ರೇಮವು ದೇವರು ಮನುಷ್ಯನಿಗೆ ನೀಡಿದ ಎಲ್ಲಕ್ಕಿಂತ ದೊಡ್ಡಶಕ್ತಿಯಾಗಿದೆ. ಪೌರ್ವಾತ್ಯ-ಪಾಶ್ಚಾತ್ಯ ಋಷಿ ಮುನಿಗಳು ಅದರ ಉಪಾಸನೆಯನ್ನು ಕೈಕೊಂಡಿದ್ದಾರೆ. ಪ್ರೇಮವು ವಿಶ್ವದ ಎಲ್ಲ ಪ್ರಶ್ನೆಗಳಿಗೆ ನೀಡಿದ ಸಮರ್ಪಕ ಉತ್ತರವಾಗಿದೆ. ಅದು ನಮ್ಮೆಲ್ಲ ದುಃಖ, ದೈನ್ಯ, ದೌರ್ಜನ್ಯ ಮತ್ತು ಅನ್ಯಾಯವನ್ನು ಮುಗಿಸುತ್ತದೆ. ಅದನ್ನು ಶಕ್ತಿಯುತ ಹಾಗೂ ಪ್ರಭಾವಿಯಾಗಿ ಮಾನವನಿಗೆ ಬಳಸಲು ಬರುತ್ತಿರಬೇಕು... ನೀವದನ್ನು ಆಫ್ರಿಕೆಯಲ್ಲಿ ಮಾಡುತ್ತಿದ್ದೀರಿ. ನಿಮಗೆ ಯಶ ಪ್ರಾಪ್ತಿಯಾಗುತ್ತದೆ. ಕಾಲೇನ್‌ಬಾಖ್‌ನಂತಹವರ ಸಾಂಗತ್ಯದಿಂದಾಗಿ ನಿಮ್ಮ ಸಾಮರ್ಥ್ಯ ಮತ್ತೂ ಬೆಳೆಯಬಲ್ಲದು.'

ಟಾಲ್‌ಸ್ಟಾಯ್ ಗಾಂಧಿಯ ಟೀಕಾಕಾರರಾಗಲಿ, ಸಮೀಕ್ಷಕರಾಗಲಿ ಆಗಿರಲಿಲ್ಲ. ಅವರ ವಯಸ್ಸಿನ ನಡುವೆ ಮೂರು ದಶಕಗಳಿಗಿಂತ ಹೆಚ್ಚು ಅಂತರವಿತ್ತು. ಅವರಿಬ್ಬರ ಭೇಟಿ ಸಹ ಎಲ್ಲೂ ಎಂದೂ ಆಗಿರಲಿಲ್ಲ. ಆದರೆ 'ನಾನು ಹೇಳಿದ ವಿಚಾರವನ್ನು ಗಾಂಧಿ ಬದುಕಿ ತೋರಿಸುತ್ತಾರೆ' ಎಂಬ ನಂಬಿಕೆಯು ೧೯೧೦ರ ದಶಕದಲ್ಲಿ ಟಾಲ್‌ಸ್ಟಾಯ್‌ನಂತಹ ಪ್ರತಿಭಾವಂತನಿಗೆ ಮೂಡಿದ್ದು - ಜಗತ್ತಿನ ಎಲ್ಲ ಶ್ರೇಷ್ಠ ಮಹಾಪುರುಷರ ನಡೆನುಡಿ ಒಂದೇ ಆಗಿರುತ್ತದೆ ಎನ್ನುವದು ಅವರ ನಡುವಿನ ಪತ್ರ ವ್ಯವಹಾರದಿಂದ, ಅದರಲ್ಲಿ ಅವರು ವ್ಯಕ್ತಮಾಡಿದ ಆತ್ಮೀಯತೆಯಿಂದ ಗೊತ್ತಾಗುತ್ತದೆ. ಭಾರತಕ್ಕಿಂತ ಮೊದಲೇ ಗಾಂಧೀಜಿ ವಿಶ್ವಕ್ಕೆ ಹೇಗೆ ಸಂದರು ಎಂಬ ಅನುಭವವೂ ಆಗುತ್ತದೆ. ಬಾರ್ ಎಟ್ ಲಾದ ಪರೀಕ್ಷೆ ನೀಡುವಾಗಲೇ ಗಾಂಧೀಜಿಯು ಇಂಗ್ಲೆಂಡಿನ ರಾಷ್ಟ್ರೀಯ ಶಾಕಾಹಾರ ಸಂಘಟನೆಯ ಸಚಿವರೂ, ಮುಖವಾಣಿಯ ಸಂಪಾದಕರಾಗಿದ್ದರು ಎನ್ನುವದೂ ಈ ಸಂದರ್ಭದಲ್ಲಿ ದಾಖಲಿಸು ವಂತಹದಾಗಿದೆ.

ಮರಾಠಿ ಮೂಲ : **ಸುರೇಶ ದ್ವಾದಶೀವಾರ್**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**
ನಂ. ೩೫೯, ಹನುಮಾನನಗರ,
ಬೆಳಗಾವಿ – ೫೯೦ ೦೧೯




# ಲಿಂಗಾಯತರ ಹಾಡು

**ನಾ**ವು ಅಧಿಕಾರ ಕೇಳುವುದಿಲ್ಲ ನಿಮ್ಮ
ಪಾರ್ಟಿ ಫಂಡ್ ಕೇಳುವುದಿಲ್ಲ॥

ನಮಗೆ ಈ ಜಗದ ಬೆಳಕಾದ
ವಿಶ್ವಗುರು ಬಸವಣ್ಣ ಸ್ಥಾಪಿಸಿದ
ಲಿಂಗಾಯತ ಧರ್ಮ ಬೇಕು
ಹೊಸ ಗಾಳಿಗೆ ಹೊಸ ಬೆಳಕಿಗೆ
ಹೊಸ ಬದುಕಿಗೆ ಹೊಸ ಹೆಜ್ಜೆ ಹಾಕಲು
ದಯವಿರುವ ಬಸವ ಧರ್ಮ ಬೇಕು॥

ನಾವು ಕುರ್ಚಿ ಕೇಳುವುದಿಲ್ಲ ನಿಮ್ಮ
ಆಸ್ತಿ ಅಂತಸ್ತು ಕೇಳುವುದಿಲ್ಲ
ನಮಗೆ ಈ ದೇಶದಲ್ಲಿ
ಕುಲವೆನ್ನದ ಮನುಕುಲದ ಧರ್ಮ ಬೇಕು
'ಸಮಬಾಳಿನ – ಸಮಪಾಲಿನ'
ಸಮಾನತೆಯ ಬಸವ ಧರ್ಮ ಬೇಕು॥

ನಾವು ಜಾತಿ ಮತ ಪಂಥ ಕೇಳುವುದಿಲ್ಲ ನಿಮ್ಮ
ಹೋಮ ಹವನ ವೇದ ಮಂತ್ರಗಳ ಕೇಳುವುದಿಲ್ಲ
ಸ್ವರ್ಗ – ನರಕ, ಪಾಪ – ಪುಣ್ಯಗಳ ಸುಡಲು
ಕ್ರಾಂತಿಕೆಂಡದ ಶರಣರ ಧರ್ಮ ಬೇಕು
ನೂರಾರು ವರ್ಷಗಳಿಂದ ಸಕಲ ಜೀವಾತ್ಮರಿಗೆಲ್ಲ
ಒಳಿತನ್ನೇ ಬಯಸುತ್ತಿರುವ ಬಸವ ಧರ್ಮ ಬೇಕು॥

ನಾವು ದೇವರು ದೈವ ಕೇಳುವುದಿಲ್ಲ ನಿಮ್ಮ
ಗೊಡ್ಡು ಗುಡಿ ಅಡ್ಡಪಲ್ಲಕ್ಕಿ ಉತ್ಸವ ಕೇಳುವುದಿಲ್ಲ
ಮನುಷ್ಯ – ಮನುಷ್ಯರಿಗಾಗಿ ಮಿಡಿಯುವ
ಕಲೆಯುವ ಉಸಿರಾಗುವ ಧರ್ಮ ಬೇಕು
ಜೀವ ಶೋಷಣೆ ಇಲ್ಲದ ಭೀತಿ ಇಲ್ಲದ
ಬಸವಾದಿ ಶರಣರ ಲಿಂಗಾಯತ ಧರ್ಮ ಬೇಕು॥

**ಸಿ. ಎಸ್. ಭೀಮರಾಯ**
ಆಂಗ್ಲ ಉಪನ್ಯಾಸಕರು, ಕೇರಾಫ್ ಎನ್. ಎಸ್. ಜಾಗೀರದಾರ, ಲಕ್ಷ್ಮೀ ನಗರ
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಹತ್ತಿರ, ಶಹಾಪುರ ಜಿಲ್ಲೆ, ಯಾದಗಿರಿ – ೫೮೫ ೨೨೩

# ಪ್ರಕೃತಿಯ ವಿನಾಶಕ್ಕೆ ಮನುಜ ತೆತ್ತ ಬೆಲೆ ಎನ್ನಬಹುದೇ...??

ಸಂಗೀತ ರವಿರಾಜ್

**ಕೊ**ಡಗಿನಲ್ಲಿ ಅಕ್ಷರಶಃ ಅಳದವರೇ ಇಲ್ಲ. ಮಾತು ಮೌನವಾಗಿ ಮೌನದ ಎದೆ ಬಸಿದು ಬಿಕ್ಕಳಿಕೆ ಬರುತ್ತಿದೆ. ಡಿ.ವಿ.ಜಿ.ಯವರ 'ಬದುಕು ಜಟಕಾ ಬಂಡಿ ವಿಧಿ ಅದರ ಸಾಹೇಬ' ಎಂಬ ಕಗ್ಗದ ಉಕ್ತಿಗೆ ನಮ್ಮ ಕೊಡಗಿನ ಕರುಣಾಜನಕ ಸ್ಥಿತಿ ತಾಜಾ ಉದಾಹರಣೆಯಾಗಿ ನಿಂತಿದೆ. ಹಲವು ಮುನ್ಸೂಚನೆ ಸಿಕ್ಕಿ ಮೊದಲೇ ಮನೆ ಬಿಟ್ಟಿದ್ದರೆ ಪರಿಸ್ಥಿತಿ ಇಷ್ಟು ವಿಕೋಪಕ್ಕೆ ಖಂಡಿತ ಹೋಗುತ್ತಿರಲಿಲ್ಲ. ಆದರೆ ಪ್ರಕೃತಿಯ ವೈರುಧ್ಯಗಳು ಹೇಳಿಕೇಳಿ ಬರುವುದೇ ಇಲ್ಲ. ಮೊದಲೇ ತಿಳಿದಿದ್ದರೆ ಅದೆಷ್ಟೋ ಮುಗ್ಧ ಜೀವಗಳು ಉಳಿಯುತ್ತಿದ್ದವು ಎಂಬ ಅಂತರಂಗದ ಮೊರೆ ಅಷ್ಟೆ. ಆದರೂ ಇಲ್ಲಿ ತಮ್ಮ ಜೀವದ ಹಂಗು ತೊರೆದು, ಕಷ್ಟದಲ್ಲಿ ಸಿಲುಕಿದವರನ್ನು ಕಾಪಾಡಿ ಊರಿನವರ ಮತ್ತು ದೂರದಿಂದ ಆಗಮಿಸಿದ ಯೋಧರ ಶ್ರಮ ಅತ್ಯಂತ ಶ್ಲಾಘನೀಯ.

ಕೊಡಗು ಸರ್ವರ ಕಣ್ಣಲ್ಲೂ ಭೂಲೋಕದ ಸ್ವರ್ಗ, ದಕ್ಷಿಣದ ಕಾಶ್ಮೀರ ಎಂಬಿತ್ಯಾದಿ ಬಿರುದುಗಳಿಂದ ಬೆಳಗುತ್ತಿತ್ತು. ಹಚ್ಚ ಹಸಿರಿನ ಕಾನನದ, ದಟ್ಟವಾದ ಬೆಟ್ಟಗುಡ್ಡಗಳ, ಗಿರಿಕಂದರಗಳ ನಾಡು. ಹೆಚ್ಚು ಮಳೆ ಬೀಳುವ ನೆಲವೂ ಹೌದು. ಒಟ್ಟಿನಲ್ಲಿ ಗಗನ ಚುಂಬಿಸುವ ಬೆಟ್ಟಗಳಿಂದ ಕೂಡಿದ ಸೌಂದರ್ಯ ಲೋಕ. ಯಾವ ಕಾಲಕ್ಕೂ ಏನೂ ಆಗದಂತಹ ನೆಲ-ಜಲ ಎಂಬುದಾಗಿ ನಂಬಿದ ಜನ. ಹೀಗಿದ್ದರೂ ಹೊಸ ರೂಪದಲ್ಲೊಂದು ಜಲಸ್ಫೋಟ ಎಂಬ ಭೂತ ಕೊಡಗನ್ನು ನುಂಗಿಹಾಕಿಬಿಟ್ಟಿದೆ. ಇದರ ಪರಿಣಾಮ ಹೇಗಿದೆಯೆಂದರೆ ಕೊಡಗು ಹೆಚ್ಚಿನ ಭಾಗ ಜಲಸಮಾಧಿಯಾಗಿದೆ. ಮನುಷ್ಯರ ಹಾಹಾಕಾರ ಮೂಕರೋದನವಾಗಿದೆ. ಪ್ರಕೃತಿಯ ಭಾಗವಾದ ಕಾಡುಪ್ರಾಣಿಗಳು, ನದಿಗಳ ಮೀನುಗಳು ದಾರುಣವಾಗಿ ಸತ್ತಿವೆ. ಕಣ್ಣಾರೆ ಕಂಡ ನಮಗೆಲ್ಲ ಕರುಳು ಕಿವುಚಿದಂತಾಗಿದೆ. ಈಗ ತಾನೆ ಗೆಳತಿಯೊಬ್ಬಳು ಹೇಳಿದ ಮಾತು, 'ಕೊಡಗನ್ನು ವರ್ಣಿಸಿ ಅದರ ಸೌಂದರ್ಯದ ಬಗ್ಗೆ ಹುಟ್ಟಿಕೊಂಡ ಪದ್ಯಗಳಿಗೆ ಲೆಕ್ಕವೇ ಇಲ್ಲ. ಎಲ್ಲ ಊರಿನವರು ಕೊಡಗಿನ ಸೌಂದರ್ಯದ ಬಗ್ಗೆ ಬರಿತಾರೆ. ನಾವುಗಳು ಬರೆಯುತ್ತಿದ್ದುದು ಇದನ್ನೇ, ಇನ್ನು ಏನೆಂದು ವರ್ಣಿಸೋಣ?' ಕಣ್ಣುಮುಚ್ಚಿ ತೆರೆಯುವುದರಲ್ಲಿ ಕ್ಷಣದೊಳಗೆ ಕಣ್ಣೆದುರೆ ನೀರುಪಾಲಾದ ಕೊಡಗಿನ ದುರ್ಗತಿ ಯಾರಿಗೂ ಬರಬಾರದು. ಹಸುಗೂಸನ್ನು ಕಳೆದುಕೊಂಡ ತಾಯಿ, ಮನೆಯವರೆಲ್ಲರನ್ನು ಕಳಕೊಂಡ ಮಗ, ಗಂಡನನ್ನು ಕಳಕೊಂಡ ತುಂಬು ಗರ್ಭಿಣಿ, ಅಮ್ಮನ ಕಳಕೊಂಡ ಮುಗ್ಧ ಬಾಲೆ, ಮನೆ ಕಳೆದುಕೊಂಡ ಅಜ್ಜ ಇವರೆಲ್ಲರ ಕಣ್ಣಿನಾಳದ ಬೇನೆ ತಾಗದ ಕರುಳೇ ಇಲ್ಲ. ಸಂಪೂರ್ಣ ನೆಲಸಮಗೊಂಡ ನೆಲೆ ಮತ್ತು ಬೆಳೆಯನ್ನು ನೆನೆದು ಕಣ್ಣೀರಿಡುತ್ತ ಆಶ್ರಯ ಕೇಂದ್ರದತ್ತ ಮುಖ ಮಾಡಿದ್ದಾರೆ. ಆದರೆ ಈ ನೋವು ಪ್ರತಿ ಮನುಷ್ಯನ ಹೃದಯ ಕಲಕಿದೆ ಎಂಬುದು ಈ ಕ್ಷಣದ ಸತ್ಯ. ಯಾಕೆಂದರೆ ಸಹಸ್ರ ಕನ್ನಡಿಗರ ಜೊತೆಗೆ ಹೊರನಾಡಿನವರು ಸ್ವ-ಇಚ್ಛೆಯಿಂದ, ಉದಾತ್ತ ಮನಸ್ಸಿನಿಂದ ಸಹಾಯದ ಸಾಗರವನ್ನೇ ಇತ್ತ ಹರಿಯ ಬಿಟ್ಟಿದ್ದಾರೆ. ಅಗತ್ಯವಾದ ವಸ್ತುಗಳನ್ನು ಅಗತ್ಯಕ್ಕಿಂತ ಹೆಚ್ಚಾಗುವವರೆಗೆ ನೀಡಿ

ಕೊಡಗಿನ ಮನೆ ಮಠ ಅಳಿದವರ ಮಧ್ಯೆ ಉಳಿದ ಮಂದಿ, ನಿರಾಶ್ರಿತರ ಕೇಂದ್ರದಲ್ಲಿಯೇ ಇದ್ದು ಅವರ ನೋವಿಗೆ ಜೊತೆಗೆ ಸೇವೆಗೆ ಕಟಿಬದ್ಧರಾಗಿದ್ದಾರೆ. ಹೊತ್ತು ಹೊತ್ತಿಗೆ ಊಟ ತಿಂಡಿ ತಯಾರಿಸಿ ಅವರಿಗೆ ಉಣಬಡಿಸುತ್ತಾರೆ. ತಮ್ಮ ಮನೆಗಳಿಗೂ ಅವರನ್ನು ಕರೆದೊಯ್ದು ಉಪಚರಿಸುತ್ತಾರೆ. ಆದರೆ ಎದೆ ಬಿಕ್ಕಿ ಅಳುವಾಗ, ಮನಸ್ಸು ಆರ್ದ್ರವಾದಾಗ ಅವರಿಗೆ ಊಟವಾದರು ಎಲ್ಲಿ ಸೇರುತ್ತದೆ ಹೇಳಿ? ಇನ್ನು ಕೆಲವು ಆಶ್ರಯ ಕೇಂದ್ರಗಳಲ್ಲಿ ಮಕ್ಕಳಿಗೆ ಮನರಂಜನೆ ಇರಲಿ ಎಂದು ಅಲ್ಲಿಗೆ ಬಂದು ಹಾಡು, ನೃತ್ಯ ಮಾಡಿಸುವ ಸಮಾಜಮುಖಿ ಮನಸ್ಸುಗಳಿವೆ. ದೊಡ್ಡವರಿಗೆ ನೆಮ್ಮದಿ ಇರಲೆಂದು ಯೋಗ ಮಾಡಿಸಿ ತಮ್ಮ ಪ್ರಯತ್ನ ಮಾಡುತ್ತಿದ್ದಾರೆ. ಇವರುಗಳ ನೋವು ಮರೆಸಲು ಮತ್ತು ಮಾನಸಿಕ ಬಲ ಹಿಗ್ಗಿಸಲು ಜನತೆ ಸರ್ವಪ್ರಯತ್ನ ಮಾಡುತ್ತಿದೆ. ಕುಸಿದ ಕೊಡಗಿನ ಬದುಕು ಕೊಡವಿ ಎದ್ದು ನಿಲ್ಲಲು ವರ್ಷಾನುಗಟ್ಟಲೆ ಆಗಬಹುದು.



ಬತ್ತಿದ ಮನಕ್ಕೆ ಕೊಂಚ ಸಮಾಧಾನದ ಆಸರೆ ನೀಡಿದ್ದಾರೆ. ಮನೆ ನೆಲಸಮವಾದರೂ, ಹೊಸ ನೆಲದಲ್ಲಿ ಮತ್ತೆ ಸೂರು ಕಟ್ಟಲು ಸಮಾಜ ಸಹಾಯ ಮಾಡುತ್ತದೆ ಎಂಬ ಅಭಯವನ್ನು ಈ ನಿರಾಶ್ರಿತರಲ್ಲಿ ಮೂಡಿಸಿದೆ. ಆದರೆ ಇಲ್ಲಿ ಒಂದು ಮುಖ್ಯ ವಿಷಯವಿದೆ. ಸಂಗ್ರಹಿಸಿದ ಹಣವೆಲ್ಲ ಫಲಾನುಭವಿಗಳಿಗೆ ಸಿಗುತ್ತದೆಯೇ ಎಂಬ ಆತಂಕ ಇಲ್ಲಿನವರಲ್ಲಿ ಮನೆ ಮಾಡಿದೆ ಎಂಬುದಂತೂ ನಿಜ. ಹಲವರು ತಮ್ಮ ಅನಿಸಿಕೆಗಳನ್ನು ಹಂಚಿಕೊಳ್ಳುವಾಗ ನೇರವಾಗಿ ನಮಗೆ ತಲುಪುವಂತೆ ಸಹಾಯ ಮಾಡಿ ಎಂಬುದಾಗಿ ಹೇಳುತ್ತಾರೆ. ಯಾಕೆಂದರೆ ಖಾಲಿ ಕೈಯಲ್ಲಿ ನಿಂತ ಅವರ ಸಂಕಟ ಅವರಿಗಷ್ಟೆ ತಿಳಿದ ಸತ್ಯ. ಇಂತಹ ದುಗುಡದ ಸಂದರ್ಭದಲ್ಲೂ ಹಣವನ್ನು ದೋಚುವ ಕೆಲಸವನ್ನು ದಯವಿಟ್ಟು ಯಾರೂ ಮಾಡಬಾರದು. ನಿರಾಶ್ರಿತರನ್ನು ಆದಷ್ಟೂ ಬೇಗ ಏನೂ ಆಗದ ಸ್ಥಳಗಳಿಗೆ ಕರೆತಂದರು. ತಿಳಿಯದೆ ಬಾಕಿಯಾದ ಹಲವು ಜನರ ಗುಂಪು ಏನೂ ತಿನ್ನದೆ ಒಂದು ದಿನ ಕಳೆದ ಬೇಸರದ ಸಂಗತಿಯು ನಡೆದಿದೆ. ಅಲ್ಲಿಗೆ ಹೋದಾಗ ಈ ವಿಷಯ ತಿಳಿದು ಅವರಿಗೆ ಮೊದಲು ಆಹಾರ ಪೂರೈಸಲು ತೊಡಗಿದಾಗ ಅವರ ನೋವನ್ನು ನೋಡಲಾಗಲಿಲ್ಲ ಎನ್ನುತ್ತಾರೆ ನೋಡಿದವರು. ಮನೆ ತೋಟ ಎಂದು ಸಂಪೂರ್ಣ ಕಳೆದುಕೊಂಡವರಲ್ಲಿ ಕಾರ್ಮಿಕ ವರ್ಗದವರು ಸೇರಿದ್ದಾರೆ, ಆಗರ್ಭ ಶ್ರೀಮಂತರು ಜೊತೆಗಿದ್ದಾರೆ. ಇದು ಪ್ರಕೃತಿ ಕಲಿಸಿದ ಪಾಠವಲ್ಲದೆ ಮತ್ತೇನು? ಪ್ರಕೃತಿಯ ಎದುರು ಮಾನವ ತೃಣ ಸಮಾನವೆಂಬುದು ಎಲ್ಲರಿಗೂ ಮತ್ತೊಮ್ಮೆ ಮನದಟ್ಟಾಗಿದೆ. ತನ್ನ ಸ್ವಾರ್ಥಕ್ಕೆ ಪ್ರಕೃತಿಯನ್ನು ಇಂಚಿಂಚು ಜಿಂಟಿ ತೆಗೆಯುತ್ತಿದ್ದುದರ ಫಲಕ್ಕೆ ಮಾನವ ತೆತ್ತ ಬೆಲೆ ಇದುವೇ ಇರಬೇಕು.

ಪ್ರತಿನಿತ್ಯದ ಸಂಬಳ ಅಂಥದೇ ಖರ್ಚಾಗುವ ಕಾರ್ಮಿಕ ವರ್ಗದ ಜೀವನ ಇನ್ನೂ ಉತ್ತಮವಾಗುವ ಸಾಧ್ಯತೆಯು ಇಲ್ಲಿ ಹೆಚ್ಚಿದೆ. ಒಂದು ಸಾಧಾರಣ ಮನೆ ಹೊಂದಿದ ಬೇರೇನೂ ಇಲ್ಲದ ಹೆಚ್ಚಿನ ಸಂಖ್ಯೆಯ ಕಾರ್ಮಿಕರೆ ತುಂಬಿದ ಗ್ರಾಮಗಳು ಸಂಪೂರ್ಣ ನಿರ್ನಾಮವಾಗಿವೆ. ಇಂಥವರಿಗೆ ಇನ್ನೂ ಗಟ್ಟಿಮುಟ್ಟಾದ ಮನೆ ದಾನವಾಗಿ ಸಿಕ್ಕಿ ಕೆಲಸಗಳು ಬದಲಾದಾಗ ಜೀವನಮಟ್ಟ ಸುಧಾರಣೆಯಾಗಬಹುದು. ದೊಡ್ಡ ಬಿರುಗಾಳಿಯ ನಂತರ ಶಾಂತವಾಗುವ ವಾತಾವರಣದಂತೆ ಇವರ ಜೀವನ ನೆಲೆಗೊಳ್ಳಲಿ ಎಂಬ ಆಶಯ ನಮ್ಮದು. ಏನೇ ಆದರೂ ಮನೆಯೊಂದಿಗಿದ್ದ ಅವರ ಭಾವನಾತ್ಮಕ ನಂಟು ಅವರಿಗಷ್ಟೆ ತಿಳಿದ ಸಂಗತಿ. ಇದನ್ನೆಲ್ಲ ಎದುರಿಸುವ ಮನೋಧೈರ್ಯವನ್ನು ಅವರಲ್ಲಿ ಬೆಳೆಯಿಸುವುದು ನಮ್ಮ ಕರ್ತವ್ಯವಾಗಬೇಕು. ಆಗರ್ಭ ಶ್ರೀಮಂತರೆನಿಸಿದವರಿಗೆ ಮತ್ತು ಮಧ್ಯಮ ವರ್ಗದವರಿಗೆ ಇದು ಜೀರ್ಣಿಸಿಕೊಳ್ಳಲಾಗದಂತಹ ನೋವಾಗಿ ಪರಿಣಮಿಸಬಹುದು. ಏಕೆಂದರೆ ಅವರಿಗಿನ್ನು ತಳಮಟ್ಟದ ಜೀವನಕ್ಕೆ ಹೊಂದಿಕೊಳ್ಳುವುದೆಂದರೆ ಅದು ಮಾನಸಿಕವಾಗಿ ತ್ರಾಸದಾಯಕ. ಉದ್ಯೋಗಸ್ಥರು ನಿಧಾನವಾಗಿ ನೆಲೆ ಕಟ್ಟಿಕೊಳ್ಳಬಹುದು. ಆದರೆ ಸ್ವಂತ ಜಮೀನು ಹೊಂದಿ ಅದರಲ್ಲಿ ದುಡಿದು ಬದುಕು ಕಟ್ಟಿಕೊಂಡಿದ್ದ ಕುಟುಂಬಗಳಿಗೆ ತೀವ್ರತರವಾದ ಪೆಟ್ಟು ಇದು. ಬಾಳು ಮತ್ತೆ ಎದ್ದು ನಿಲ್ಲಲು ಇವರು ಹೆಣಗಾಡಬಹುದು. ಏನೇ ಆದರೂ ಕಾಲ ಎಲ್ಲವನ್ನು ಮರೆಸುತ್ತೆ ಎಂಬ ಸತ್ಯ ನಮ್ಮೊಂದಿಗಿದೆ ಅಲ್ಲವೇ? ಲೋಕದ ಸಹೃದಯರ, ಸನ್ಮಿತ್ರರ ಸಹಾಯ ಹಸ್ತದಿಂದ ಮತ್ತೆ ಬದುಕು ಕಟ್ಟುವ ಇವರ ಹುಮ್ಮಸ್ಸು ಇಮ್ಮಡಿಯಾಗುತ್ತಿರಲಿ ಎಂಬುದಷ್ಟೆ ನಮ್ಮ ಹಾರೈಕೆ.

ಇಂತಹ ಸಂದರ್ಭದಲ್ಲಿ ಮಹಿಳೆಯರು ಅತಿ ಹೆಚ್ಚಿನ ಆತ್ಮಬಲದಿಂದ ಮತ್ತು ತಾಳ್ಮೆಯಿಂದ ಜೀವಿಸಬೇಕಾಗುತ್ತದೆ. ಏಕೆಂದರೆ ಆಕೆ ಕುಟುಂಬದ ಕೇಂದ್ರಬಿಂದು. ನಿರಾಶ್ರಿತೆಯಾದಾಗ ಆಕೆ ಗರ್ಭಿಣಿಯಾಗಿದ್ದಿರಬಹುದು, ಬಾಣಂತಿಯಾಗಿರಬಹುದು ಅಥವಾ ತಿಂಗಳ ರಜದಲ್ಲಿದ್ದಿರಬಹುದಾದ ಈ ಹೊತ್ತು ಆಕೆಯ ಮನೋಬಲ ಕುಗ್ಗಿದ್ದರೆ ಇದು ಮನೆಯ ಇತರ ಸದಸ್ಯರ ಮೇಲೆ ವ್ಯತಿರಿಕ್ತ ಪರಿಣಾಮವನ್ನುಂಟುಮಾಡುತ್ತದೆ. ಮುಖ್ಯವಾಗಿ ತಾಯಿಗೆ ಮಕ್ಕಳಲ್ಲಿ ಧೈರ್ಯ ತುಂಬಿ ಅವರನ್ನು ಜೋಪಾನ ಮಾಡುವ ಬಹುದೊಡ್ಡ ಕರ್ತವ್ಯ ಇರುತ್ತದೆ. ಶಿಕ್ಷಕಿಯಾಗಿದ್ದವಳಿಗೂ ಇದಕ್ಕಿಂತ ಹೆಚ್ಚಿನ ಕರ್ತವ್ಯವಿರುತ್ತದೆ. ಆಕೆಯೇ ಬಲಹೀನವಾದರೆ ಕುಟುಂಬದ ಶಕ್ತಿ, ಏಳಿಗೆ ಎಲ್ಲವೂ ನಿಧಾನವಾಗಿಬಿಡುತ್ತದೆ. ಈಗ ಸದ್ಯ ನಿರಾಶ್ರಿತರ ಸ್ಥಳಗಳಲ್ಲಿ ಹೆಚ್ಚಾಗಿ ಮಹಿಳೆಯರೆ ಇದ್ದಾರೆ. ಹಗಲಿನ ಸಮಯ ಗಂಡಸರು ತಮ್ಮ ಮನೆಯಿದ್ದ ಸ್ಥಳಗಳನ್ನು ನೋಡಿ ಬರಲು ತೆರಳುತ್ತಾರೆ. ನಿರಾಶ್ರಿತ ಕೇಂದ್ರದಿಂದಲೇ ಕೆಲಸಕ್ಕೆ ತೆರಳುವವರು ಇದ್ದಾರೆ. ಇತ್ತ ಮಹಿಳೆಯರು ತಾವಿದ್ದ ಕಡೆ ಸಾವಿನ ವಿಚಾರಗಳನ್ನು ಕೇಳಲು ಕಾದು ಕುಳಿತಿರುತ್ತಾರೆ. ತಮ್ಮ ಮನೆ, ತೋಟದೊಂದಿಗೆ ಮಹಿಳೆಗಿದ್ದಷ್ಟು ಭಾವನಾತ್ಮಕ ಸಂಬಂಧ ಬೇರೆ ಸದಸ್ಯರಿಗೆ









ಖಂಡಿತ ಇರುವುದಿಲ್ಲ. ಸಂಪೂರ್ಣ ಮನೆಯಲ್ಲಿಯೇ ಕಾಲ ಕಳೆಯುವ ಮಹಿಳೆಗೆ ಆಗಿದ್ದ ಮನೆ ಈಗಿಲ್ಲವೆಂದರೆ ಹೃದಯ ಸ್ತಬ್ಧವಾದಂತೆ ಸರಿ. ಇವರ ಸಂಕಟಗಳನ್ನು ಇಲ್ಲಿ ನೋಡಲಾಗುತ್ತಿಲ್ಲ. ಪರಸ್ಪರ ತೋಡಿಕೊಳ್ಳುವ ನೋವು ಇದಾದರೂ, ಎಲ್ಲರದ್ದು ಒಂದೇ ಬೇಸರವೆಂದ ಮೇಲೆ ಇಲ್ಲಿ ಮಾತು ಮೌನವಾಗಿದೆ. ಅವರ ಕಣ್ಣುಗಳೇ ಎಲ್ಲವನ್ನು ಹೇಳುತ್ತಿವೆ. ಉಟ್ಟ ಬಟ್ಟೆಯಲ್ಲಿಯೇ ಎದ್ದುಬಂದವರ ಪಾಡು ಅವರಷ್ಟೆ ಅನುಭವಿಸುವ ನೋವು. ಇದರೊಂದಿಗೆ ಮಹಿಳೆಯರಿಗೆ ಇನ್ನೂ ಅತೀವ ಬೇಸರ ತರುವ ಸಂಗತಿಯೆಂದರೆ ಸಾಕು ಪ್ರಾಣಿಗಳದ್ದು. ಮನೆ ಮಹಿಳೆಗೆ ಅವುಗಳೊಂದಿಗೆ ತೀರದ ನಂಟು ಬೆಸೆದಿರುತ್ತದೆ. ಪ್ರತಿ ದಿನ ಹಾಲು ಕರೆಯುತ್ತಿದ್ದ ಹಸು ಈಗೆಲ್ಲಿದೆಯೋ ತಿಳಿದಿಲ್ಲ. ಮೈದಡವುತ್ತಿದ್ದ ಬೆಕ್ಕು ನಾಯಿಗಳ ಸುದ್ದಿಯೇ ಇಲ್ಲ. ಕೋಳಿಗಳು ಬದುಕಿವೆಯೋ ಸತ್ತಿವೆಯೋ ತಿಳಿದಿಲ್ಲ. ಇಂತಹ ವಿಚಾರಗಳು ಆಕೆಯನ್ನು ಇನ್ನೂ ಕುಗ್ಗಿಸುತ್ತವೆ. ಇಷ್ಟೆಲ್ಲ ಆಕೆಯ ಆತ್ಮಸ್ಥೈರ್ಯವನ್ನು ಹಿಮ್ಮೆಟ್ಟಿಸಿದ್ದರು, ನಾವೆಲ್ಲ ಪವಾಡವೆಂಬಂತೆ ಬದುಕಿ ಉಳಿದಿದ್ದೇವೆ ಎಂಬ ಆಶಾಕಿರಣದೊಂದಿಗೆ ಏನೋ ಭರವಸೆಯಿದೆ. ಮಣ್ಣಿನಡಿ ಸಿಲುಕಿ ಹಲವಾರು ಜನ ಸತ್ತಿರುವಾಗ ನಾವು ಉಳಿದಿದ್ದೇವೆ ಎಂಬ ವಿಚಾರ ಅವರೆಲ್ಲರ ಮನಸ್ಸಿನಲ್ಲಿದೆ. ಅದೆಷ್ಟೋ ಗರ್ಭಿಣಿಯರು, ಪ್ರಾಯದವರು ಹದಿನೈದು ಇಪ್ಪತ್ತು ಕಿಲೋಮೀಟರ್ ನಡೆದು ಬಂದು ಜೀವ ಉಳಿಸಿಕೊಂಡಿದ್ದಾರೆ. ಹಸುಗೂಸನ್ನು ಎದೆಗವುಚಿಕೊಂಡು ಓಡಿಬರುತ್ತಿದ್ದ ತಾಯೊಬ್ಬಳ ಕಾಲು ಕೆಸರಲ್ಲಿ ಹೂತು ಹೋಗಿ, ಕೈಯಿಂದ ಮಗು ಬಿದ್ದು ಪ್ರಾಣ ಕಳೆದುಕೊಂಡ ಆ ತಾಯಿಯ ನೋವು ಪ್ರತಿ ತಾಯಿಯ ನೋವಾಗಿದೆ. ಇಂತಹ ಕರುಳು ಹಿಂಡುವ ಕಣ್ಣೀರಿನ ಕತೆಗಳು ಹೇಳಿದಷ್ಟು ಮುಗಿಯಲಾರದು.



ಕೊಡಗಿನ ಮನೆ ಮಠ ಅಳಿದವರ ಮಧ್ಯೆ ಉಳಿದ ಮಂದಿ, ನಿರಾಶ್ರಿತರ ಕೇಂದ್ರದಲ್ಲಿಯೇ ಇದ್ದು ಅವರ ನೋವಿಗೆ ಜೊತೆಗೆ ಸೇವೆಗೆ ಕಟಿಬದ್ಧರಾಗಿದ್ದಾರೆ. ಹೊತ್ತು ಹೊತ್ತಿಗೆ ಊಟ ತಿಂಡಿ ತಯಾರಿಸಿ ಅವರಿಗೆ ಉಣಬಡಿಸುತ್ತಾರೆ. ತಮ್ಮ ಮನೆಗಳಿಗೂ ಅವರನ್ನು ಕರೆದೊಯ್ದು ಉಪಚರಿಸುತ್ತಾರೆ. ಆದರೆ ಎದೆ ಬಿಕ್ಕಿ ಅಳುವಾಗ, ಮನಸ್ಸು ಆರ್ದ್ರವಾದಾಗ ಅವರಿಗೆ ಊಟವಾದರು ಎಲ್ಲಿ ಸೇರುತ್ತದೆ ಹೇಳಿ? ಇನ್ನು ಕೆಲವು ಆಶ್ರಯ ಕೇಂದ್ರಗಳಲ್ಲಿ ಮಕ್ಕಳಿಗೆ ಮನರಂಜನೆ ಇರಲಿ ಎಂದು ಅಲ್ಲಿಗೆ ಬಂದು ಹಾಡು, ನೃತ್ಯ ಮಾಡಿಸುವ ಸಮಾಜಮುಖಿ ಮನಸ್ಸುಗಳಿವೆ. ದೊಡ್ಡವರಿಗೆ ನೆಮ್ಮದಿ ಇರಲೆಂದು ಯೋಗ ಮಾಡಿಸಿ ತಮ್ಮ ಪ್ರಯತ್ನ ಮಾಡುತ್ತಿದ್ದಾರೆ. ಇವರುಗಳ ನೋವು ಮರೆಸಲು ಮತ್ತು ಮಾನಸಿಕ ಬಲ ಹಿಗ್ಗಿಸಲು ಜನತೆ ಸರ್ವಪ್ರಯತ್ನ ಮಾಡುತ್ತಿದೆ. ಕುಸಿದ ಕೊಡಗಿನ ಬದುಕು ಕೊಡವಿ ಎದ್ದು ನಿಲ್ಲಲು ವರ್ಷಾನುಗಟ್ಟಲೆ ಆಗಬಹುದು. ಆದರೆ ಖಂಡಿತ ಎದ್ದು ನಿಲ್ಲದೆ ಇರಲಾರದು. ಹಿರೋಶಿಮಾ, ನಾಗಸಾಕಿಯ ಉದಾಹರಣೆಯೇ ನಮ್ಮ ಕಣ್ಣ ಮುಂದಿದೆ. ಸರ್ವನಾಶ ಆದ ಊರಿನ ಜನರಿಗೆ ಮಾತ್ರ ಇದರ ಪರಿಣಾಮ ಖಂಡಿತ ಅಲ್ಲ. ಇದಕ್ಕೆ ನಾವೆಲ್ಲರು ಜವಾಬ್ದಾರರು ಹೌದು. ಕೊಡಗಿನ ಅಳಿದುಳಿದ ನಮ್ಮಂತಹ ಗ್ರಾಮಗಳಿಗೂ ಇದರ ಪ್ರಭಾವ ತಟ್ಟದೆ ಇಲ್ಲ. ಉದ್ಯೋಗಕ್ಕೆ ಹೋಗಲು ದಾರಿ ಇಲ್ಲ, ದಾರಿ ಇದ್ದವರಿಗೆ ಕಟ್ಟಡ ಇಲ್ಲ, ಬಂಧುಗಳ ಕಳಕೊಂಡ ನೋವು, ಉದ್ಯಮದವರಿಗೆ ವ್ಯಾಪಾರ ಇಲ್ಲ, ಕೃಷಿಕರಿಗೆ ಬೆಳೆಯೇ ಇಲ್ಲ ಇತ್ಯಾದಿಗಳು ಹಲವಾರಿವೆ. ಪ್ರತಿದಿನ ನಮಗೆಲ್ಲ ಸುದ್ದಿ ಕೊಡುತ್ತಿದ್ದ ಪತ್ರಿಕೆಯು ಸುದ್ದಿಗೆ ಗ್ರಾಸವಾಗಿದೆ. ಎಲ್ಲರು ಹೇಳುವಂತೆ ಕೊಡಗಿನ ಇತಿಹಾಸದಲ್ಲಿಯೇ ಇದು ಮೊದಲು ಕಂಡ ದೊಡ್ಡ ದುರಂತ. ಮಿತಿಮೀರಿದ ವಾಣಿಜ್ಯ ಚಟುವಟಿಕೆ, ಅದಕ್ಕೂ ಮೀರಿದ ಅರಣ್ಯ ನಾಶ, ನಗರೀಕರಣದಿಂದ ಮಳೆಯನ್ನು ತಡೆದುಕೊಳ್ಳುವ ದಾರುಣ ಶಕ್ತಿಯನ್ನು ನೆಲ ಕಳೆದುಕೊಂಡಿದೆ ಎಂಬುದಾಗಿ ಭೂಗರ್ಭ ಶಾಸ್ತ್ರಜ್ಞರು ನುಡಿದಿದ್ದಾರೆ. ಈ ಜಲ ಸ್ಫೋಟದಿಂದಾದ ಭೂಕುಸಿತದ ಕಾರಣಗಳನ್ನು ಹೇಳ ಹೊರಟರೆ ದೊಡ್ಡ ಪಟ್ಟಿಯೇ ಇದೆ. ವಿನಾಶವಾದ ಮೇಲೆ ಮನುಜನಿಗೆ ವಿಕೋಪದ ತೀವ್ರತೆಯ ಅರಿವಾದರೆ ಇನ್ನು ಮುಂದಾಗುವ ದೊಡ್ಡ ಅನಾಹುತ ತಪ್ಪಬಹುದಲ್ಲವೇ? ಪ್ರಕೃತಿಯನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಂಡದ್ದಕ್ಕೆ ಮನುಷ್ಯನಿಗೆ ಪಶ್ಚಾತ್ತಾಪವಾದರೆ ಪ್ರಕೃತಿ ಮನ್ನಿಸಬಹುದಲ್ಲವೇ? ಪ್ರಕೃತಿಗೆ ನೋವುಂಟುಮಾಡಿದ್ದಕ್ಕೆ ಪ್ರಕೃತಿ ನಮಗೆ ಮಾಡಿದ ನೋವು ಇದೆಂದು ಅಂದುಕೊಳ್ಳಬಹುದೇ?

**ಸಂಗೀತ ರವಿರಾಜ್**
ಬಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲ್ಲೂಕು
ಕೊಡಗು – ೫೭೪ ೨೩೪



# ಪಾಟೀ ಚೀಲ

ಏನು ಹುಡುಗರೋ ಏನೋ ಸಾಲಿಯಿಂದ ಬರತಿದಾಂಗಲೇ ಪಾಟೀ ಚೀಲ ಎಲ್ಲೆಂದರೆ ಅಲ್ಲಿ ಬಿಸಾಕಿ ಟಿ. ವ್ಹಿ. ಮುಂದ ಕೂಡತಾವ. ಎಷ್ಟೋ ಸಾರೆ ಹೇಳ್ಯಾದ ಬಂದಕೂಡಲೇ ಪಾಟೀ ಚೀಲ ಒಂದು ಕಡೆ ಮಟ್ಟಸಾಗಿ ಇಡರಿ, ಅದು ಸರಸ್ವತಿ ದೇವರು ಅಸಡ್ಯಾ ಮಾಡ ಬೇಡರಿ ಅಂತ ಅಂದರೂ ಈಗಿನ ಹುಡುಗರು ಕೇಳೋದಿಲ್ಲ, ನಮಗಾವಾದ ಮಾಡತಾವ, “ಏನು ಅಜ್ಜಿ, ಏನು ವಟ ವಟ ಅನ್ನಲಿಕ್ಕೆ ಹತ್ತಿಯಲ್ಲಾ ಟಿ. ವ್ಹಿ.ಯೊಳಗಿಂದು ಕೇಳಬೇಕಾ ಇಲ್ಲ ನಿನ್ನ ಪುರಾಣ ಕೇಳಂತಿಯಾ ಹೇಳೆಂದು ಕೇಳತಾವ.”

“ಏನು ಇಲ್ಲಪ್ಪ, ಸಾಲಿಯಿಂದ ಒಂದು ಪಾಟೀ ಚೀಲ ಸರಿಯಾಗಿ ಒಂದು ಕಡೆ ಇಡರಿ, ಅದು ಸರಸ್ವತಿ ದೇವರು ಅಲಕ್ಷ ಮಾಡಬಾರದು ಅಂತ ಹೇಳಿದೆ.”

“ಏನು ಚೀಲ, ಯಾರು ಇಲ್ಲಿ ಚೀಲ ಇಟ್ಟಿಲ್ಲ ಅದು ಸ್ಕೂಲಬ್ಯಾಗ, ಅದರಾಗ ಯಾವ ಸರಸ್ವತಿ ದೇವಿ ಕೂತಿಲ್ಲ, ಪುಸ್ತಕಗಳು, ನೋಟ್‌ಬುಕ್‌ಗಳು ಅದಾವಂತ ಹೇಳತಾರ.”

ನೋಡರಿ ಈಗಿನ ಹುಡುಗರ ಮಾತಿಗೆ ನಾವೇ ಬಾಯಿಮುಚ್ಚಿಕೊಂಡು ಕೂಡೋ ಕಾಲ ಬಂದಾದ. ನಾವು ಸಣ್ಣವರಿದ್ದಾಗ ಹಿರಿಯರು ಒಂದು ಮಾತು ಒಂದು ಸಾರೆ ಹೇಳಿದರೆ ಅದನ್ನು ಅಕ್ಷರತಾ ಪಾಲಿಸುತ್ತಿದ್ದಿವಿ. ಯಾವಾಗಲೂ ನೆನಪಿಟ್ಟುಕೊಂಡು ಕೆಲಸ ಮಾಡುತ್ತಿದ್ದೀವಿ. ಸಾಲಿ ಪುಸ್ತಕ, ಪಾಟೀ ಚೀಲಗಳ ಬಗ್ಗೆ ಎಷ್ಟೊಂದು ಗೌರವವಿತ್ತು. ಅಪ್ಪಿ ತಪ್ಪಿ ಕೈಯಿಂದ ಪುಸ್ತಕ ಜಾರಿ ಕೆಳಗ ಬಿದ್ದರೆ ಎತ್ತಿ ಕಣ್ಣಿಗೆ ಒತ್ತಿಕೊಳ್ಳುತ್ತಿದ್ದವಿ. ನಾವು ಸಣ್ಣವರಿದ್ದಾಗ ಬಟ್ಟೆಯಿಂದ ತಯಾರಿಸಿದ ಪಾಟೀ ಚೀಲಗಳು ಬಜಾರದಾಗ ಸಿಗುತ್ತಿದ್ದವು, ಅವು ಬಗಲಿಗೆ ಹಾಕಿಕೊಳ್ಳಲು ಬರುವಾಂಗ ಇರುತ್ತಿದ್ದವು, ನಮ್ಮಕ್ಕ ಹೊಲಿಗೆ ಕಲಿತ್ತಿದ್ದಳು, ಮನಿಯಲ್ಲಿಯೇ ಪಾಟೀ ಚೀಲ ಹೊಲಿದು ಕೊಡುತ್ತಿದ್ದಳು, ಬಣ್ಣ ಬಣ್ಣದ ಬಟ್ಟೆಗಳನ್ನು ಜೋಡಿಸಿ ಒಳಗ ಒಂದು ದಪ್ಪವಾದ ಬಟ್ಟೆಹಾಕಿ ಎರಡು ಅಥವಾ ಮೂರು ಖಾನಿ ಮಾಡಿ, ಸಣ್ಣ ಸಣ್ಣ ಎರಡು ಪಾಕೇಟ್ ಹಚ್ಚಿ ಹೊಲಿಯುತ್ತಿದ್ದಳು. ಅವುಗಳಲ್ಲಿ ಒಂದು ಕಡೆ ಪುಸ್ತಕ, ಇನ್ನೊಂದು ಕಡೆ ಪಾಟೀ, ಕಚ್ಚಾವಹಿ, ಪಕ್ಕಾವಹಿ, ಇಡುತ್ತಿದ್ದಿವಿ. ಸಣ್ಣ ಪಾಕೇಟದಾಗ ಸಣ್ಣ ಸಾಮಾನುಗಳಾದ ರಬ್ಬರ, ಬಳಪ, ವಸ್ತ್ರ, ಊಟದ ಡಬ್ಬಾ ಇಡುತ್ತಿದ್ದೆವು. ಈಗಿನ ಹುಡುಗರಂತೆ ನಾವು ಕುಡಿಲಿಕ್ಕೆ ನೀರು ಸಾಲಿಗೆ ತೆಗೆದುಕೊಂಡು ಹೋಗುತ್ತಿರಲಿಲ್ಲ, ನಾವು ಸಾಲಿ ಮುಗಿಸಿ ಮನೆಗೆ ಬಂದ ಕೂಡಲೇ ಪಾಟೀ ಚೀಲ ಒಂದು ಕಡೆ ಮಟ್ಟಸಾಗಿಟ್ಟು ಕೈಕಾಲು ಮುಖತೊಳಕೊಂಡು ಅವ್ವಕೊಟ್ಟ ಏನಾದರೂ ತಿನಿಸು ತಿಂದು ಮತ್ತೆ ಹೊರಗ ಆಡಲು ಹೋಗುತ್ತಿದ್ದೆವು. ಮಳೆ ಇರದಾಗ, ಚಳಿಗಾಲ ಬೇಸಿಗೆಗಾಲದಲ್ಲಿ ಬಯಲಲ್ಲಿ ಮುಟ್ಟಾಟ, ಕಣ್ಣಾಮುಚ್ಚಿ ಕಾಡೆಗೂಡೆ ಆಟ, ಲಗೋರಿ, ಗಿಲ್ಲಿದಾಂಡ, ಕಳ್ಳ ಪೊಲೀಸ್ ಆಟ, ಕಬ್ಬಡಿ, ಚಂಡಾಟ, ಮರಗೋತಿ ಆಟ ಹೀಗೆ ಬೇರೆ ಬೇರೆ ಬಯಲಿನಲ್ಲಿ ಆಡುವ ಆಟಗಳನ್ನು ಆಡುತ್ತಿದ್ದೆವು. ಇನ್ನು ಮಳೆಗಾಲದಲ್ಲಿ ಮನೆಯ ಮುಂದೆ ಇದ್ದ ಕಟ್ಟೆ ಮೇಲೆ ಎಲ್ಲರೂ ಸೇರಿ ಹುಣಸೀ ಬೀಜದ ಆಟ, ಆಣಿಕಲ್ಲಾಟ, ಬಳೆಚೂರಾಟ, ಒಳಗ ಹೊರಗ (ಕೆರೆ-ದಡ) ಆಟ, ಚೆನ್ನಮಣೆ ಆಟ, ಚಕ್ಕಾಟ, ಕವಡಿ ಆಟ, ಹುಲಿ-ಕುರಿ ಆಟ, ಗಜ್ಜಗದಾಟ – ಹೀಗೆ ಬೇರೆ ಬೇರೆ ಆಟಗಳನ್ನೂ ಆಡುತ್ತಿದ್ದೆವು. ಕೆಲವು ಗಂಡುಹುಡುಗರು ಗರಡಿ ಮನೆಗಳಿಗೆ ಹೋಗಿ ಅಲ್ಲಿ ಕುಸ್ತಿ, ಮಲ್ಲಗಂಬ, ಆಳನೇರಿಕೆ (ಪಿರ್‍ಯಾಮಿಡ್) ಗುಂಡು ಎತ್ತುವದು ಹೀಗೆ ಮುಂತಾದ ದೇಹ ದಂಡಿಸುವ ಕೆಲಸ ಮಾಡುತ್ತಾ ತಮ್ಮ ದೇಹ ಗಟ್ಟಿಗೊಳಿಸಿಕೊಳ್ಳುತ್ತಿದ್ದರು. ಕತ್ತಲಾಗುವವರೆಗೂ ಬಯಲಲ್ಲಿದ್ದು ಆಟ ಆಡಿ ಮನೆಗೆ ಬರುತ್ತಿದ್ದೆವು. ಮನೆಗೆ ಬಂದ ಮೇಲೆ ಕೈಕಾಲು ಮುಖ ತೊಳೆದುಕೊಂಡು ಶುಚಿಯಾಗಿ ದೇವರಿಗೆ ಕೈಮುಗಿದು ಓದಲು ಕೂಡುತ್ತಿದ್ದೆವು.

**ಪ್ರಭಾವತಿ ಎಸ್. ದೇಸಾಯಿ**

ಸಾಲಿಯಲ್ಲಿ ಇಟ್ಟ ನೀರು ಕುಡಿಯುತ್ತಿದ್ದೆವು. ಸಾಲಿ ಮುಂದ ಮಾರಲಿಕ್ಕಿ ಬಂದ ಹುರದ ಸೇಂಗ, ಉಪ್ಪು ಹಚ್ಚಿದ ಹುರಕಡ್ಲಿ, ಹುರದ ಹುಣಸೇಬೀಜ, ಕಮ್ಮರ ಗಟ್ಟಾ, ಹುಳಿ ಪೆಪ್ಪರ್‌ಮೆಂಟ್, ಕುದಿಸಿದ ಗೆಣಸುಗಳನ್ನು ಆಗಾಗ ಅಪ್ಪ, ಅವ್ವರ ಕಡಿಂದ ಒಂದು ಆಣೆ ಇಸಕೊಂಡು ತಿನಿಸುಗಳನ್ನು ಖರೀದಿಮಾಡಿ ಪಾಟೀ ಚೀಲದಾಗ ಮುಚ್ಚಿ ಇಟ್ಟುಕೊಂಡು ತರಗತಿ ಕೊಠಡಿಯಾಗ ಮಾಸ್ತರ್‌ಗೆ ಕಾಣದಾಂಗ ಕದ್ದು ತಿನ್ನುತಿದ್ದಿವಿ, ಎಷ್ಟು ರುಚಿ ಅನಿಸುತ್ತಿದ್ದವು. ಗೆಳತಿಯರು ಒಬ್ಬರಿಗೊಬ್ಬರು ಮುಚ್ಚಿಕೊಡುತ್ತಿದ್ದೆವು. ಅವರು ತಂದಾಗ ನಮಗಾ ಕೊಡುತ್ತಿದ್ದರು. ಇನ್ನು ಆಡಲಿಕ್ಕೆ ಬೇಕಾಗುವ ಬಳೆಚೂರು, ಗಜ್ಜಗಗಳು, ಆಣೆಕಲ್ಲು ಆಡಲು ಗುಂಡಗಿನ ಸಪಾಟ ಕಲ್ಲುಗಳು, ಕುಂಟುಪಿಲ್ಲಿ ಆಟದ ವಟ್ಟಪ್ಪೆ, ಹಗ್ಗದಾಟವಾಡಲಿಕ್ಕ ಹಗ್ಗ, ಮಂದಿ ಮನೆ ಮುಂದೆ ಅರಳಿದ ಚಂದಾದ ಗುಲಾಬಿ ಹೂ ಕಿತ್ತುಗೊಂಡು ಟೀಚರಗೆ ಕೊಡಲು ಪಾಟೀ ಚೀಲದಾಗ ಮುಚ್ಚಿಡುತ್ತಿದ್ದೆವು. ಗಂಡು ಹುಡುಗರು ಚಿಣಿಪಣಿ ಆಟದ ಗಿಲ್ಲಿದಾಂಡ, ಚೆಂಡು, ಲಗೋರಿ ಆಡುವ ಚಪ್ಪಡಿ ಕಲ್ಲುಗಳು, ಸಾಲಿಗೆ ಬರುವಾಗ ಮಂದಿ ತೋಟದಾಗಿಂದ ಕದ್ದುತಂದ ಮಾವಿನಕಾಯಿ, ಹುಣಸೇಕಾಯಿ, ಪೇರಲಹಣ್ಣು, ಪರಂಗಿ ಚಿಕ್ರಿಕಾಯಿ, ತುಂಬಿಕೊಂಡು ಬಂದು ತಮಗೆ ಬೇಕಾದ ಗೆಳೆತಿಯರಿಗೆ ಕದ್ದು ಮುಚ್ಚಿಕೊಡುತ್ತಿದ್ದರು. ಈ ಎಲ್ಲಾ ವಸ್ತುಗಳನ್ನು ಪಾಟೀ ಚೀಲ ತನ್ನ ಹೊಟ್ಟೆಯೊಳಗೆ ತುಂಬಿಕೊಂಡಿರುತ್ತಿತ್ತು. ಆಗ ನಮ್ಮ ಸಾಲಿಗೆ ಬರುವ ಸಿರಿವಂತ ಮಕ್ಕಳು ಸಣ್ಣ ಪೆಟ್ಟಿಗೆ ತರಹದ ಡಬ್ಬಿ ತರುತ್ತಿದ್ದರು. ಅವು ಅಲ್ಯೂಮಿನಿಯಮ್ ಅಥವಾ ಸ್ಟೀಲ ಪೆಟ್ಟಿಗೆಯಾಗಿದ್ದು ಕೈಯಲ್ಲಿ ಹಿಡಿದುಕೊಂಡು ಒಂದು ತರಹದ ಠೀವಿಯಿಂದ ಸಾಲಿಗೆ ಬರುತ್ತಿದ್ದರು. ಅವರು ಯಾರೊಂದಿಗೂ ಬೆರೆಯದೇ ಕೇವಲ ಪುಸ್ತಕದ ಹುಳುವಾಗಿರುತ್ತಿದ್ದರು. ಯಾವ ಆಟಪಾಠಗಳಲ್ಲೂ ಭಾಗವಹಿಸದೇ ಓದಿನಲ್ಲಿ ಸದಾ ಮುಂದಿರುತ್ತಿದ್ದರು. ಟಾಂಗಾತ ಕಟ್ಟಿದ ಕುದುರೆ ತರಹ ಸೀದಾ ಮನೆಯಿಂದ ಸಾಲಿಗೆ ಬರುವದು, ಸಾಲಿಯಿಂದ ಸೀದಾ ಮನೆಗೆ ಹೋಗುವದು ಮಾಡುತ್ತಿದ್ದರು. ಬಾಲ್ಯದ ಆ ಹುಡುಗಾಟ ಅವರಲ್ಲಿ ಇರಲಿಲ್ಲ. ಕೇವಲ ಶಿಸ್ತು ಒಂದೇ ಇರುತ್ತಿತ್ತು. ನಮ್ಮಂಥ ಪಾಟೀಚೀಲದೊಳಗಿನ ಪ್ರಪಂಚ ಅವರ ಪೆಟ್ಟಿಗೆಯಲ್ಲಿರುತ್ತಿರಲಿಲ್ಲ.

ಈಗಿನ ಹುಡುಗರು ಬಜಾರದಿಂದ ತರುವಂತಹ ಬೆನ್ನಿಗೆ ಹಾಕಿಕೊಳ್ಳುವ ಸ್ಕೂಲಬ್ಯಾಗಗಳು ಆಗ ಮಾರಾಟಕ್ಕೆ ಬರುತ್ತಿರಲಿಲ್ಲ, ಈಗ ಆ ಮೊದಲಿನ ಹೆಗಲಿಗೆ ಹಾಕಿಕೊಳ್ಳುವ ಪಾಟೀ ಚೀಲಗಳನ್ನು ಸಾಲಿಗೆ ಹೋಗುವ ಹುಡುಗರು ಹಾಕಿಕೊಂಡು ಹೋಗುವದನ್ನೇ ಕಾಣೋದಿಲ್ಲ. ಎಲ್ಲರೂ ಈಗ ಬೆನ್ನಿಗೆ ಹಾಕಿಕೊಂಡು ಹೋಗುವ ಚೀಲಗಳನ್ನೇ ತೆಗೆದುಕೊಂಡು ಹೋಗುತ್ತಾರೆ.

ನಾವು ಸಾಲಿ ಮುಗಿಸಿ ಮನೆಗೆ ಬಂದ ಕೂಡಲೇ ಪಾಟೀ ಚೀಲ ಒಂದು ಕಡೆ ಮಟ್ಟಸಾಗಿಟ್ಟು ಕೈಕಾಲು ಮುಖತೊಳಕೊಂಡು ಅವ್ವಕೊಟ್ಟ ಏನಾದರೂ ತಿನಿಸು ತಿಂದು ಮತ್ತೆ ಹೊರಗ ಆಡಲು ಹೋಗುತ್ತಿದ್ದೆವು. ಮಳೆ ಇರದಾಗ, ಚಳಿಗಾಲ ಬೇಸಿಗೆಗಾಲದಲ್ಲಿ ಬಯಲಲ್ಲಿ

## ಸಮಾನತೆ

ರಾಜಕಾರಣಿ, ಅಧಿಕಾರಿ
ಕೂಡಿ ನಡೆಸುವ
ಭ್ರಷ್ಟತೆಗೆ,
ಆಕ್ರೋಶಗೊಂಡ ಜನ
ಒಗ್ಗೂಡಿ
ತಿರುಗಿ ಬೀಳುವವರು
ಸಮಾನತೆಗೆ.

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೫೬೦ ೦೭೫

ಮುಟ್ಟಾಟ, ಕಣ್ಣಾಮುಚ್ಚಿ ಕಾಡೆಗೂಡೆ ಆಟ, ಲಗೋರಿ, ಗಿಲ್ಲಿದಾಂಡ, ಕಳ್ಳ ಪೊಲೀಸ್ ಆಟ, ಕಬ್ಬಡಿ, ಚಂಡಾಟ, ಮರಗೋತಿ ಆಟ – ಹೀಗೆ ಬೇರೆ ಬೇರೆ ಬಯಲಿನಲ್ಲಿ ಆಡುವ ಆಟಗಳನ್ನು ಆಡುತ್ತಿದ್ದೆವು. ಇನ್ನು ಮಳೆಗಾಲದಲ್ಲಿ ಮನೆಯ ಮುಂದೆ ಇದ್ದ ಕಟ್ಟೆ ಮೇಲೆ ಎಲ್ಲರೂ ಸೇರಿ ಹುಣಸೀ ಬೀಜದ ಆಟ, ಆಣಿಕಲ್ಲಾಟ, ಬಳೆಚೂರಾಟ, ಒಳಗ ಹೊರಗ (ಕೆರೆ–ದಡ) ಆಟ, ಚೆನ್ನಮಣಿ ಆಟ, ಚಕ್ಕಾಟ, ಕವಡಿ ಆಟ, ಹುಲಿ–ಕುರಿ ಆಟ, ಗಜ್ಜಗದಾಟ – ಹೀಗೆ ಬೇರೆ ಬೇರೆ ಆಟಗಳನ್ನೂ ಆಡುತ್ತಿದ್ದೆವು. ಕೆಲವು ಗಂಡುಹುಡುಗರು ಗರಡಿ ಮನೆಗಳಿಗೆ ಹೋಗಿ ಅಲ್ಲಿ ಕುಸ್ತಿ, ಮಲ್ಲಗಂಬ, ಆಳಿನೇರಿಕೆ (ಮಿರ‍್ಯಾಮಿಡ್) ಗುಂಡು ಎತ್ತುವದು ಹೀಗೆ ಮುಂತಾದ ದೇಹ ದಂಡಿಸುವ ಕೆಲಸ ಮಾಡುತ್ತಾ ತಮ್ಮ ದೇಹ ಗಟ್ಟಿಗೊಳಿಸಿಕೊಳ್ಳುತ್ತಿದ್ದರು. ಕತ್ತಲಾಗುವವರೆಗೂ ಬಯಲಲ್ಲಿದ್ದು ಆಟ–ಆಡಿ ಮನೆಗೆ ಬರುತ್ತಿದ್ದೆವು. ಮನೆಗೆ ಬಂದ ಮೇಲೆ ಕೈಕಾಲು ಮುಖ ತೊಳೆದುಕೊಂಡು ಶುಚಿಯಾಗಿ ದೇವರಿಗೆ ಕೈಮುಗಿದು ಓದಲು ಕೂಡುತ್ತಿದ್ದೆವು.

ಈಗಿನ ಮಕ್ಕಳಿಗೆ ಈ ಎಲ್ಲಾ ಹಳೆಯ ಆಟಗಳು ಗೊತ್ತಿಲ್ಲ. ಟಿ.ವ್ಹಿ. ಮುಂದೆ ಕುಳಿತುಕೊಂಡು ಕಾರ್ಯಕ್ರಮ ನೋಡುವದು, ಮೊಬೈಲ್‌ದಲ್ಲಿ ಗೇಮ್ ಆಡೋದು, ಕಾರ್ಟೂನ್ ನೋಡೋದು ಮಾಡುತ್ತಾರೆ. ಅವರು ಬಯಲಿಗೆ ಹೋಗೋದೇಯಿಲ್ಲ ಹಾಗೂ ಮನೆಯಲ್ಲಿ ತಯಾರಿಸಿದ ಆರೋಗ್ಯಕಾರಕವಾದ ತಿಂಡಿ ತಿನಿಸುಗಳು ರುಚಿಯಾಗುವದಿಲ್ಲ. ಬಜಾರದಲ್ಲಿ ಮಾರುವ ಬಣ್ಣ ಬಣ್ಣದ ಕವರಿನೊಳಗಿನ ಚಿಪ್ಸ್, ಕುರುಕುರೆ, ಚಾಕಲೇಟ್, ಪಿಜಾ, ಬರ್ಗರ್, ಪಾವಭಾಜೀ, ಪಾನಿಪೂರಿ, ಮುಂತಾದ ತಿಂಡಿಗಳೇ ಬೇಕಾಗುತ್ತವೆ.

ಈಗಿನ ಮಕ್ಕಳಲ್ಲಿ ಬಾಲ್ಯದ ಆಟದಿಂದಾಗುವ ದೇಹದ ಬೆಳವಣಿಗೆ, ಗಟ್ಟಿತನವಿಲ್ಲದೆ ಕುಳಿತಲ್ಲೇ ಕುಳಿತು ವಯಸ್ಸಿಗಿಂತಲೂ ಹೆಚ್ಚಿನ ಬೊಜ್ಜುಬಂದು ಅನೇಕ ರೋಗ ರುಜಿನಗಳಿಗೆ ಬಲಿಯಾಗುತ್ತಿದ್ದಾರೆ. ಈಗಿನ ಶಾಲೆಗಳಿಗೆ ಆಟದ ಬಯಲುಗಳಿರದೆ ಕೇವಲ ಮಕ್ಕಳನ್ನು ಪುಸ್ತಕದ ಹುಳುಗಳನ್ನಾಗಿ ತಯಾರು ಮಾಡುತ್ತಿವೆ. ಹೆಣಭಾರದ ಪುಸ್ತಕಗಳ ಬ್ಯಾಗ ಹೊತ್ತು ಮಕ್ಕಳು ದಣಿಯುತ್ತಿವೆ. ನಮ್ಮ ಕಾಲದಲ್ಲಿ ನಾವು ಬಾಲ್ಯದಲ್ಲಿ ಅನುಭವಿಸಿದ ಮೋಜು ಮಸ್ತಿ ಬಾಲ್ಯದ ಆ ಹುಡುಗಾಟ ಈಗಿನ ಮಕ್ಕಳಿಗಿಲ್ಲವೆಂದು ಮನಕೊರಗುತ್ತದೆ.

ಈಗಿನ ತಂದೆತಾಯಿಗಳು ಮಕ್ಕಳಿಗಾಗಿ ಸಾವಿರಾರು ರೂಪಾಯಿಗಳನ್ನು ಕೊಟ್ಟು ಬಜಾರದಿಂದ ಬ್ಲಾಕ್‌ಗಳು, ಮೋಜಿನ ಕಾರ್ಡ್‌ಗಳನ್ನು ಇತರ ಆಟದ ಸಾಮಾನುಗಳನ್ನು ತಂದುಕೊಡುತ್ತಾರೆ. ಅವುಗಳಿಂದ ಬುದ್ಧಿಮಟ್ಟ ಬೆಳೆಯಬಹುದು, ಆದರೆ ಆರೋಗ್ಯ ವೃದ್ಧಿಯಾಗದೇ ಅನಾರೋಗ್ಯಕ್ಕೆ ಕಾರಣವಾಗುತ್ತದೆ. ಮನವಿಕಾಸವಾಗದೆ ಸಂಕೋಚದಿಂದ ನಾನು, ನನ್ನದು ಎಂಬ ಭಾವ ಮಕ್ಕಳಲ್ಲಿ ಬೆಳೆಯುತ್ತಿದೆ. ಸ್ವಾರ್ಥಿಗಳಾಗುತ್ತಿದ್ದಾರೆ. ನಾವು ಎನ್ನುವ ವಿಶಾಲಭಾವ ಅಳಿಯುತ್ತಿದೆ.

ಆ ಹಳೆಯ ಆಟಗಳ ಮಜವೇ ಬೇರೆ ಯಾವ ಖರ್ಚುಗಳಿಲ್ಲದೆ ಓಣಿಯ ಎಲ್ಲಾ ಮಕ್ಕಳು ಸೇರಿ ಆಡುವದರಿಂದ ದೇಹದ ಬೆಳವಣಿಗೆ ಜೊತೆಗೆ ಮನೋರಂಜನೆ ಹಾಗೂ ಸಂಘ ಜೀವನದಿಂದ ನಾವು ಎಂಬ ಭಾವ ಬೆಳೆಯುತ್ತಿತ್ತು. ನಾವೆಲ್ಲರೂ ಒಂದು ಎನ್ನುವ ವಿಶಾಲ ಬುದ್ಧಿ ಮತ್ತು ನೆನಪಿನ ಶಕ್ತಿಯು ಬೆಳೆಯುತ್ತಿತ್ತು.

ಈಗಿನ ನಾಲ್ಕು ಗೋಡೆಗಳ ಮಧ್ಯೆ ಆಧುನಿಕ ತಂತ್ರಜ್ಞಾನಗಳ ಸಹಾಯದಿಂದ ಆಟ ಆಡುವದನ್ನು ಮಕ್ಕಳು ರೂಢಿಸಿಕೊಂಡಿದ್ದಾರೆ. ಪ್ರತಿಯೊಬ್ಬ ಹುಡುಗನು ಟಿ.ವ್ಹಿ., ಲ್ಯಾಪ್ ಟಾಪ್, ಮೊಬೈಲ್, ಐಪ್ಯಾಡ್‌ಗಳಲ್ಲಿಯೇ ತಮ್ಮ ಸಮಯವನ್ನು ಕಳೆಯುತ್ತಿದ್ದಾರೆ. ಇದರಿಂದ ದೇಹ ಚಟುವಟಿಕೆಗಳಿಲ್ಲದೆ ಕೇವಲ ಮೆದುಳು, ಕಣ್ಣು, ಕೆಲಸ ಮಾಡುವದರಿಂದ ಮಾರಕ ರೋಗಗಳಿಗೆ ಮಕ್ಕಳು ಬಹುಬೇಗ ತುತ್ತಾಗುತ್ತಿದ್ದಾರೆ. ಇವುಗಳ ಬಳಕೆಯಿಂದಾಗುವ ಅನಾಹುತವನ್ನು ಪಾಲಕರು ಅರಿತು ಸಾಧ್ಯವಾದಷ್ಟು ಮಕ್ಕಳಿಗೆ ಬಯಲಲ್ಲಿ ಆಡಲು ಬಿಡುವದು ಒಳ್ಳೆಯದು. ಜೊತೆಗೆ ಸ್ಕೂಲಗಳಲ್ಲಿ ಆಟದ ಬಯಲು ಇರುವಂತೆ, ಮಕ್ಕಳಾಡುವಂತೆ ಸರಕಾರ ಕಡ್ಡಾಯಗೊಳಿಸಬೇಕು ಅಂದರೆ ಮಕ್ಕಳು ಆರೋಗ್ಯವಂತರಾಗಲು ಸಾಧ್ಯ. ಜೊತೆಗೆ ಈಗ ಮಕ್ಕಳು ಹೊರುವ ಭಾರವಾದ ಸ್ಕೂಲ ಬ್ಯಾಗಗಳ ಭಾರ ಕಡಿಮೆ ಮಾಡಿ ಮಕ್ಕಳಿಗೆ ಮೌಖಿಕವಾಗಿ ಅಭ್ಯಾಸ ಬಹಳ ಮಾಡಿಸಬೇಕು.

ಇವೆಲ್ಲಾ ನಾವು ಹಳೆ ತಲೆಮಾರಿನವರು ಯೋಚಿಸುತ್ತೇವೆ. ಆದರೆ ಈಗಿನ ಯುವಪೀಳಿಗೆ ಮತ್ತು ಪಾಲಕರು ಇದು ಸ್ಪರ್ಧಾತ್ಮಕ ಜಗತ್ತು ಅದರೊಂದಿಗೆ ಹೋಗಬೇಕಾಗುತ್ತದೆಂದು ಹೇಳಿ ಮಕ್ಕಳ ಬಾಲ್ಯ ಕಸಿದುಕೊಳ್ಳುತ್ತಾ ನಮ್ಮ ವಿಚಾರಗಳನ್ನು ಒಪ್ಪುವದಿಲ್ಲ. ಹಣ್ಣೆಲೆ ಉದುರುವಂತೆ ನಮ್ಮ ಹಳೆ ವಿಚಾರಗಳು ನೆಲಕಚ್ಚುತ್ತಿವೆ, ಎಂತಹ ವಿಪರ್ಯಾಸ ನೋಡಿ.

**ಪ್ರಭಾವತಿ ಎಸ್. ದೇಸಾಯಿ**
ವಿವೇಕನಗರ (ಪಶ್ಚಿಮ), ಬಸವನ ಬಾಗೇವಾಡಿ ರೋಡ್
ವಿಜಯಪುರ – ೫೮೬ ೧೦೯

ಮಹಿಳೆಯರೂ ಪುರುಷನಿಂದ ದೂಷಿಸಲ್ಪಟ್ಟು ಶೋಷಿಸಲ್ಪಟ್ಟರೂ ಆತನನ್ನು ಕಾಣುವ ರೀತಿಯೂ ಅನನ್ಯವಾದುದು. ಇದನ್ನು ಪುರುಷನು ಮಹಿಳೆಯೂ ತನ್ನಡಿಯಾಳೆಂದು ತನ್ನ ಸರ್ವಸೇವಕಿಯೆಂದೂ ಭಾವಿಸಿ ಕೆಳಗೆ ತಳ್ಳುತ್ತಲೇ ಬಂದಿರುವನು. ಮಹಿಳೆಯೂ ಸಾತ್ವಿಕತೆ ಮತ್ತು ಸಾಂಸಾರಿಕತೆಯ ಜೋಡೆತ್ತಾಗಿ ದುಡಿಯುತ್ತಲೇ ಇರುವಳು. ಮಹಿಳೆಯರನ್ನು ಮಹಿಳೆಯರ ವಿರುದ್ಧ ಎತ್ತಿಕಟ್ಟುವ ಪುರುಷ ಪ್ರಧಾನ ಕುತಂತ್ರವನ್ನು ಮತ್ತು ಮಹಿಳೆಯರ ಹೊಟ್ಟೆಕಿಚ್ಚುಪಡುವ ಮತ್ತು ಅಸೂಯಾಪರವಾದ ನೇತ್ಯಾತ್ಮಕ ಗುಣಗಳನ್ನು ಮಹಿಳೆಯರಿಗೆ ಆರೋಪಿಸುವ ಕ್ರಮಗಳನ್ನು ಲೋಹಿಯಾ ಅವರು ತಿರಸ್ಕರಿಸಿದರು. ಪಾತಿವ್ರತ್ಯ ಮತ್ತು ನಿಷ್ಠೆಗಳೆಂಬ ಅತ್ಯುನ್ನತ ಗುಣಗಳನ್ನಾಧರಿಸಿ ಮಹಿಳಾ ಶೋಷಣೆ ನಡೆಯಕೂಡದೆಂದು ಸಾರಿದರು.



# ಮಹಿಳಾ ಸಮಾಜವಾದ – ಒಂದು ವಿಶ್ಲೇಷಣೆ

ಸಮಾಜವು ಗಂಡು ಹೆಣ್ಣುಗಳ ಸಮಾನ ಸಂಸ್ಥೆಯಾಗಿದೆ. ಈ ಸಂಸ್ಥೆಯಲ್ಲಿ ಯಾರೂ ಮೇಲಲ್ಲ ಯಾರು ಕೀಳೂ ಅಲ್ಲ. ಆಧುನಿಕ ಯುಗದ ತುತ್ತತುದಿಯಂಚಿನಲ್ಲಿರುವ ನಾವುಗಳು ಮಹಿಳೆಯರ ಪರವಾದ ಉದಾತ್ತ ಚಿಂತನೆಗಳನ್ನು ಬೆಳೆಸಿಕೊಳ್ಳುವಲ್ಲಿ ಹಿಂದೇಟು ಹಾಕುತ್ತಿದ್ದೇವೆ. ಸಮಾಜವು ಹೆಣ್ಣನ್ನು ಸಾಂಸಾರಿಕ ಸಂಕೋಲೆಗಳಿಂದ ಇನ್ನೂ ಮುಕ್ತಗೊಳಿಸಿಲ್ಲ, ಮನೆಗೆಲಸ, ಮಕ್ಕಳನ್ನು ಹೆರುವುದು ಮತ್ತು ಹೊರುವುದು, ಮನೆಯ ಇನ್ನಿತರ ಜವಾಬ್ದಾರಿಗಳಿಂದ (ಮದುವೆ, ಕುಟುಂಬ, ತಾಯ್ತನ) ಆಕೆಯನ್ನು ಬಂಧಿಸಲಾಗಿದೆ. ಸಾಮರ್ಥ್ಯವನ್ನು ಹೊಂದಿದಾಗ್ಯೂ ಲಿಂಗಭೇದ ಕಾರಣವಾಗಿ ಉದ್ಯೋಗ ಇನ್ನಿತರ ಕ್ಷೇತ್ರಗಳಲ್ಲಿ ಕಂಡೂ ಕಾಣದಂತಿರಿಸಿದ್ದೇವೆ. ಆಕೆಯು ಶಿಕ್ಷಣದಿಂದ ವಂಚಿತಳಾಗುತ್ತಿರುವುದು ಮುಕ್ತವಾಗಿ ಮುಂದುವರಿಯುತ್ತಲೇ ಇದೆ. ಸಾಮಾಜಿಕವಾಗಿ ರಾಜಕೀಯವಾಗಿ ಚೇತರಿಕೆಗಳನ್ನು ನೀಡದೆ ಆರ್ಥಿಕವಾಗಿ ದುರ್ಬಲಗೊಳಿಸುವ ಹಾಗೂ ಯಾಂತ್ರಿಕತೆಯ ಜೀವನ ಸಾಗಿಸುವ ವಸ್ತುವನ್ನಾಗಿಸಿದ್ದೇವೆ. ಮಹಿಳೆಯರು ಶಿಕ್ಷಣ, ಉದ್ಯೋಗ, ಪೌಷ್ಟಿಕತೆಯಂತಹ ಅಗತ್ಯ ಸೌಲಭ್ಯಗಳಿಗಾಗಿ ಪರದಾಡುವಂತಹ ಸ್ಥಿತಿ ಇನ್ನೂ ಇದೆ. ಈ ಎಲ್ಲ ಕಾರಣಗಳಿಗಾಗಿ ಮಹಿಳಾ ಪರ ಸಿದ್ಧಾಂತವೊಂದು ಮಹಿಳೆಯರ ನೆಲೆಗಾಗಿ ಹೋರಾಟದ ಸ್ವರೂಪವನ್ನು, ಬಲ ತುಂಬುವ ಹಾಗೂ ಅದಕ್ಕೆ ಪ್ರೇರೇಪಿಸುವಂತಹ ಕೆಲಸವನ್ನು ಸದ್ದಿಲ್ಲದೆ ಮಾಡುತ್ತಿದೆ. ಅದು ಸಮಾಜವಾದ ಸಿದ್ಧಾಂತವಾಗಿದ್ದು, ಮಹಿಳೆಯರ ಪರವಾದ ಸಮಾನ ಬದುಕಿಗೆ ಪ್ರೇರೇಪಿಸುವಂತಹ ಅಂಶಗಳನ್ನು ತನ್ನೊಡಲಲ್ಲಿರಿಸಿ ಕೊಂಡಿದೆ, ಸ್ತ್ರೀಪರ ಹೋರಾಟಗಳು, ಮಹಿಳಾ ಸಂಘಟನೆಗಳು ಸ್ತ್ರೀವಾದಕ್ಕಿಂತಲೂ ಭಿನ್ನವಾಗಿ ಮಹಿಳೆಯರಿಗೆ ಭುಜ ಕೊಡುವ ಕಾರ್ಯವನ್ನು ಸಮಾಜವಾದವು ಮಾಡುತ್ತಿದೆ.

ಈ ಮೊದಲಿಗೆ ರಷ್ಯಾದಲ್ಲಿ ಮಹಾಕ್ರಾಂತಿಯ ನಂತರ ಮಹಿಳೆ ಬಗೆಗಿನ ಧೋರಣೆಗಳು ಸಮಾಜವಾದದ ವ್ಯವಸ್ಥೆಯಲ್ಲಿ ಬದಲಾದವು. ಮಹಿಳೆಯರಲ್ಲಿನ ವೈಚಾರಿಕ ಮತ್ತು ವೈಜ್ಞಾನಿಕ ಬೆಳವಣಿಗೆ ಅವರನ್ನು ಶ್ರೇಷ್ಠ ವ್ಯಕ್ತಿತ್ವವನ್ನು ಹೊಂದುವಂತೆ ಮಾಡಿ ಅದಕ್ಕೆ ಬದ್ಧವಾಗಿ ಬದುಕುವಂತೆ ಪ್ರೇರೇಪಿಸಿ ಅಡಿಪಾಯ ಹಾಕಿಕೊಟ್ಟಿತು. ಮಹಿಳೆಯರನ್ನು ಕೌಟುಂಬಿಕ ಬಂಧನದಿಂದ ಬಿಡುಗಡೆಗೊಳಿಸಿ ತಾಯ್ತನದ ಅವಧಿಯಲ್ಲಿ ವೇತನ ಸಹಿತ ರಜೆ ಘೋಷಿಸುವುದು ತಾಯಂದಿರಿಗೆ ಪ್ರೋತ್ಸಾಹದಾಯಕವಾಯಿತು. ಮಹಿಳೆಯರನ್ನು ಅಲ್ಲಿ ಸಂಪ್ರದಾಯ, ಕಂದಾಚಾರ, ಮೌಢ್ಯ, ಪೂರ್ವಗ್ರಹ ಪೀಡನೆ ಇವುಗಳಿಂದ ಮುಕ್ತಗೊಳಿಸಲಾಯಿತು. ಮಹಿಳೆಯರಿಗೂ ದುಡಿಯಲು ಯಾವ ನಿರ್ಬಂಧಗಳೂ ಇಲ್ಲದಂತೆ ಪ್ರೇರೇಪಿಸಲಾಯಿತು. ಯಾವುದೇ ಬಗೆಯ ಆಂತರಿಕ ಮತ್ತು ಬಾಹ್ಯ ಶತ್ರುಗಳಾಗಲಿ ಹಾಗೂ ಎಂತಹುದೇ ಪರಿಸ್ಥಿತಿಯನ್ನಾಗಲಿ ಎದುರಿಸಲು ಸಿದ್ಧರಿರಬೇಕು ಎಂದು ಕಾಮ್ರೇಡ್ ಲೆನಿನ್ ಅಭಿಪ್ರಾಯಪಟ್ಟಿದ್ದರು.

ಮಹಿಳಾ ವಿಮೋಚನೆ ಸಮಾನತೆ, ಸ್ವಾತಂತ್ರ್ಯಕ್ಕೆ ಗಮನ ನೀಡಿದಂತೆಯೆ ಸಮಾಜವಾದಿ ಹೋರಾಟಗಳ ಯಶಸ್ಸಿಗೆ ಹಾಗೂ ಸಮಾಜವಾದಿ ದೇಶದ ಉಗಮಕ್ಕೆ ಮಹಿಳೆಯೂ ಕೂಡ

**ಬಿ. ಟಿ. ಮಂಜುನಾಥ**

ಪುರುಷನೊಂದಿಗೆ ಸಮನಾಗಿ ನಿಂತು ಆಡಳಿತ ಮತ್ತು ರಾಜಕೀಯದ ಒಳಹೊರಗಿನ ವ್ಯವಸ್ಥೆಯನ್ನು ನಿರ್ವಹಿಸಲು ಕಂಕಣ ಕಟ್ಟಿ ನಿಲ್ಲಬೇಕೆಂದು, ಅದಕ್ಕಾಗಿ ರಾಜಕೀಯ ಪ್ರವೇಶ ಮಹಿಳೆಯರಿಗೆ ಅನಿವಾರ್ಯ ಎಂದು ಲೆನಿನ್ ಹೇಳಿದ್ದರು. ಮಹಿಳೆಯರಿಗೆ ಶಿಕ್ಷಣ ನೀಡಿ ಅವರಿಗೂ ಸರಿಸಮಾನ ಸಾಮಾಜಿಕ, ಆರ್ಥಿಕ, ರಾಜಕೀಯ ಅವಕಾಶಗಳನ್ನು ಕಲ್ಪಿಸಿಕೊಡುವುದು ಕರ್ತವ್ಯವೆಂಬಂತೆ ರಷ್ಯಾ ಭಾವಿಸಿದ್ದಿತು. ಇದು ವಿಶ್ವದ ಗಮನ ಸೆಳೆಯಿತು. ಭಾರತದಲ್ಲಿಯೂ ಸಮಾಜವಾದ ಬೆಳೆಯುತ್ತಲೇ ಮಹಿಳಾ ಪರವಾದ ಚಿಂತನೆಗಳಿಗೆ ರೆಕ್ಕೆ ಮೂಡಲಾರಂಭಿಸಿತು.

ಲಿಂಗ ಸಂಬಂಧಿ ತಾರತಮ್ಯ, ಬಣ್ಣದ ಕಾರಣವಾಗಿ ಕೀಳರಿಮೆ, ಸಂಸ್ಕೃತಿಯ ಒತ್ತಡ ಮತ್ತು ನೆಪ, ಶಿಕ್ಷಣದಲ್ಲಿನ ವಂಚನೆ, ಶಿಕ್ಷಣವನ್ನು ಪಡೆದಾಗ್ಯೂ ಮಹಿಳೆ ಎಂಬ ಕಾರಣಕ್ಕಾಗಿ ಉದ್ಯೋಗದ ಅಲಭ್ಯತೆ, ರಾಜಕೀಯ ಪ್ರಾತಿನಿಧ್ಯ ದೊರಕದಿರುವುದು (ಸಾಂವಿಧಾನಿಕವಾಗಿ ಮಹಿಳಾ ಮೀಸಲಾತಿಯೂ ಕೇವಲವಷ್ಟೆ ಎಂಬುದು ಇಲ್ಲಿ ಉಲ್ಲೇಖಾರ್ಹ), ಆರ್ಥಿಕವಾದ ಅಸ್ಥಿರತೆ, ಮಹಿಳೆ ಎನ್ನುವ ಕಾರಣಕ್ಕಾಗಿ ಪುರುಷರಿಗೆ ನೀಡುವ ಆದ್ಯತೆಗಳಲ್ಲಿ ಶೂನ್ಯ ಸ್ಥಾನ, ಒತ್ತಡದ ಆಚಾರ–ವಿಚಾರಗಳ ಅನುಪಾಲಕಿಯ ಪಾತ್ರ, ಮಗುವನ್ನು ಹೆರುವ, ಪಾಲನೆ–ಪೋಷಣೆಗೆ ಸೀಮಿತಳಾದವಳು ಎಂಬ ಹಣೆಪಟ್ಟಿ, ಲೈಂಗಿಕ ವಸ್ತು ಮುಂತಾಗಿ ನಾಜೂಕಾದ ಶೋಷಣೆಗಳು ಸ್ತ್ರೀಯರನ್ನು ದಾಸ್ಯಕ್ಕೆ ತಳ್ಳಿವೆ. ಆಕೆಯು ಬದುಕುವ, ಸ್ವತಂತ್ರವಾಗಿ ಜೀವಿಸುವ ಚಲಿಸುವ ನ್ಯಾಯಬದ್ಧ ಉದ್ಯೋಗ ಪಡೆಯುವ ಪ್ರಕ್ರಿಯೆಗಳಿಂದ ದೂರವಿರಿಸಲ್ಪಟ್ಟಿದ್ದಾಳೆ. ಭಾರತೀಯ

ಸಮಾಜವಾದಿ ಚಿಂತಕರಾದ ಲೋಹಿಯಾರವರು "ಮಾನವ ಜನಾಂಗದಲ್ಲಿ ಅತ್ಯಂತ ಹೆಚ್ಚಿನ ಶೋಷಣೆಗೆ ಒಳಗಾಗಿರುವ ಗುಂಪೆಂದರೆ ಮಹಿಳೆಯರಾಗಿದ್ದು, ಪ್ರೇಮಕ್ಕೆ ಅಥವಾ ಒಡವೆಗೆ ಮರುಳಾಗಿ ಮತ್ತು ತನ್ನ ಹೃದಯ ವೈಶಾಲ್ಯದಿಂದಾಗಿ ಅವಳು ತನ್ನ ದುಸ್ಥಿತಿಯನ್ನು ಮರೆಯಬಹುದು. ಆದರೆ ಸಮಾಜದಲ್ಲಿ ವ್ಯಾಪಕವಾಗಿರುವ ಕೆಲವು ಅಸಹ್ಯಕರ ಆಚರಣೆಗಳನ್ನು ನಡೆಸುತ್ತಿರುವ ಮತ್ತು ಅನಿಷ್ಟಕಾರಿ ನಂಬಿಕೆಗಳಿಂದ ಕೂಡಿರುವ ಮನಸ್ಸು ಸೇರಿ ಮಹಿಳೆಯರಿಗೆ ಒಂದು ವರ್ಗವಾಗಿ ಸಮಾಜವಾದವನ್ನು ಅನಿವಾರ್ಯ ಅಗತ್ಯವನ್ನಾಗಿ ಮಾಡಿವೆ. ಸಮಾನತೆಗಾಗಿ ಹೋರಾಟ ನಡೆಸುತ್ತಿರುವ ಸಮಾಜವಾದ ಮತ್ತು ಪ್ರಜಾಪ್ರಭುತ್ವ ಪ್ರಣಾಳಿಕೆಗಳು ಮಹಿಳೆಯರಿಗಾಗಿಯೇ ಹೇಳಿ ಮಾಡಿಸಿದ ರೀತಿಯಲ್ಲಿವೆ" ಎಂದಿದ್ದಾರೆ. ಮಹಿಳೆಯರೆಲ್ಲರೂ ಸಮಾಜವಾದದ ಪ್ರೇರಣೆಯಿಂದಾಗಿ ಬದಲಾವಣೆಗಾಗಿ ಪ್ರಯತ್ನಿಸಬೇಕಿದೆ.

ಮಹಿಳೆಯರೂ ಪುರುಷನಿಂದ ದೂಷಿಸಲ್ಪಟ್ಟು ಶೋಷಿಸಲ್ಪಟ್ಟರೂ ಆತನನ್ನು ಕಾಣುವ ರೀತಿಯೂ ಅನನ್ಯವಾದುದು. ಇದನ್ನು ಪುರುಷನು ಮಹಿಳೆಯೂ ತನ್ನಡಿಯಾಳೆಂದು ತನ್ನ ಸರ್ವಸೇವಕಿಯೆಂದೂ ಭಾವಿಸಿ ಕೆಳಗೆ ತಳ್ಳುತ್ತಲೇ ಬಂದಿರುವನು. ಮಹಿಳೆಯೂ ಸಾತ್ವಿಕತೆ ಮತ್ತು ಸಾಂಸಾರಿಕತೆಯ ಜೋಡೆತ್ತಾಗಿ ದುಡಿಯುತ್ತಲೇ ಇರುವಳು. ಮಹಿಳೆಯರನ್ನು ಮಹಿಳೆಯರ ವಿರುದ್ಧ ಎತ್ತಿಕಟ್ಟುವ ಪುರುಷ ಪ್ರಧಾನ ಕುತಂತ್ರವನ್ನು ಮತ್ತು ಮಹಿಳೆಯರ ಹೊಟ್ಟೆಕಿಚ್ಚುಪಡುವ ಮತ್ತು ಅಸೂಯಾಪರವಾದ ನೇತ್ಯಾತ್ಮಕ ಗುಣಗಳನ್ನು ಮಹಿಳೆಯರಿಗೆ ಆರೋಪಿಸುವ ಕ್ರಮಗಳನ್ನು ಲೋಹಿಯಾ ಅವರು ತಿರಸ್ಕರಿಸಿದರು. ಪಾತಿವ್ರತ್ಯ ಮತ್ತು ನಿಷ್ಠೆಗಳೆಂಬ ಅತ್ಯುನ್ನತ ಗುಣಗಳನ್ನಾಧರಿಸಿ ಮಹಿಳಾ ಶೋಷಣೆ ನಡೆಯಕೂಡದೆಂದು ಸಾರಿದರು. ಭಾರತೀಯ ಮಹಿಳೆಯರ ಮೇಲೆ ಸಮಾಜದ ಪ್ರಬಲ ಗುಂಪುಗಳಲ್ಲಿ ನಡೆಯುತ್ತಿದ್ದ ಸೂಕ್ಷ್ಮ ತಾರತಮ್ಯಗಳ ನೆಲೆಗಳನ್ನು ಹುಡುಕುವುದು ಅವರಿಗೆ ಸಾಧ್ಯವಾಯಿತು. ಅವರು, "ಹೆಣ್ಣು ಸುಂದರವಾಗಿರಬೇಕು, ಬುದ್ಧಿವಂತಳಾಗಿರಬೇಕು, ಚುರುಕಾಗಿರಬೇಕು, ತೀಕ್ಷ್ಣಮತಿಯಾಗಿರಬೇಕು, ತನ್ನವಳಾಗಿರಬೇಕು, ತನ್ನ ಅಧೀನದಲ್ಲೇ ಇರಬೇಕು ಎಂದೇ ಗಂಡಸು ಸಾಮಾನ್ಯವಾಗಿ ಬಯಸುತ್ತಾನೆ. ಈ ಭಾವನೆಗಳು ಪರಸ್ಪರ ವಿರೋಧವಾದವುಗಳೆ, ಯಾರನ್ನು ನೀವು ನಿಮ್ಮವಳನ್ನಾಗಿ ಮಾಡಿಕೊಳ್ಳಬಲ್ಲಿರಿ? ಯಾರನ್ನು ನಿಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳಬಲ್ಲಿರಿ? ಮೇಜನ್ನು, ಒಂದು ಕೋಣೆಯನ್ನು ಕೊಂಚ ಮಟ್ಟಿಗೆ ನಾಯಿಯನ್ನು ನಿಮ್ಮ ವಶದಲ್ಲಿಟ್ಟುಕೊಳ್ಳಬಹುದು. ಬೆಕ್ಕನ್ನು ಇಟ್ಟುಕೊಳ್ಳುವುದು ಕಷ್ಟ. ಅಂದರೆ ನಿರ್ಜೀವವಾದುದನ್ನು ಅಥವಾ ಸಜೀವವಾಗಿದ್ದು ಪೂರ್ಣ ರೀತಿ ಜೀವಂತಿಕೆ ಇಲ್ಲದಿರುವಂಥದನ್ನು ನಿಮ್ಮ ವಶದಲ್ಲಿಟ್ಟುಕೊಳ್ಳಲು ಸಾಧ್ಯ. ಆದರೆ ಜೀವಂತ ಚೈತನ್ಯ ಉಳ್ಳದ್ದನ್ನು, ಹೃದಯವಂತರನ್ನು, ತೀಕ್ಷ್ಣಮತಿಗಳಾದವರನ್ನು, ಅಧೀನದಲ್ಲಿಟ್ಟುಕೊಳ್ಳಲಾಗುವುದಿಲ್ಲ. ಹೆಂಗಸರನ್ನು ಪರಾವಲಂಬಿಗಳನ್ನಾಗಿಸಿ ಅವರನ್ನು ಶ್ರೇಷ್ಠವ್ಯಕ್ತಿಯನ್ನಾಗಿಸುತ್ತೇವೆಂಬ ಆಲೋಚನೆಯನ್ನು ಬಿಟ್ಟು ನೀವು ಅವರನ್ನು ಸ್ವತಂತ್ರವಾಗಿ ಬಿಟ್ಟುಬಿಡಿ ಆಗ ಅವರು ತಂತಾನೆ ಶ್ರೇಷ್ಠರಾಗುತ್ತಾರೆ" ಎನ್ನುತ್ತಾರೆ. ವರ್ಗಸಂಬಂಧಿ ತಾರತಮ್ಯ ಮತ್ತು ಲಿಂಗಸಂಬಂಧಿ ತಾರತಮ್ಯಗಳನ್ನು ಸಮಾಜವಾದಿ ಮಹಿಳಾವಾದದ ಸೈದ್ಧಾಂತಿಕ ಚೌಕಟ್ಟಿನಲ್ಲಿ ಚರ್ಚಿಸುವುದರ ಜೊತೆಗೆ ಅವರು ಅದನ್ನು ಸದ್ಯದ ಮತ್ತು ಮುಂದಿನ ದಿನಮಾನಗಳಲ್ಲಿ ಅಗತ್ಯವಾದ ಕ್ರಿಯೆಗೆ ಸಂಬಂಧಿಸಿದ ಪರ್ಯಾಯ ಚಿಂತನೆಯ ನೆಲೆಯಲ್ಲಿಯೂ ಕೂಡ ಚರ್ಚಿಸಿದರು.



ಜಾತಿ ಮತ್ತು ಲಿಂಗಸಂಬಂಧಿ ವಿಚಾರಗಳು ಸಮಾನತೆ ಮತ್ತು ಸಮಾಜವಾದಿ ಕ್ರಾಂತಿಗಳ ಮೂಸೆಯೊಳಗಿಂದ ಮೊಳಕೆಯೊಡೆದ ಸಂಗತಿಗಳಾಗಿದ್ದು, ಸಮಾಜದಲ್ಲಿ ನೆಲೆಗೊಂಡಿರುವ ಇವೆರಡೂ ಸಂಗತಿಗಳನ್ನು ನಿರ್ಮೂಲನ ಮಾಡುವವರೆಗೆ ಸಮಾಜವಾದಿ ಕ್ರಾಂತಿಯೂ ಯಶಸ್ವಿಯಾಗುವುದಕ್ಕೆ ಅವಕಾಶವೇ ಇರುವುದಿಲ್ಲವೆಂದು ಲೋಹಿಯಾ ಅವರು ನಂಬಿದ್ದರು. ಮಹಿಳಾ ಪ್ರತ್ಯೇಕೀಕರಣದ ಹೆಸರಿನಲ್ಲಿ ಸಮಾಜದ ಜೀವಚೈತನ್ಯವೂ ನಿತ್ರಾಣಗೊಂಡಿದೆ. ಅದು ಸಂತೋಷವನ್ನು ಕೊಂದುಹಾಕಿಬಿಡುವುದು ಎಂದು ಎಚ್ಚರಿಸುತ್ತಲೇ ಗಂಡು ಹೆಣ್ಣಿನ ಸಮಾನತೆಯ ಸೂಕ್ಷ್ಮವನ್ನು ತೀಕ್ಷ್ಣವಾಗಿಯೇ ಸೂಚಿಸಿ ಪುರುಷ ಎನ್ನುವ ಕಾರಣಕ್ಕಾಗಿ ಪುರುಷನಿಗೂ, ಮಹಿಳೆ ಎನ್ನುವ ಕಾರಣಕ್ಕಾಗಿ ಮಹಿಳೆಗೂ ಸೀಮಿತ ವಲಯವನ್ನು ನಿಗದಿಪಡಿಸದೆ ಇಬ್ಬರಿಗೂ ಸಮಾನ ಅವಕಾಶಗಳು ಲಭ್ಯವಾಗಬೇಕು, ಆ ಮುಖೇನ ಲಿಂಗತಾರತಮ್ಯ ಕೊನೆಗಾಣಬೇಕೆಂದು ಸಮಾಜವಾದವು ಪ್ರತಿಪಾದಿಸಿತು.

ಸಮಾನತೆಯೆಂಬುದು ಒಂದು ಮನೋದೃಷ್ಟಿಯಾಗಿದ್ದು ಅದನ್ನು ಯಾವಾಗಲೂ ಶಾಸನ ಅಥವಾ ತರ್ಕದ ಮೂಲಕ ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಜಾತಿ ಮತ್ತು ಲಿಂಗಗಳ ಆಧಾರದ ಮೇಲೆ ಜನರನ್ನು ದೂರವಿಡುವ ಮತ್ತು ಅವರ ಬಗ್ಗೆ ಪಕ್ಷಪಾತವೆಸಗುವ ಕ್ರಮಗಳು ಶಾಸನಗಳನ್ನು ಉಲ್ಲಂಘಿಸಿಯಾದರೂ ಮತ್ತು ಅನೈತಿಕವಾಗಿಯಾದರೂ ನಮ್ಮವರೇ ಆದ ಜನರನ್ನು ಶೋಷಿಸಿ ಹೆಚ್ಚು ಅನುಕೂಲ ಪಡೆದುಕೊಳ್ಳಬೇಕೆಂಬ ಬಲಾಢ್ಯರ ಕುತಂತ್ರಗಳನ್ನು ತೋರಿಸುತ್ತವೆ. ಇದನ್ನು ಸಮಾಜವಾದವು ಒಪ್ಪುವುದಿಲ್ಲ. ಶೋಷಿಸುವ ಶಾಸನಗಳನ್ನು ತಿರಸ್ಕರಿಸುತ್ತಲೇ ಸಮಾನವಾಗಿ ಬದುಕುವ ಕಲೆಯನ್ನು ಸಮಾಜವಾದವು ಪ್ರತಿಪಾದಿಸುತ್ತದೆ, ಮಹಿಳೆಯರು ಸಮಸ್ಯೆಯನ್ನು ತಾತ್ಪೂರ್ತಿಕ ವಿಕೃತಿಯೆಂದು ಭಾವಿಸದೆ ಅದನ್ನು ಬೇರು ಸಹಿತ ಕಿತ್ತೊಗೆಯಲು ಪ್ರಯತ್ನಿಸಬೇಕು ಎಂಬ ಲೋಹಿಯಾರ ನುಡಿಯು ಮಹಿಳಾ ಸಮಾಜವಾದಕ್ಕೆ ದೃಢವಾದ ನೆಲೆಯನ್ನೊದಗಿಸಿತು.

ಮಾನವ ಜನಾಂಗದಲ್ಲಿ ಅತ್ಯಂತ ತೀವ್ರವಾದ ಶೋಷಣೆಗೆ ಒಳಗಾಗಿರುವ ಮಹಿಳೆಯರಿಗೆ ಸಮಾಜವಾದವು ಸಾಂತ್ವನ ಹೇಳುತ್ತಲೇ, ಎಚ್ಚರಿಸಿ ಜಾಗೃತಗೊಳಿಸುವ ಕೆಲಸವನ್ನು ನಿರ್ವಹಿಸತೊಡಗಿತು. ಬರಹಗಳಲ್ಲಿ, ಭಾಷಣಗಳಲ್ಲಿ, ರಾಜಕೀಯದಲ್ಲಿ, ಉಪನ್ಯಾಸಗಳಲ್ಲಿ, ಪತ್ರಿಕೆಗಳಲ್ಲಿ, ಸಮಾಜವಾದವು ಮಹಿಳಾ ಪರವಾದ ನಿಲುವುಗಳನ್ನು ತಾಳುವಂತೆ ಪ್ರಚೋದಿಸಿತು. ಲೋಹಿಯಾರವರು ಹೇಳುವಂತೆ, ಮಹಿಳೆಯರ ಸಹಭಾಗಿತ್ವವಿಲ್ಲದೆ ಯಾವುದೇ ಪರಿವರ್ತನೆ ಅಸಾಧ್ಯ ಎಂಬ ಘೋಷಣೆಯು ಘನೀಭೂತಗೊಂಡು ಮಹಿಳಾ ಪರವಾದ ಕ್ರಾಂತಿಗೆ ನಾಂದಿ ಹಾಡಿತು.

ಸಮಾಜವಾದಿ ಲೋಹಿಯಾ ಅವರು ಮಹಿಳೆಯೂ ಶೂದ್ರ ಎನ್ನುವ ಗುಂಪಿನಲ್ಲಿ ಸೇರುತ್ತಾಳೆ ಎಂದಿದ್ದು, ಮಹಿಳೆಯರು, ಶೂದ್ರರು ವ್ಯವಸ್ಥಿತವಾಗಿ ಅನ್ಯಾಯವನ್ನು ಅನುಭವಿಸಿಕೊಂಡು ಬರುತ್ತಿದ್ದಾರೆ. ಮಹಿಳೆಯರು ಪ್ರಗತಿ ಕಾಣಬೇಕಿದೆ. ಮಹಿಳಾ ಮೀಸಲಾತಿ ಕುರಿತಂತೆಯೂ ಸಮಾಜವಾದವು ಪ್ರತಿಪಾದಿಸಿತು. ಪುರುಷನಷ್ಟೇ ಸಮನಾದ ಬದುಕು ಮಹಿಳೆಯದಾಗಿದ್ದು ಉದ್ಯೋಗ ರಾಜಕೀಯ ಆರ್ಥಿಕ ಸಬಲತೆಗಳು ದೊರಕಬೇಕೆಂದು ಪ್ರತಿಪಾದಿಸಿತು. ಚಳುವಳಿಗಳ ಮೂಲಕ ಮಹಿಳೆಯರ ವಿಮೋಚನೆಗೆ ಸಂಬಂಧಿಸಿದಂತೆ ದೊಡ್ಡ ಬದಲಾವಣೆ ಮಾಡಲು ಪ್ರಯತ್ನಿಸಲಾಯಿತು. ಹತ್ತೊಂಭತ್ತನೆ ಶತಮಾನದಲ್ಲಿ ಮೇರಿ ಕಾರ್ಪೆಂಟರ್,

ಅಗೆಟ್ಟಿ, ಬೆವರಿಡ್ಜ್, ಆ್ಯನಿಬೆಸೆಂಟ್, ಕಮಲಾದೇವಿ, ಪೊನ್ನಮ್ಮಾಳ್ ಮುಂತಾದ ಮಹಿಳಾ ಸುಧಾರಕರ ಪ್ರಯತ್ನವು ಸೇರಿ ಮಹಿಳೆಯರ ಶೋಷಣೆ ವಿರುದ್ಧದ ಹೋರಾಟಕ್ಕೆ ನವಚೈತನ್ಯ ಪ್ರಾಪ್ತವಾಯಿತು. ವಚನ ಸಾಹಿತ್ಯವೂ ಕಾರಣವಾಗಿ ಕರ್ನಾಟಕದಲ್ಲಿ ಹೊಸ ರೂಪವನ್ನು ಮಹಿಳಾ ಸಮಾಜವಾದವು ಪಡೆದುಕೊಂಡಿತು. ಇಪ್ಪತ್ತನೆಯ ಶತಮಾನದಲ್ಲಿ ಮಹಿಳಾ ನಿಯತಕಾಲಿಕೆಗಳು, ಮಹಿಳೆಯ ಶೈಕ್ಷಣಿಕ ಸಂಸ್ಥೆಗಳು, ಮಹಿಳಾ ಸಂಘಟನೆಗಳು ಮತ್ತು ಮಹಿಳಾ ಪರವಾದ ಇನ್ನಿತರ ಮೂಲಗಳು ನಡೆಸಿದ ಪ್ರಯತ್ನಗಳಿಂದಾಗಿ ಮಹಿಳೆಯರು ತಮ್ಮ ಧ್ವನಿಯನ್ನು ಕಂಡುಕೊಳ್ಳುವುದು ಸಾಧ್ಯವಾಯಿತು.

ಮಹಿಳೆಯರು ನಕಾರಾತ್ಮಕ ಹೆಣಭಾರದಂತಿರುವ ಸಂಸ್ಕೃತಿಯ ವಿರುದ್ಧ ಒತ್ತಡಾತ್ಮಕ ಕೌಟುಂಬಿಕತೆಯ ವಿರುದ್ಧ, ದೂರವಿಟ್ಟ ರಾಜಕಾರಣದ ವಿರುದ್ಧ, ಹಿಂಸಿಸುವ ಮೂಢನಂಬಿಕೆ ಮತ್ತು ಆಚಾರ ವಿಚಾರಗಳ ವಿರುದ್ಧ, ಲೈಂಗಿಕ ವಸ್ತುವೆಂಬ ಭ್ರಮಾಧೀನರ ವಿರುದ್ಧ, ನಿರುದ್ಯೋಗ, ಅಪೌಷ್ಟಿಕತೆ, ಸಾರ್ವಜನಿಕತೆ, ಭಾವನಾತ್ಮಕತೆ, ಪದಾರ್ಥವಾದಿತ್ವಗಳ ವಿರುದ್ಧ ಇನ್ನು ಸೆಣಸುತ್ತಲೆ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಬೇಕಿದೆ ಎಂದು ಸಮಾಜವಾದವು ಸೂಚಿಸಿತು. ಆ ಮೂಲಕ ಇವೆಲ್ಲವುಗಳನ್ನು ದೂರೀಕರಿಸಿ ಸಮಾನ ಬದುಕಿಗಾಗಿ ಹಂಬಲಿಸುವ ಆಸೆಯನ್ನು ಸಮಾಜವಾದವು ಹುಟ್ಟುಹಾಕಿತು.

ಒಟ್ಟಾರೆಯಾಗಿ, ಸಮಾಜವಾದವು ಮಹಿಳೆಯರನ್ನು ಜಾಗೃತಗೊಳಿಸುತ್ತಲೇ ತಮ್ಮ ಅಸ್ತಿತ್ವದ ಕುರಿತು ಮಹಿಳೆಯರಲ್ಲಿಯೆ ಪ್ರಶ್ನೆ ಮೂಡುವಂತೆ ಮಾಡುವ ಮೂಲಕ ಹೊಸ ಕಾರ್ಯವೊಂದಕ್ಕೆ ಅಣಿಗೊಳಿಸಿತು. ಸಂಪೂರ್ಣವಾಗಿ ತಮ್ಮ ಅಸ್ತಿತ್ವದ ಕುರಿತು ಬೆಳವಣಿಗೆಯ ಕುರಿತು ಮಹಿಳೆಯರು ಪ್ರಶ್ನಿಸಿಕೊಳ್ಳುತ್ತಲೇ ಮಹಿಳಾ ಸಮಾಜವಾದವನ್ನು ಗಟ್ಟಿಗೊಳಿಸಿಕೊಳ್ಳಬೇಕಿದೆ.

**ಬಿ. ಟಿ. ಮಂಜುನಾಥ**
ಸಂಶೋಧನಾರ್ಥಿ, ಕನ್ನಡ ಭಾರತಿ
ಸಹಾಯಕ ಪ್ರಾಧ್ಯಾಪಕರು
ಕುವೆಂಪು ವಿಶ್ವವಿದ್ಯಾಲಯ, ಜ್ಞಾನಸಹ್ಯಾದ್ರಿ, ಕುವೆಂಪು
ವಿಶ್ವವಿದ್ಯಾನಿಲಯ ಶಂಕರಘಟ್ಟ, ಶಿವಮೊಗ್ಗ – ೫೭೭ ೪೫೧

# ಅಮರ ಟಿಪ್ಪು ಸುಲ್ತಾನ



ಭಂಡ ಬ್ರಿಟಿಷರ ಬೆಂಡ ಎತ್ತಿದನು
ಹೆಬ್ಬುಲಿ ಟಿಪ್ಪು ಸುಲ್ತಾನ
ಕನ್ನಡ ನಾಡೊಳು ಪ್ರಜ್ವಲಿಸಿದನೆಂದರೆ
ಕನ್ನಡ ಜನಕೊಂದ ಅಭಿಮಾನ

ಕನ್ನಡ ಸಿಡಿಲಿದು ಗರ್ಜಿಸಿ ನಿಂತರೆ
ಗಡಗಡ ನಡುಗಿತು ಇಂಗ್ಲೆಂಡ
ರೋಷಾವೇಷದಿ ಹತಾರ ಹಿರಿದರೆ
ಕಂಪನಿ ಹೋಯಿತು ಕಿತಗೊಂಡ

ದೇಶಕೆ ದೇಶವೇ ಗುಲಾಮಗಿರಿಯ
ಕೆಸರಲಿ ಬಿದ್ದು ತೊಯ್ದಿತ್ತು
ರಾಜರ ಗಡಣವು ಬಿಳಿಯರ ಮುಂದೆ
ಬಕೇಟು ಹಿಡಿದು ನಿಂತಿತ್ತು

ಎದ್ದನು ವೀರ ಕನ್ನಡ ಕುವರ
ಮೆರೆದನು ಶೂರ ನೆಲದಭಿಮಾನ
ಫಿರಂಗಿಗಳೆದೆಯಲಿ ಭತ್ತ ಕುಟ್ಟಿದ
ಗಂಡುಗಲಿ ಟಿಪ್ಪು ಸುಲ್ತಾನ

ಜಗವನು ಗೆದ್ದವರೆಂಬುವ ಬಿಳಿಯರ ಗರ್ವಕೆ
ಸವಾಲು ಹಾಕಿದ ಸುಲ್ತಾನ
ಸಾಯುವವರೆಗೆ ಗುಲಾಮನೆನಿಸದೆ
ಸಾಧಿಸಿ ಮೆರೆದನು ಶೂರತನ

ಬಿಳಿಯರ ಮಾರಿಗೌತಣ ನೀಡಲು
ಪ್ರಳಯದ ದಂಡನು ಕಟ್ಟಿದನು
ರಾಕೇಟು ಬಿಟ್ಟನು ಫಿರಂಗಿ ತೊಟ್ಟನು
ಬ್ರಿಟಿಷರ ಬೆನ್ನೆಲು ಪುಡಿಗಟ್ಟಿದನು

ಮುದ್ದಿನ ಮಕ್ಕಳು ಒತ್ತೆಯಾಳಾದರೂ ಸರಿ
ತಲೆಬಾಗುವುದವನಿಗೆ ಅಪಮಾನ
ಅರಿಭಯಂಕರ ಟಿಪ್ಪು ಎಂದರೆ
ಕನ್ನಡ ನಾಡಿಗೆ ಅಭಿಮಾನ

* * *

ನಾಡಲಿ ಬೆಳಕಿನ ಸುಗ್ಗಿಯ ಮಾಡಲು
ಪುಸ್ತಕ ಸಾವಿರ ಓದಿದನು
ಕನ್ನಡ ನಾಡಿನ ಸಂಪದಿಕರಣಕೆ
ಹಗಲಿರುಳೆನ್ನದೆ ಚಡಪಡಿಸಿದನು

ಉತ್ತಮ ಕುಲದ ಶತಶತಮಾನದ
ಸೊಕ್ಕನು ಮುರಿದನು ಸುಲ್ತಾನ
ಸರಾಯಿ ನಿಷೇಧಿಸಿ, ಜೀತ ನಿಷೇಧಿಸಿ
ಬದುಕಿಸಿಕೊಂಡನು ದಲಿತರನ

ಹಣ್ಣನು ತಿನ್ನಲಿ ಚಿಣ್ಣರು ಎಂದು
ಹಣ್ಣಿನ ಮರಗಳ ಬೆಳೆಸಿದನು
ಚೀನಿ ನಾಡಿನ ರೇಶಿಮೆ ಬೆಳೆಸಿ
ಬೆಳಗಿದ ರೈತರ ಬಾಳನ್ನು

ಹೊಸ ಮಾದರಿಯಲಿ ನಾಡನು ಕಟ್ಟಲು
ಚಿಂತಿಸುತ್ತಿದ್ದನು ಹಗಲಿರುಳು
ಬಡವರ ದುಃಖವ ನೋಡದೆ ನೋಡಿ
ಮಮ್ಮಲ ಮರುಗಿದ ಹೆಂಗರುಳು

ಫ್ರಾನ್ಸಿನ ಕ್ರಾಂತಿಯ ಬಲ್ಲವನಾಗಿ
ತನ್ನನು ತಿಳಿದನು ಸಿಟಿಜನ್ನು
ಅಮೀರ ಕುಲವನು ಅಟ್ಟಾಡಿಸಿ ಬಡಿದು
ಬಡ ಜನತೆಗೆ ನೀಡಿದ ತುತ್ತನ್ನು

ಅಮೆರಿಕನ್ನರ ಸ್ವಾತಂತ್ರ್ಯಸಮರಕೆ
ಕಳಿಸಿದನವನು ಸಾವಿರ ಹೊನ್ನು
ಅರಮನೆ ಮುಂದೆ ಸಸಿಯನು ನೆಟ್ಟನು
ಬಿಡುಗಡೆ ಬಯಕೆ ಬಿತ್ತರಿಸಿದನು

ಅಮರ ಟಿಪ್ಪು ಸುಲ್ತಾನನ ನೆನಪು
ಮುಪ್ಪಿಗೆ ಯೌವ್ವನ ಮರುಕಳಿಸುವುದು
ಜ್ವಾಲಾಮುಖಿ–ಬಡಬಾನಲ ಸಿಡಿದೊಲು
ಮೈಯ್ಯಲಿ ರಕ್ತ ಕುದಿಯುವುದು

ಕನ್ನಡ ತಾಯಿಯ ಹೆಮ್ಮೆಯ ಪುತ್ರನೆ
ಮೈಸೂರು ಹುಲಿಯೆ ನಮನಗಳು
ಭಾರತ ಮಾತೆಯ ಮುಕುಟದ ಮಣಿಯೆ
ನಿನಗೆ ಶತಶತ ಪ್ರಣಾಮಗಳು.

**ಹಜರತಅಲಿ ಇ. ದೇಗಿನಾಳ**
ಕೆಂಗಲಗುತ್ತಿ, ಅಂಚೆ ಗುಣದಾಳ
ತಾ. ಜಿ. ವಿಜಯಪುರ






**ಸಂಗಾತಿ ರೂಪ್ವ ಬರಸೇನಾ**
(ಹೆಣ್ಣು ಕಣ್ಣೋಟದ ವಿಮರ್ಶಾ ಲೇಖನಗಳು)

ಆರ್. ಸುನಂದಮ್ಮ

**ಪುಟ: ೩೦೦ ಬೆಲೆ: ರೂ. ೧೮೦**

**ಕವಿ ಪ್ರಕಾಶನ,** ಕವಲಕ್ಕಿ

*ಡಾ॥ ಆರ್. ಸುನಂದಮ್ಮ ಅವರು ಸ್ತ್ರೀ ದೃಷ್ಟಿಕೋನದಿಂದ ರಚಿಸಿರುವ ವಿಮರ್ಶಾ ಲೇಖನಗಳ ಸಂಕಲನ ಇದು. ಇದರಲ್ಲಿ ೧೮ ಲೇಖನಗಳಿವೆ. "ಮಹಿಳೆಯರನ್ನು ಪಿತೃ ಪ್ರಧಾನತೆ ನಿರಂತರವಾಗಿ ವಿಭಜಿಸುತ್ತದೆ... ನಮ್ಮೊಳಗೆ ಸಂಗಾತಿಯ ಭಾವಕ್ಕಿಂತ ಅಧಿಕವಾಗಿ ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳು ಒಡ್ಡುವ ವಿಭಜನೆಯ ಭಾವವೇ ರೂಪುಗೊಂಡಿರುತ್ತದೆ" ಎನ್ನುವ ತಿಳುವಳಿಕೆಯಿಂದ ಹೊರಡುವ ಇಲ್ಲಿನ ಲೇಖನಗಳು ಇದಕ್ಕೆ ವಿರುದ್ಧವಾಗಿ ಮಹಿಳೆಯರ ನಡುವೆ ಸೋದರಿತ್ವವನ್ನು ರೂಪಿಸಿ, ಆ ಮೂಲಕ ಸಂಗಾತಿ ಭಾವವನ್ನು ಉಂಟುಮಾಡುವುದೇ ಪರಿಹಾರವೆಂದು ತಿಳಿದಿದೆ. 'ಸಂಗಾತಿ ನಿನ್ನ ರೂಪ್ವ ಬರೆಸೇನು' ಎನ್ನುವ ಈ ಸಂಕಲನದ ಶೀರ್ಷಿಕೆಯು ಸೂಚಿಸುವಂತೆ ಜನಪದ ಕಾವ್ಯದ ಉತ್ತರಾದೇವಿಯ ಚರಿತ್ರೆ ಕಟ್ಟುವ ಕಾಯಕದಂತೆಯೇ ಮಹಿಳೆಯ ಬದುಕಿನ ಬಹುಮುಖಿ ನೆಲೆಗಳ ಚರಿತ್ರೆಯನ್ನು ಕಟ್ಟುವ ಕಾಯಕದಲ್ಲಿ ತೊಡಗಿದೆ. ಈ ಕೃತಿಯಲ್ಲಿ ಎರಡು ಭಾಗಗಳಿದ್ದು ಮೊದಲನೆಯ ಭಾಗದಲ್ಲಿ ಆಧುನಿಕೀಕರಣವು ಮಹಿಳೆಯರ ನಂಬಿಕೆ – ಆಚರಣೆ, ಆಹಾರ, ವಿಚಾರಗಳೆಲ್ಲವುದರ ಮೇಲೆ ಪ್ರಭಾವ ಬೀರಿರುವುದನ್ನು ಸ್ತ್ರೀವಾದಿ ನೆಲೆಯಿಂದ ನೋಡುವ ಪ್ರಯತ್ನವಾಗಿದೆ. ಕುಟುಂಬ ಮತ್ತು ದುಡಿಯುವ ಸ್ಥಳಗಳಲ್ಲಿ ಮಹಿಳೆಯರ ಮೇಲಾಗುವ ಹಿಂಸೆ, ಚಲನಚಿತ್ರ ಮಾಧ್ಯಮ ಮತ್ತು ಅಭಿವೃದ್ಧಿಯ ಚಿಂತನೆಗಳು ಹೆಣ್ಣನ್ನು ಪರಿಭಾವಿಸುವ ರೀತಿ – ಇವುಗಳ ಗಂಭೀರ ಚಿಂತನೆ ನಡೆಸಿವೆ. ಎರಡನೆಯ ವಿಭಾಗದಲ್ಲಿ ಜನಪದ ಕಾವ್ಯ, ನಡುಗನ್ನಡ ಮತ್ತು ಕುವೆಂಪು ಸಾಹಿತ್ಯವನ್ನು ಸ್ತ್ರೀವಾದಿ ದೃಷ್ಟಿಕೋನದಿಂದ ವಿಮರ್ಶಿಸಿದ ಲೇಖನಗಳಾಗಿವೆ.*

---

**ಜೀವ ಪ್ರೀತಿಯ ಹಾಡು** (ಕವಿತೆಗಳು) — *ರಂಗಮ್ಮ ಹೊದೇಕಲ್*

**ಪುಟ : ೮೮** — **ಬೆಲೆ : ರೂ. ೭೫**

**ಗೋಮಿನಿ ಪ್ರಕಾಶನ,** ಶ್ರೀ ವೀರಭದ್ರಸ್ವಾಮಿ ನಿಲಯ, ೧ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ ವಿಶ್ವಣ್ಣ ಲೇಔಟ್, ಶಾಂತಿನಗರ, ತುಮಕೂರು – ೫೭೨ ೧೦೨

*ಜೀವಪರವಾಗಿರುವ ಧ್ವನಿಗಳೆಂದು ಇಲ್ಲಿನ ಕವಿತೆಗಳನ್ನು ಹೆಸರಿಸಬಹುದು. ಎಲ್ಲವೂ ಒಳಿತಾಗಲೆಂದು ಆಶಿಸುವ ಮೊದಲ ಕವಿತೆಯೇ 'ಒಂದಿಷ್ಟು ಪ್ರಾರ್ಥನೆಗಳು' ಎಂಬ ಶಿರೋನಾಮೆಯಲ್ಲಿ ಪ್ರಾರಂಭವಾಗಿದೆ. ದುಃಖಗಳೇಕೆ ಕಾರ್ಮುಗಿಲಂತೆ ದಟ್ಟವಿಸಿ ನಮ್ಮನ್ನು ಹಿಂಡಿ ಹಿಪ್ಪೆ ಮಾಡುತ್ತಿವೆ ಎಂಬ ಪ್ರಶ್ನೆಯೇ ಎಲ್ಲ ಕವಿತೆಗಳನ್ನೂ ಹಾದು ದಾರದಂತೆ ಬಿಗಿದು ಬಿಟ್ಟಿದೆ. ಜಗತ್ತಿನಲ್ಲಿ ಎಲ್ಲ ಕಡೆಯೂ ಶುಭವನ್ನೇ ಹಾರೈಸುತ್ತಿರುವಾಗ ಅದಾವ ಶಕ್ತಿ ನಮ್ಮನ್ನು ಪೀಡಿಸುತ್ತಿದೆ? ಈ ಭೂಮಿಯ ಮೇಲೆ ಎಲ್ಲರೂ ಅಲ್ಲದಿದ್ದರೂ ಬಹುಪಾಲು ಜನರು ದುಃಖಿತರು. ಅವರ ಆಶೋತ್ತರಗಳನ್ನು ಹಿಂಬಾಲಿಸಿ ಬರೆಯಲ್ಪಟ್ಟ ಇಲ್ಲಿನ ಕವಿತೆಗಳಲ್ಲಿ ಬಡವ–ಶ್ರೀಮಂತರ ಅಂತರಗಳನ್ನು ಢಾಳಾಗಿ ಕಾಣಿಸುವ ಪ್ರಯತ್ನವಿದೆ. 'ಶೈನಾ' (ಶೈಲಾ ನಾಗರಾಜ್ ತಾಯಿಯ ಹೆಸರಿರಬಹುದು) ಎಂಬ ಪತ್ರಿಕೆಯನ್ನು ಲೇಖಕಿ ತನ್ನ ಮುದ್ದಾದ ಹಸ್ತಾಕ್ಷರದಿಂದಲೇ ಪ್ರಕಟಿಸುತ್ತಿರುವುದು ಒಂದು ಹೆಗ್ಗಳಿಕೆ. ಹಟ ತೊಟ್ಟರೆ ಮಹಿಳೆಗೆ ಯಾವುದೂ ಅಸಾಧ್ಯವಲ್ಲ ಎಂಬುದು ಸುವ್ಯಕ್ತ. ಪರರ ಕಷ್ಟವೇನೆಂದು ಅರಿಯದ ಮನಸ್ಸಿಗೆ, ನೋವನ್ನು ಕಾಣಲಾಗದ ಹೃದಯಕ್ಕೆ ಇಲ್ಲೊಂದು ಕವಿತೆಯ ಸಾಲು ಹೀಗಿದೆ: "ಹ್ಞಾಂ... ಅದೇ ನಕ್ಷತ್ರ ನಾನು, ಧಗಧಗಿಸುತ್ತಿದ್ದೇನೆ! ಲೋಕ ಚುಕ್ಕಿ ಮಿನುಗುತ್ತಿದೆ ಅನ್ನುತ್ತಿದೆ!"*

---



**ನಾಟಕ ಸಾಹಿತ್ಯದಲ್ಲಿ ಏಕಲವ್ಯ** (ವಿಮರ್ಶಾ ಸಂಚಯ) *ಡಾ॥ ಅಶೋಕ ನರೋಡೆ*

**ಪುಟ : VIII+೧೭೬=೧೮೪** — **ಬೆಲೆ : ರೂ. ೧೫೦**

**ನಿವೇದಿತ ಪ್ರಕಾಶನ,** *ನಂ. ೩೪೩೭, (೧ನೇ ಮಹಡಿ), ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ ೨ನೇ ಹಂತ, ಬೆಂಗಳೂರು–೨೮*

*ಕನ್ನಡ ಸಾಹಿತ್ಯದಲ್ಲಿ ಮಹಾಭಾರತದ ಏಕಲವ್ಯನ ಪಾತ್ರ ಬಲು ವಿಶಿಷ್ಟವಾದದ್ದು. ಏಕಲವ್ಯನ ಪಾತ್ರವೆಂದರೆ ದ್ರೋಣ – ಅರ್ಜುನರು ಅಕ್ಕಪಕ್ಕದಲ್ಲಿರಲೇಬೇಕು. ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಅತ್ತ ಹಾವೂ ಸಾಯದೆ ಇತ್ತ ಕೋಲೂ ಮುರಿಯದಂತೆ ಚಿತ್ರಿತವಾದ ಪಾತ್ರಗಳು ಅವು. ಗುರುದಕ್ಷಿಣೆ – ಗುರುಭಕ್ತಿ ವಿಜೃಂಭಿಸಲು ಕಟೆದು ನಿಲ್ಲಿಸಿದ ಪಾತ್ರ ಏಕಲವ್ಯ – ಅಖಂಡ ಗುರುಭಕ್ತಿ ಇರಬೇಕು; ದ್ರೋಣರಂಥ ಗೌರವಯುತ ಗುರುವಿನ ಪಾತ್ರಕ್ಕೂ ಕಳಂಕ ಬಾರದಂತೆ ನಿಭಾಯಿಸಬೇಕು. ಕುವೆಂಪು – ಗೋವಿಂದ ಪೈ ಮುಂತಾದವರು ಮೂಲವಸ್ತುವನ್ನು ತಮ್ಮ ಚಿಂತನಾಕ್ರಮಕ್ಕೆ, ಹೊಸದಾದ ಆಶಯಕ್ಕೆ ಬದಲಿಸಿಕೊಂಡಿದ್ದಾರೆ. ಸಿದ್ದಲಿಂಗಯ್ಯನವರು ಇನ್ನೂ ಮುಂದುವರಿದು ಏಕಲವ್ಯನನ್ನು ಬಂಡಾಯವೆದ್ದಿರುವ ಪಾತ್ರವಾಗಿ ಸೃಷ್ಟಿಸಿದ್ದಾರೆ. – ಹೀಗೆ ಅವರವರ ಸಂಕಲ್ಪ ಶಕ್ತಿಗೆ ತಕ್ಕುದಾಗಿ ಮೂಲ ಪಾತ್ರ ಏಕಲವ್ಯ ವಿವಿಧ ಲೇಖಕರಿಂದ ಬಣ್ಣಿಸಲ್ಪಟ್ಟಿದ್ದಾನೆ. ಗುರುಗಳು ಹೆಬ್ಬೆರಳನ್ನು ದಕ್ಷಿಣೆಯಾಗಿ ಕೇಳಿದರೆಂಬುದನ್ನು ಈತನೇ ಕತ್ತರಿಸಿಕೊಟ್ಟನೆಂಬ ಬದಲಾವಣೆಯೂ ಕೆಲ ಲೇಖಕರಿಂದ ಬಂದಿದೆ. "ವಾಮಾಂಗುಷ್ಠ ಧನುರ್ಧಾರಿ" ಯಾದನೆಂಬುದೂ ಒಂದು ಸೇರ್ಪಡೆ.*

– **ಇಂದಿರಾ ಕುಮಾರಿ,** *ಯಶವಂತಪುರ, ಬೆಂಗಳೂರು – ೫೬೦ ೦೨೨*

---

**ಧಾರವಾಡದ ಪಡ್ಡೆ ದಿನಗಳು** — *ರಾಜೇಂದ್ರ ಚೆನ್ನಿ*

**ಪುಟ : ೬೪** — **ಬೆಲೆ : ರೂ. ೫೦**

**ಅಭಿರುಚಿ ಪ್ರಕಾಶನ,** ಮೈಸೂರು



*'ಅಲ್ಲೇ ಸುತ್ತಾಡತಾವ ನಮ್ಮ ಖ್ಯಾಲಾ*
*ಎಲ್ಲಿ ಹೋದಾವೋ ಗೆಳೆಯಾ ಆ ಕಾಲಾ" ?*

*ಎಂಬ ಬೇಂದ್ರೆಯವರ ಮಾತುಗಳನ್ನುದ್ಧರಿಸುತ್ತಾ ರಾಜೇಂದ್ರ ಚೆನ್ನಿಯವರು ತಮ್ಮ ಪಡ್ಡೆ ದಿನಗಳ ನೆನಪನ್ನು ಕುರಿತು ಈ ಹೊತ್ತಿಗೆಯಲ್ಲಿ ಬರೆದಿದ್ದಾರೆ. ಇದೊಂದು ಆತ್ಮಕಥನ. ಯಾರದೇ ಬದುಕಿನ ಪ್ರಮುಖ ಘಟ್ಟವಾದ ಯೌವ್ವನಾವಸ್ಥೆಯ ಹಂತದ ಘಟನಾವಳಿಗಳ ಕಥನ. 'ಕೆಂಡ ಸಂಪಿಗೆ' ಇ–ಪತ್ರಿಕೆಗಾಗಿ ಬರೆದ ಬರಹವಿದು. ಕನ್ನಡ ಸಾಹಿತ್ಯದ ವಿಮರ್ಶಾ ಲೋಕದಲ್ಲಿ ಅತ್ಯಂತ ಗಂಭೀರ ಚಿಂತನೆಗಳಿಗೆ ಹೆಸರುವಾಸಿಯಾಗಿರುವ ಪ್ರೊಫೆಸರ್ ಚೆನ್ನಿಯವರು ಹೀಗೂ ಬದುಕಿದ್ದರಾ ಎಂದು ಆಶ್ಚರ್ಯಪಡುವಂತೆ ಅಚ್ಚರಿ ಹುಟ್ಟಿಸುವ ಬರಹವಿದು. ಕನ್ನಡ ಸಾರಸ್ವತ ಲೋಕದ ಪ್ರಸಿದ್ಧ ಮಹಾಮಹಿಮರು ಹುಟ್ಟಿ ಬೆಳೆದ, ಅಡ್ಡಾಡಿದ ಈ ನೆಲದಲ್ಲಿ ಅವರನ್ನೆಲ್ಲ ನೆನಪಿಸಿಕೊಳ್ಳುತ್ತಾ, ಅವರ ಬಗ್ಗೆ ಕೆಲವು ಸಂಗತಿಗಳನ್ನು ಪ್ರಸ್ತಾಪಿಸುವುದು ಸ್ವಾರಸ್ಯಕರವಾಗಿದೆ. ಗಿರೀಶ್ ಕಾರ್ನಾಡ್ ಹೇಮಮಾಲಿನಿಯನ್ನು ಮದುವೆಯಾದರೆ ದೀಪಾವಳಿ ಗಣೇಶ ಚವತಿಗಾದರೂ ಅವಳು ಧಾರವಾಡಕ್ಕೆ ಬರಬಹುದು. ಆಗ ಅವಳ ಮುಖದರ್ಶನ ಸಿಕ್ಕುತ್ತದೆಂದು ಸಂಭ್ರಮಿಸುವುದು, ಬೀಡಿ ಅಂಗಡಿಯಲ್ಲಿ ನಿಂತು ಬೀಡಿ ಹಚ್ಚಿಕೊಳ್ಳುವ ಮಲ್ಲಿಕಾರ್ಜುನ ಮನ್ಸೂರರನ್ನು ಕಂಡು ಬೆಕ್ಕಸ ಬೆರಗಾಗುವುದು, ಸುಂದರಿ ತಾಜ್ ಮಹಲ್‌ಳನ್ನು ಕಾಲೇಜಿನಲ್ಲಿ ಎಲ್ಲರೆದುರು ಕೈಹಿಡಿಯುವ ಬೆಟ್ ಕಟ್ಟುವುದು, ಸದಾರಮೆ ನಾಟಕದಲ್ಲಿ ನರಸಿಂಹರಾಜು ಅಭಿನಯ, ಹುಕ್ಕೇರಿ ಬಾಳಪ್ಪ ಅವರ ಹಾಡುಗಾರಿಕೆ – ಇಂತಹ ಮಹಾಪುರುಷರನ್ನು ಕುರಿತ ಸ್ವಾರಸ್ಯಕರ ಕಥೆಗಳು ಇಲ್ಲಿ ಸಿಗುತ್ತವೆ. ಕಾಲೇಜಿನ ಚುನಾವಣೆ, ಹೋಳಿಹಬ್ಬದ ವೈಭವ, ಮನಸೂರರ ಗಾಯನ ರಸಾಯನ, ಸದಾರಮೆ ನಾಟಕದ ನೆನಕೆ, ಪಡ್ಡೆ ಕಣ್ಣುಗಳಲ್ಲಿ ಬೇಂದ್ರೆ – ಇವೆಲ್ಲವೂ ಅಂದಿನ ಪಡ್ಡೆ ಹುಡುಗರ ರುಚಿ, ಅಭಿರುಚಿಯನ್ನು ಪರಿಚಯಿಸುತ್ತವೆ. ಧಾರವಾಡದ ಅನುಭವವನ್ನು ಕುರಿತು ಬರೆಯಿರೆಂದು ಸಂಪಾದಕರ ಕೋರಿಕೆಗೆ ಚೆನ್ನಿಯವರು ಧಾರವಾಡದಲ್ಲಿ ತಾವು ಕಳೆದ ಪಡ್ಡೆಹುಡುಗನಾಗಿದ್ದಾಗಿನ ಅನುಭವವನ್ನು ಕುರಿತು ಬರೆದಿದ್ದಾರೆ. ಇದು ಧಾರವಾಡ ಮಾತ್ರವಲ್ಲ, ಆ ಕಾಲದ ಯಾವುದೇ ನಗರದ ಪಡ್ಡೆಹುಡುಗರ ಜೀವನಾನುಭವವಾಗಬಲ್ಲ ಸಾರ್ವತ್ರಿಕತೆಯನ್ನು ಪಡೆದಿದೆ ಎನ್ನುವುದೇ ಈ ಬರಹದ ಮಹತ್ವವಾಗಿದೆ.*

– **ಆಶಾ ಎನ್.,** *ಬೆಂಗಳೂರು – ೫೬೦ ೦೧೯*

ಹೊಸತು-೨೦
ವಿಶೇಷ ಲೇಖನ

# ಬರಲಿರುವ ಕಾಲದಲ್ಲಿ ದೇಶದ ಆರೋಗ್ಯಭಾಗ್ಯ

ಸೀಮಿತ ಚಿಕಿತ್ಸೆ ನೀಡಿ, ಇನ್ನುಳಿದ ರೋಗಿಗಳನ್ನು ಖಾಸಗಿ ಆಸ್ಪತ್ರೆಗಳಿಗೆ ಕಳುಹಿಸುವ ದಲ್ಲಾಳಿ ಕಚೇರಿಗಳಾಗಿರುವ ಅಥವಾ ಬಾಗಿಲನ್ನೇ ತೆರೆಯದಿರುವ ಸರಕಾರಿ ಆಸ್ಪತ್ರೆಗಳು; ಬಗೆಬಗೆಯ ನಿಯಮಗಳ ಏಟನ್ನು ಸಹಿಸಲಾಗದೆ ಮುಚ್ಚಿಕೊಂಡ ಸಣ್ಣ ಹಾಗೂ ಮಧ್ಯಮ ಗಾತ್ರದ ಆಸ್ಪತ್ರೆಗಳು; ಎಲ್ಲರನ್ನೂ ಕುಣಿಸಿ, ಎಲ್ಲೆಡೆ ಆಕ್ರಮಿಸಿ, ಆರೋಗ್ಯ ಸೇವೆಗಳನ್ನೂ, ವೈದ್ಯಕೀಯ ಶಿಕ್ಷಣವನ್ನೂ ಸಂಪೂರ್ಣವಾಗಿ ವಶಪಡಿಸಿಕೊಂಡ ಕಾರ್ಪರೇಟ್ ಸಂಸ್ಥೆಗಳು; ರೋಗಿಗಳನ್ನು ಮಾತಾಡಿಸುವುದಕ್ಕೂ ತಿಳಿಯದೆ ಕಾರ್ಪರೇಟ್ ಸಂಸ್ಥೆಗಳ ಆಣತಿಯಂತೆ ಸಾವಿರಗಟ್ಟಲೆಯ ಪರೀಕ್ಷೆಗಳನ್ನು ನಡೆಸಿ ಇನ್ನೊಂದಷ್ಟು ಸಾವಿರದ ಔಷಧಗಳನ್ನು ನೀಡುವ ವೈದ್ಯರು; ತಮ್ಮ ಆರೋಗ್ಯದ ವಿವರಗಳನ್ನು ಕಾರ್ಪರೇಟ್ ಸಂಸ್ಥೆಗಳು ನಿಯಂತ್ರಿಸುವ ಆಧಾರ್ ಜೋಡಿತ ವ್ಯವಸ್ಥೆಗೆ ಒಪ್ಪಿಸಿ ಬೇರೇನೂ ಮಾಡಲಾಗದೆ ಒದ್ದಾಡುವ ರೋಗಿಗಳು; ಎಲ್ಲೆಡೆಗಳಿಂದ ಹಿಂಡಿ ಪಡೆದ ಆ ಅಗಾಧ ಮಾಹಿತಿಯನ್ನು ವಿಶ್ಲೇಷಿಸಿ, ಬಗೆಬಗೆಯ ತಂತ್ರಗಳನ್ನು ಹೆಣೆದು ಎಲ್ಲರನ್ನೂ ನಿಯಂತ್ರಿಸುವ ತಂತ್ರಜ್ಞಾನ ಕಂಪೆನಿಗಳು – ಭಾರತದ ಭವಿಷ್ಯದ ಆರೋಗ್ಯ ಸೇವೆಗಳ ಚಿತ್ರಣ ಇದು.

ಕಳೆದ ಮೂರು ದಶಕಗಳ ಹೊಸ ಆರ್ಥಿಕ ನೀತಿಯಡಿಯಲ್ಲಿ ಸಾರ್ವಜನಿಕ ಸೇವೆಗಳನ್ನು ಪುಡಿಗೈದು ಖಾಸಗಿ ಬಂಡವಳಿಗರನ್ನು ಕೊಬ್ಬಿಸುವ ಮಹಾ ಯೋಜನೆಯ ಭಾಗವಾಗಿ, ಆರೋಗ್ಯ ಸೇವೆಗಳು, ಔಷಧ ತಯಾರಿಕೆ ಮತ್ತು ವೈದ್ಯಕೀಯ ಶಿಕ್ಷಣ ಕ್ಷೇತ್ರಗಳಲ್ಲಿ ಸರಕಾರಿ ಹೂಡಿಕೆಯು ಇಳಿಯುತ್ತಾ, ಖಾಸಗಿ ಬಂಡವಾಳದ ಆಕ್ರಮಣವು ಹೆಚ್ಚುತ್ತಲೇ ಸಾಗಿದೆ.

ಸ್ವಾತಂತ್ರ್ಯಕ್ಕೆ ಸ್ವಲ್ಪವೇ ಮೊದಲು, ೧೯೪೩ರಲ್ಲಿ, ಬ್ರಿಟಿಷ್ ಸರಕಾರವು ರಚಿಸಿದ್ದ ಸರ್ ಜೋಸೆಫ್ ಭೋರ್ ಅವರ ಅಧ್ಯಕ್ಷತೆಯ ಆರೋಗ್ಯ ಸಮೀಕ್ಷೆ ಹಾಗೂ ಅಭಿವೃದ್ಧಿ ಸಮಿತಿಯು ದೇಶದ ಆರೋಗ್ಯ ಸೇವೆಗಳಿಗೆ ವೈಜ್ಞಾನಿಕವಾದ ರೂಪುರೇಷೆಗಳನ್ನು ಹಾಕಿಕೊಟ್ಟಿತು. ಗ್ರಾಮೀಣ ಹಾಗೂ ಬಡ ಜನತೆಗೆ ಉಚಿತವಾಗಿ ಆರೋಗ್ಯ ಸೇವೆಗಳನ್ನು ಒದಗಿಸುವುದಕ್ಕೆ ಒತ್ತು ನೀಡಿದ ಸಮಿತಿಯು, ಪ್ರತಿ ೧೦–೨೦ ಸಾವಿರ ಜನತೆಗೆ ಇಬ್ಬರು ವೈದ್ಯರು ಹಾಗೂ ೭೫ ಹಾಸಿಗೆಗಳಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ೩೦ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ೬೫೦ ಹಾಸಿಗೆಗಳ, ೧೪೦ ವೈದ್ಯರ ದ್ವಿತೀಯ ಸ್ತರದ ಆಸ್ಪತ್ರೆಗಳೂ ಹಾಗೂ ಪ್ರತಿ ಜಿಲ್ಲೆಗೊಂದು ೨೫೦೦ ಹಾಸಿಗೆಗಳ, ೨೬೯ ವೈದ್ಯರ ತೃತೀಯ ಸ್ತರದ ಆಸ್ಪತ್ರೆಗಳಿರಬೇಕೆಂದು ಸೂಚಿಸಿತು ಮತ್ತು ರಾಷ್ಟ್ರೀಯ ಉತ್ಪನ್ನದ ಶೇ. ೧೫ನ್ನು ಆರೋಗ್ಯ ಸೇವೆಗಳಿಗೆ ಒದಗಿಸಬೇಕೆಂದು ಶಿಫಾರಸ್ಸು ಮಾಡಿತು. ವಿಷಾದದ ಸಂಗತಿಯೆಂದರೆ, ಈ ೭೦ ವರ್ಷಗಳಲ್ಲಿ ದೇಶದ ಆರೋಗ್ಯ ಸೇವೆಗಳು ಸಾಕಷ್ಟು ಬೆಳೆದಿದ್ದರೂ ಕೂಡ, ಭೋರ್ ಸಮಿತಿಯ ಆಶಯಗಳನ್ನು ತಲುಪುವುದಕ್ಕೆ ಇನ್ನೂ ಸಾಧ್ಯವಾಗಿಲ್ಲ.

---

**ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬಿ.**



**ಆಂಬ್ಯುಲೆನ್ಸ್ ಸೇವೆ ಸಿಗದೆ ಶವವನ್ನು ಸಾಗಿಸುತ್ತಿರುವುದು**

ನೆಹರು ಸರಕಾರವು ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಆರೋಗ್ಯ ಸೇವೆಗಳಿಗೆ ರಾಷ್ಟ್ರೀಯ ಉತ್ಪನ್ನದ ಶೇ. ೩.೩ರಷ್ಟನ್ನು ಒದಗಿಸಿತ್ತು, ಆದರೆ ಮೂರನೇ ಪಂಚವಾರ್ಷಿಕ ಯೋಜನೆಯ ಆದ್ಯತೆಗಳು ಬದಲಾಗಿ, ಆರೋಗ್ಯ ಸೇವೆಗಳ ಅನುದಾನವು ಶೇ. ೨.೬ಕ್ಕಿಳಿಯಿತು. ನೆಹರು ನಂತರದ ವರ್ಷಗಳಲ್ಲಿ ಆರೋಗ್ಯ ಸೇವೆಗಳ ಪಾಲು ಇಳಿಯುತ್ತಲೇ ಹೋಗಿ, ಹನ್ನೊಂದನೇ ಯೋಜನೆಯ ವೇಳೆಗೆ ಕೇವಲ ಶೇ. ೦.೯ ಆಯಿತು. ನಡುವಲ್ಲಿ ೨೦೦೨ರ ರಾಷ್ಟ್ರೀಯ ಆರೋಗ್ಯ ನೀತಿಯನ್ನು ಅನುಸರಿಸಿ, ೨೦೦೫–೧೦ರ ನಡುವೆ ಆರೋಗ್ಯ ಸೇವೆಗಳಿಗಾಗಿ ಕೇಂದ್ರೀಯ ಅನುದಾನವು ೧೦ ಸಾವಿರ ಕೋಟಿಯಿಂದ ೩೦ ಸಾವಿರ ಕೋಟಿಗೆ ಏರಿ, ರಾಷ್ಟ್ರೀಯ ಉತ್ಪನ್ನದ ಶೇ. ೧.೩ನ್ನು ತಲುಪಿತು; ಇದರಲ್ಲಿ ಬಹು ಪಾಲು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನಕ್ಕೆ ಮೀಸಲಾಯಿತು. ಈಗ ಮೂಲೆಗೆ ಬಿದ್ದಿರುವ ಹನ್ನೆರಡನೇ ಯೋಜನೆಯಲ್ಲೂ, ಈಗಿನ ಸರಕಾರವು ೨೦೧೫ರಲ್ಲಿ ಪ್ರಕಟಿಸಿ ಎರಡು ವರ್ಷಗಳ ಬಳಿಕ ಅಂತಿಮಗೊಳಿಸಿದ ರಾಷ್ಟ್ರೀಯ ಆರೋಗ್ಯ ನೀತಿಯಲ್ಲೂ ರಾಷ್ಟ್ರೀಯ ಉತ್ಪನ್ನದ ಶೇ. ೨.೫ರಷ್ಟನ್ನು ಆರೋಗ್ಯ ಸೇವೆಗಳಿಗೆ ಒದಗಿಸುವ ಬಗ್ಗೆ ಹೇಳಲಾಗಿದ್ದರೂ, ಅದಕ್ಕೆ ಹನ್ನೆರಡನೇ ಯೋಜನೆಯಲ್ಲಿ ೨೦೧೭ರ ಗಡುವಿದ್ದುದು, ಹೊಸ ನೀತಿಯಲ್ಲಿ ೨೦೨೫ಕ್ಕೆ ಮುಂದೂಡಲ್ಪಟ್ಟು ಮೂಗಿಗೆ ಸವರಿದ ಬೆಣ್ಣೆಯಂತಷ್ಟೇ ಆಗಿದೆ.

ಈಗ ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ ಭಾಜಪ ಮತ್ತು ಪ್ರಧಾನಿ ಮೋದಿ ತಾವು ೨೦೧೪ರ ಚುನಾವಣೆಗೆ ಮುನ್ನ ಪ್ರಣಾಳಿಕೆಯಲ್ಲಿ ನೀಡಿದ್ದ ಆಶ್ವಾಸನೆಗಳನ್ನು ಮರೆತಿರುವುದಷ್ಟೇ ಅಲ್ಲ, ಅದಕ್ಕೆ ತದ್ವಿರುದ್ಧವಾದುದನ್ನೇ ಮಾಡುತ್ತಿದ್ದಾರೆ. ಕಡು ಬಡತನ ಹಾಗೂ ಕುಪೋಷಣೆಯನ್ನು ರಾಷ್ಟ್ರೀಯ ಆದ್ಯತೆಗಳಾಗಿ ಮಾಡುವುದು; ಕಡಿಮೆ ದರದಲ್ಲಿ, ಉತ್ತಮ ಗುಣಮಟ್ಟದ ಆರೋಗ್ಯ ಸೇವೆಗಳನ್ನು ಸುಲಭದಲ್ಲಿ ಲಭ್ಯವಾಗುವಂತೆ ಮಾಡಲು ರಾಷ್ಟ್ರೀಯ ಆರೋಗ್ಯ ಅಭಿಯಾನವನ್ನು ಆಮೂಲಾಗ್ರವಾಗಿ ಪರಿಷ್ಕರಿಸಿ, ರಾಷ್ಟ್ರೀಯ ಆರೋಗ್ಯ ಖಾತರಿ ಅಭಿಯಾನವನ್ನು ಆರಂಭಿಸುವುದು, ಹೊಸ ಸಮಗ್ರ ಆರೋಗ್ಯ ನೀತಿಯನ್ನು ತರುವುದು, ಸರಕಾರಿ ಆಸ್ಪತ್ರೆಗಳನ್ನು ಆಧುನಿಕ ತಂತ್ರಜ್ಞಾನ ಹಾಗೂ ಸೌಲಭ್ಯಗಳೊಂದಿಗೆ ಸುಸಜ್ಜಿತಗೊಳಿಸುವುದು, ಮಕ್ಕಳ ಆರೋಗ್ಯ ಹಾಗೂ ಪೋಷಣೆಗೆ ಒತ್ತು ನೀಡುವುದು, ತುರ್ತು ಚಿಕಿತ್ಸೆಯ ೧೦೮ ಆಂಬ್ಯುಲೆನ್ಸ್ ಸೇವೆಯನ್ನು ಎಲ್ಲೆಡೆಗೂ ವಿಸ್ತರಿಸುವುದು, ವೈದ್ಯ ವೃತ್ತಿಯ ನಿಯಂತ್ರಣಕ್ಕೆ ಸಣ್ಣ ಗಾತ್ರದ ಸಂಸ್ಥೆಯನ್ನು ರಚಿಸುವುದು ಇತ್ಯಾದಿ ಹಲವಾರು ಭರವಸೆಗಳನ್ನು ನೀಡಲಾಗಿತ್ತು. ಆದರೆ, ರಾತೋರಾತ್ರಿ ನೋಟುಗಳೆರಡನ್ನು ರದ್ದು ಮಾಡಿ ಚಲಾವಣೆಯಲ್ಲಿದ್ದ ೮೫% ಹಣವನ್ನು ಕಿತ್ತುಕೊಂಡು ಅರ್ಥ ವ್ಯವಸ್ಥೆಯನ್ನೇ ನಾಶ ಮಾಡಿದ್ದಲ್ಲದೆ, ನಡು ರಾತ್ರಿಯಲ್ಲಿ ಸರಕು ಹಾಗೂ ಸೇವಾ ತೆರಿಗೆಯನ್ನು ಹೇರಿ, ಇಡೀ ವ್ಯವಹಾರ ಕ್ಷೇತ್ರಕ್ಕೆ ಮರ್ಮಾಘಾತ ನೀಡಿದ್ದರಿಂದ ವಹಿವಾಟು ಶೇ. ೪೫–೮೦ ರಷ್ಟು ಕುಸಿಯಿತು, ಲಕ್ಷಗಟ್ಟಲೆ ಉತ್ಪಾದನಾ ಘಟಕಗಳು ಮುಚ್ಚಿಹೋದವು, ಶೇ. ೬೦ರಷ್ಟು ಉದ್ಯೋಗಗಳು ನಶಿಸಿ, ಲಕ್ಷಗಟ್ಟಲೆ ಕಾರ್ಮಿಕರು ಬೀದಿಪಾಲಾದರು, ರಾಷ್ಟ್ರೀಯ ಉತ್ಪನ್ನವು ಶೇ. ೨.೨ಕ್ಕೆ ಕುಸಿಯಿತು, ಬ್ಯಾಂಕುಗಳಲ್ಲಿ ಮರಳಿ ಬಾರದ ಸಾಲಗಳು ಸಾವಿರಗಟ್ಟಲೆ ಕೋಟಿಗಳಾಗಿ ಹಸಿವು, ಬಡತನ, ನಿರುದ್ಯೋಗಗಳು ವಿಪರೀತವಾದವು.

ಮೊದಲೇ ಶೇ. ೩೮ರಷ್ಟು ಮಕ್ಕಳಲ್ಲಿ ಕುಂಠಿತ ಬೆಳವಣಿಗೆಯೂ, ಪ್ರತೀ ಗಂಟೆಗೆ ಐದು ವರ್ಷದೊಳಗಿನ ೧೦೦ ಮಕ್ಕಳ ಸಾವುಗಳೂ ಸಂಭವಿಸುತ್ತಿದ್ದ ಈ ದೇಶದಲ್ಲಿ, ಮೋದಿ ಸರಕಾರವು ತನ್ನ ಮೊದಲ ಆಯವ್ಯಯ ಪತ್ರದಲ್ಲಿ ಮಕ್ಕಳ ಶಿಕ್ಷಣ, ಬೆಳವಣಿಗೆ ಹಾಗೂ ಆರೋಗ್ಯ ಕಾರ್ಯಕ್ರಮಗಳ ಅನುದಾನವನ್ನು ೮೧೦೦೦ ಕೋಟಿಯಿಂದ ೫೮೦೦೦ ಕೋಟಿಗೆ ಇಳಿಸಿತು, ಮಹಾತ್ಮಾ ಗಾಂಧಿ ಉದ್ಯೋಗ ಖಾತರಿ ಯೋಜನೆಯನ್ನು ಕಡೆಗಣಿಸಿತು. ನಂತರದ ಆಯವ್ಯಯ ಮಂಡನೆಗಳಲ್ಲೂ ಈ ಕ್ಷೇತ್ರಗಳ ಅವಗಣನೆಯು ಹಾಗೆಯೇ ಮುಂದುವರಿಯಿತು.

ಚುನಾವಣೆಗೆ ಮೊದಲು ಆಧಾರ್ ಯೋಜನೆಯನ್ನು ಬಾಯಿಗೆ ಬಂದಂತೆ ಬೈದಿದ್ದವರು ಅಧಿಕಾರಕ್ಕೇರಿ ತಿಂಗಳಾಗುವಾಗ ಎಲ್ಲದಕ್ಕೂ ಆಧಾರ್ ಚೀಟಿ ಕಡ್ಡಾಯವಾಯಿತು, ಅದಕ್ಕೆ ಹಿಂಬಾಗಿಲಿನಿಂದ ಅರೆಬರೆ ನಿಯಮಗಳೂ ಬಂದವು; ಆಧಾರ್ ಗುರುತಿಲ್ಲದೆ ಪಡಿತರವಿಲ್ಲ, ಶಾಲೆಯಿಲ್ಲ, ಆಸ್ಪತ್ರೆಯಿಲ್ಲ, ಹೆರಿಗೆಯಿಲ್ಲ, ಗರ್ಭಪಾತವಿಲ್ಲ, ಬ್ಯಾಂಕಿಲ್ಲ, ವಹಿವಾಟಿಲ್ಲ, ಫೋನಿಲ್ಲ, ಬದುಕೂ ಇಲ್ಲ, ಶವ ಸಂಸ್ಕಾರವೂ ಇಲ್ಲ ಎಂಬಂತಾಯಿತು. ಆಧಾರ್ ಇಲ್ಲದೆ ಪಡಿತರ ತಪ್ಪಿ ಕೆಲವರು ಸತ್ತರೆಂಬ ವರದಿಗಳೂ ಆದವು. ಒಟ್ಟಿನಲ್ಲಿ ಕೆಲಸವೂ ಇಲ್ಲದೆ, ಪಡಿತರವೂ ಇಲ್ಲದೆ, ಸಮಾಜ ಕಲ್ಯಾಣ ಕಾರ್ಯಕ್ರಮಗಳೂ ಇಲ್ಲದೆ ಈ ನಾಲ್ಕು ವರ್ಷಗಳಲ್ಲಿ ಹಸಿವು ಹೆಚ್ಚುತ್ತಲೇ ಸಾಗಿದೆ; ೨೦೧೭ರ ಜಾಗತಿಕ ಹಸಿವಿನ ಸೂಚ್ಯಂಕದಲ್ಲಿ ಭಾರತದ ಸ್ಥಾನವು ೧೧೯ರಲ್ಲಿ ೧೦೦ಕ್ಕಿಳಿದಿದೆ. ಈ ಪಟ್ಟಿಯಲ್ಲಿ ಬಾಂಗ್ಲಾದೇಶ, ಶ್ರೀಲಂಕಾ, ನೇಪಾಲ, ಮ್ಯಾನ್ಮಾರ್‌ಗಳು ಕ್ರಮವಾಗಿ ೯೦, ೮೫, ೭೫ ಹಾಗೂ ೭೭ನೇ ಸ್ಥಾನಗಳಲ್ಲಿದ್ದರೆ, ಬ್ರಿಕ್ಸ್ ಗುಂಪಿನ ದಕ್ಷಿಣ ಆಫ್ರಿಕಾ, ಚೀನಾ, ರಷ್ಯಾ, ಬ್ರೆಜಿಲ್‌ಗಳು ಇನ್ನೂ ಮೇಲೆ, ಕ್ರಮವಾಗಿ ೫೫, ೨೯, ೨೨ ಮತ್ತು ೧೮ನೇ ಸ್ಥಾನಗಳಲ್ಲಿವೆ; ೨೦೦೭ರಲ್ಲಿ ೪೭ನೇ ಸ್ಥಾನದಲ್ಲಿದ್ದ ಚೀನಾವು ಈಗ ೨೯ಕ್ಕೇರಿದರೆ, ಭಾರತವು ೯೪ರಿಂದ ೧೦೦ಕ್ಕಿಳಿದಿದೆ.

ಹೊಸ ರಾಷ್ಟ್ರೀಯ ಆರೋಗ್ಯ ನೀತಿಯಲ್ಲಿ ಆರೋಗ್ಯ ಸೇವೆಗಳಿಗೆ ರಾಷ್ಟ್ರೀಯ ಉತ್ಪನ್ನದ ಶೇ. ೨.೫ರಷ್ಟನ್ನು ಒದಗಿಸುವುದಕ್ಕೆ ೨೦೨೫ರವರೆಗೆ ಗಡುವನ್ನು ವಿಸ್ತರಿಸಿದ್ದಲ್ಲದೆ, ಸರಕಾರಿ ಆಸ್ಪತ್ರೆಗಳ ಸುಧಾರಣೆಯ ಬಗ್ಗೆ ಖಚಿತ ಭರವಸೆಗಳನ್ನೇನೂ ನೀಡದೆ ಮರೆತುಬಿಡಲಾಗಿದೆ. ಬದಲಿಗೆ, ಖಾಸಗಿ ಆಸ್ಪತ್ರೆಗಳಿಂದ ಸೇವೆಗಳನ್ನು ಪಡೆಯುವುದಕ್ಕೆ ಬೊಕ್ಕಸದ ಹಣವೊದಗಿಸುವ ಯೋಜನೆಗಳ ಬಗ್ಗೆ ಹೇಳಲಾಗಿದ್ದು, ಅದರ ಬೆನ್ನಿಗೆ, ನೀತಿ ಆಯೋಗವು ಜಿಲ್ಲಾಸ್ಪತ್ರೆಗಳನ್ನು ೩೦ ವರ್ಷಗಳಿಗೆ ಖಾಸಗಿ ಗುತ್ತಿಗೆಗೆ ಒಪ್ಪಿಸುವ ಯೋಜನೆಯನ್ನು ಪ್ರಕಟಿಸಿದೆ.

ಆರೋಗ್ಯ ಕ್ಷೇತ್ರದಲ್ಲಿ ಸರಕಾರದ ಪಾಲು ಇಳಿಯುತ್ತಲೇ ಹೋದಂತೆ, ಸರಕಾರಿ ಆರೋಗ್ಯ ವ್ಯವಸ್ಥೆಯು ರೋಗ ನಿಯಂತ್ರಣ ಕಾರ್ಯಕ್ರಮಗಳಿಗಷ್ಟೇ ಸೀಮಿತಗೊಂಡು, ಚಿಕಿತ್ಸೆಯ ಹೊಣೆ ಕಡಿಮೆಯಾಗುತ್ತಾ ಹೋಯಿತು. ವರ್ಷದಿಂದ ವರ್ಷಕ್ಕೆ ಹೊರಬರುತ್ತಿರುವ ಅತ್ಯಾಧುನಿಕ ವೈದ್ಯಕೀಯ ತಂತ್ರಜ್ಞಾನಗಳನ್ನು ಅಳವಡಿಸಿಕೊಳ್ಳುವುದಂತಿರಲಿ, ಮೂಲಭೂತ ಸೌಲಭ್ಯಗಳೂ ಸರಿಯಿಲ್ಲದೆ ಸರಕಾರಿ ಆಸ್ಪತ್ರೆಗಳು ಸೊರಗತೊಡಗಿದವು, ಗ್ರಾಮೀಣ ಹಾಗೂ ಹಿಂದುಳಿದ ಪ್ರದೇಶಗಳಲ್ಲಿ ತೀರಾ ಕಡೆಗಣಿಸಲ್ಪಟ್ಟವು. ಕೇರಳ, ತಮಿಳುನಾಡುಗಳಂತಹ ಕೆಲವು ರಾಜ್ಯಗಳನ್ನು ಬಿಟ್ಟರೆ ಉಳಿದೆಡೆಗಳಲ್ಲಿ ಸರಕಾರಿ ಆರೋಗ್ಯ ಸೇವೆಗಳ ಸ್ಥಿತಿಯು ತೀರಾ ಹೀನಾಯಗೊಳ್ಳುತ್ತಲೇ ಸಾಗಿದೆ. ಉತ್ತರ ಪ್ರದೇಶ, ಬಿಹಾರದಂಥ ರಾಜ್ಯಗಳಲ್ಲಿ ಆಸ್ಪತ್ರೆಗಳಲ್ಲಿ ಸೌಲಭ್ಯಗಳಿಲ್ಲದೆ ನೂರಾರು ಮಕ್ಕಳು ಸಾವನ್ನಪ್ಪುತ್ತಿರುವುದು, ರೋಗಿಗಳನ್ನು ಭುಜಗಳಲ್ಲೋ, ಸೈಕಲುಗಳಲ್ಲೋ ಸಾಗಿಸುತ್ತಿರುವುದು ಪ್ರತಿನಿತ್ಯವೆಂಬಂತೆ ವರದಿಯಾಗುತ್ತಲೇ ಇವೆ. ಕರ್ನಾಟಕದಲ್ಲೂ ಆಸ್ಪತ್ರೆಗಳಲ್ಲಿ ಯಾರೂ ಇಲ್ಲದೆ ದಾರಿ ಬದಿಗಳಲ್ಲಿ ಹೆರಿಗೆಗಳಾದ ಘಟನೆಗಳೂ ವರದಿಯಾಗುತ್ತಿವೆ. ವೈದ್ಯರಿಗಾಗಲೀ, ಅರೆ ವೈದ್ಯಕೀಯ ಸಿಬ್ಬಂದಿಗಾಗಲೀ ಆಕರ್ಷಕ ಸಂಬಳ ಹಾಗೂ ಸೌಲಭ್ಯಗಳನ್ನು ಒದಗಿಸಲು ಹೆಚ್ಚಿನ ಸರಕಾರಗಳು ವಿಫಲವಾಗಿರುವುದರಿಂದ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ೧೫ ಸಾವಿರದಷ್ಟು ವೈದ್ಯರ ಕೊರತೆಯಿದೆ, ೫೦೦೦ ಹೆರಿಗೆ ತಜ್ಞರಿರಬೇಕಾದಲ್ಲಿ ಕೇವಲ ೧೦೦೦ದಷ್ಟಿದ್ದಾರೆ. ವಿಶ್ವ ಆರೋಗ್ಯ ಸಂಸ್ಥೆಯು ಸಾವಿರ ಜನರಿಗೊಬ್ಬ ವೈದ್ಯರಿರಬೇಕೆಂದು ಸೂಚಿಸಿರುವುದಕ್ಕೆ ಹೋಲಿಸಿದರೆ, ಕರ್ನಾಟಕ, ತಮಿಳುನಾಡು, ಕೇರಳ, ದಿಲ್ಲಿ, ಗೋವಾ ಮತ್ತು

ಪಂಜಾಬುಗಳಲ್ಲಿ ಸಾವಿರಕ್ಕೆ ೨-೪ರಷ್ಟು ವೈದ್ಯರಿದ್ದಾರೆ, ಆದರೆ ಉತ್ತರ ಪ್ರದೇಶ, ಬಿಹಾರ, ಜಾರ್ಖಂಡ್, ಚತ್ತೀಸಗಢ ಮುಂತಾದ ರಾಜ್ಯಗಳಲ್ಲೂ, ಕರ್ನಾಟಕವೂ ಸೇರಿದಂತೆ ಹೆಚ್ಚಿನ ರಾಜ್ಯಗಳ ಗ್ರಾಮೀಣ ಪ್ರದೇಶಗಳಲ್ಲೂ ೩೦೦೦-೮೦೦೦ ಜನರಿಗೊಬ್ಬ ವೈದ್ಯರಷ್ಟೇ ಇದ್ದಾರೆ. ಶೇ. ೮೦ರಷ್ಟು ವೈದ್ಯರು, ಶೇ. ೭೫ರಷ್ಟು ಚಿಕಿತ್ಸಾಲಯಗಳು, ಶೇ. ೬೦ರಷ್ಟು ಆಸ್ಪತ್ರೆಗಳು ನಗರ ಪ್ರದೇಶಗಳಲ್ಲೇ ತುಂಬಿದ್ದು, ಶೇ. ೨೮ರಷ್ಟು ಜನಸಂಖ್ಯೆಗೆ ಸೇವೆಯೊದಗಿಸುತ್ತಿದ್ದಾರೆ!

ಗ್ರಾಮೀಣ ಪ್ರದೇಶಗಳಲ್ಲಿ ಸೇವೆಯೊದಗಿಸುವುದಕ್ಕೆ ವೈದ್ಯರಿಗೂ, ಇತರ ಸಿಬ್ಬಂದಿಗೂ ಒಳ್ಳೆಯ ಸಂಬಳ-ಸೌಲಭ್ಯಗಳನ್ನು ನೀಡಿ ಆಕರ್ಷಿಸುವ ಬದಲಿಗೆ, ಗ್ರಾಮೀಣ ಪ್ರದೇಶಗಳಲ್ಲಿ ಕಡ್ಡಾಯ ಸೇವೆ ಮಾಡುವಂತೆ ಸರಕಾರಿ ಕಾಲೇಜುಗಳ ಕಿರಿಯ ವೈದ್ಯರನ್ನು ಬೆದರಿಸುವುದಕ್ಕೆ ಹಲವು ಸರಕಾರಗಳು ಯತ್ನಿಸಿವೆ. ಗ್ರಾಮೀಣ ಪ್ರದೇಶಗಳಲ್ಲಿ ಆರೋಗ್ಯ ಸೇವೆಗಳನ್ನೊದಗಿಸುವಲ್ಲಿ ಸರಕಾರಗಳ ಸಂಪೂರ್ಣ ವೈಫಲ್ಯಕ್ಕೆ ಈ ಪ್ರತಿಭಾವಂತ ಕಿರಿಯ ವೈದ್ಯರನ್ನಷ್ಟೇ ಹೊಣೆಯಾಗಿಸುವುದು ಅನ್ಯಾಯವಾಗುತ್ತದೆ. ಜೊತೆಗೆ, ಖಾಸಗಿ ಕಾಲೇಜುಗಳಲ್ಲಿ ಕೋಟಿಗಟ್ಟಲೆಗೆ ಸೀಟು ಪಡೆದು ವೈದ್ಯರಾಗುವವರಿಗೆ ಈ ನಿಯಮಗಳನ್ನು ಅನ್ವಯಿಸದಿರುವುದರಿಂದ, ಸರಕಾರಿ ಕಾಲೇಜುಗಳಲ್ಲಿ ಕಲಿತ ಪ್ರತಿಭಾವಂತರನ್ನು ಹಳ್ಳಿಗಳಿಗೆ ಅಟ್ಟಿ, ಕೋಟಿ ಕೊಟ್ಟವರಿಗೆ ಸ್ನಾತಕೋತ್ತರ ವ್ಯಾಸಂಗದ ದಾರಿಯನ್ನು ಸುಗಮಗೊಳಿಸುವ ಹುನ್ನಾರವೂ ಇದರ ಹಿಂದಿರುವ ಸಾಧ್ಯತೆಗಳಿವೆ.

ಸ್ವಾತಂತ್ರ್ಯ ಪೂರ್ವದಿಂದಲೇ ನಮ್ಮ ದೇಶದಲ್ಲಿ ಖಾಸಗಿಯಾಗಿ ವೃತ್ತಿ ನಡೆಸುತ್ತಿದ್ದ ವೈದ್ಯರಿದ್ದರು, ಕೆಲವೆಡೆ ಸಣ್ಣ ಖಾಸಗಿ ಆಸ್ಪತ್ರೆಗಳೂ ಇದ್ದವು; ಖಾಸಗಿ ಸಂಸ್ಥೆಗಳು ಮತ್ತು ದತ್ತಿ ಸಂಸ್ಥೆಗಳು ನಡೆಸುತ್ತಿದ್ದ ಸೇವಾ ಆಸ್ಪತ್ರೆಗಳೂ ಇದ್ದವು. ಸ್ವಾತಂತ್ರ್ಯಾನಂತರದ ನಾಲ್ಕೈದು ದಶಕಗಳಲ್ಲಿ ದೇಶದ ವೈದ್ಯಕೀಯ ಕಾಲೇಜುಗಳಲ್ಲಿ ಕಲಿತವರಲ್ಲಿ ಹಲವರು ತಮ್ಮ-ತಮ್ಮ ಊರುಗಳಿಗೆ ಮರಳಿ ಚಿಕಿತ್ಸಾಲಯಗಳನ್ನೂ, ಸಣ್ಣ ಆಸ್ಪತ್ರೆಗಳನ್ನೂ ಸ್ಥಾಪಿಸಿ ಆರೋಗ್ಯ ರಕ್ಷಣೆಯ ಹೊಣೆಯನ್ನು ಹೊತ್ತಿದ್ದರು. ಇಂದು ದೇಶದಲ್ಲಿ ಆರೋಗ್ಯ ಸೇವೆಗಳಲ್ಲಿ ಶೇ. ೮೦ರಷ್ಟು ವೈದ್ಯರು, ಶೇ. ೭೮ರಷ್ಟು ಹೊರರೋಗಿ ಸೌಲಭ್ಯಗಳು ಹಾಗೂ ಶೇ. ೬೦ರಷ್ಟು ಒಳರೋಗಿ ಸೌಲಭ್ಯಗಳು ಖಾಸಗಿ ವಲಯದಲ್ಲೇ ಇದ್ದು, ಶೇ. ೭೦ರಷ್ಟು ಆಸ್ಪತ್ರೆಗಳು ಸಣ್ಣ ಮಟ್ಟದವುಗಳೇ ಆಗಿವೆ ಮತ್ತು ಆ ಸಣ್ಣ ಆಸ್ಪತ್ರೆಗಳಲ್ಲಿ ಶೇ. ೭೫ರಷ್ಟನ್ನು ಒಬ್ಬರೇ ವೈದ್ಯರು ಯಾ ವೈದ್ಯ ದಂಪತಿಗಳು ನಡೆಸುತ್ತಿದ್ದಾರೆ. ತಾಲೂಕು ಕೇಂದ್ರಗಳು ಮತ್ತು ಅದಕ್ಕೂ ಸಣ್ಣದಾದ ಊರುಗಳಲ್ಲಿರುವ ಇಂತಹ ಆಸ್ಪತ್ರೆಗಳು ಅಲ್ಲಿನ ಜನತೆಗೆ ಹಲವು ವರ್ಷಗಳಿಂದ ಉತ್ತಮ ಸೇವೆಯನ್ನೊದಗಿಸಿರುವುದಷ್ಟೇ ಅಲ್ಲದೆ, ಜನರ ಕಷ್ಟಗಳನ್ನು ಅರಿತುಕೊಂಡು, ಸಹಾನುಭೂತಿಯಿಂದ ಸೇವೆಯೊದಗಿಸಿ ಜನರ ಪ್ರೀತಿ-ವಿಶ್ವಾಸಗಳಿಗೆ ಪಾತ್ರವಾಗಿವೆ. ತೊಂಬತ್ತರ ದಶಕದ ಆರಂಭದವರೆಗೆ ಇಂತಹ ಸಣ್ಣ ಹಾಗೂ ಮಧ್ಯಮ ಆಸ್ಪತ್ರೆಗಳೇ ಪ್ರಾಥಮಿಕ ಹಾಗೂ ದ್ವಿತೀಯ ಸ್ತರದ ಆರೋಗ್ಯ ಸೇವೆಗಳನ್ನು ಒದಗಿಸುತ್ತಿದ್ದು, ಉನ್ನತ ಚಿಕಿತ್ಸೆಗಳನ್ನು ಮುಖ್ಯವಾಗಿ ಸರಕಾರಿ ಜಿಲ್ಲಾಸ್ಪತ್ರೆಗಳೂ, ಸರಕಾರಿ ವೈದ್ಯಕೀಯ ಕಾಲೇಜುಗಳ ಆಸ್ಪತ್ರೆಗಳೂ ಒದಗಿಸುತ್ತಿದ್ದವು.

ಕಳೆದ ಮೂರು ದಶಕಗಳ ಹೊಸ ಆರ್ಥಿಕ ನೀತಿಯಡಿಯಲ್ಲಿ ಇವೆಲ್ಲವೂ ಬದಲಾಗುತ್ತಿವೆ. ಎಲ್ಲ ಸ್ತರದ ಚಿಕಿತ್ಸೆಗಳನ್ನು ನೀಡುತ್ತಿದ್ದ ಸರಕಾರಿ ಆಸ್ಪತ್ರೆಗಳು ದುರ್ಬಲಗೊಳ್ಳುತ್ತಿದ್ದಂತೆ ಉನ್ನತ ಆರೋಗ್ಯ ಸೇವೆಗಳಲ್ಲಿ ದೊಡ್ಡ ಬಂಡವಾಳದ ದೊಡ್ಡ ಆಕ್ರಮಣವೇ ನಡೆದಿದೆ. ಈ ದೊಡ್ಡ ಬಂಡವಾಳವನ್ನು ಸರಕಾರಗಳೇ ಪ್ರೋತ್ಸಾಹಿಸಿ, ಬಡವರಿಗೆ ಉಚಿತ ಚಿಕಿತ್ಸೆ ನೀಡುವ ಹೆಸರಲ್ಲಿ ಸರಕಾರದಿಂದ ಭೂಮಿಯನ್ನೂ, ಬಗೆಬಗೆಯ ತೆರಿಗೆ ವಿನಾಯಿತಿಗಳನ್ನೂ ನೀಡಿವೆ. ಆದರೆ ಆ ಆಸ್ಪತ್ರೆಗಳು ಬಡವರಿಗೆ ಉಚಿತ ಚಿಕಿತ್ಸೆಯನ್ನು ನೀಡುವಂತೆ ಕಡ್ಡಾಯಗೊಳಿಸುವ ಬದಲು, ಸರಕಾರಿ ಆಸ್ಪತ್ರೆಗಳ ರೋಗಿಗಳನ್ನೇ ಅಲ್ಲಿಗೆ ಕಳಿಸಿ, ಚಿಕಿತ್ಸೆಯ ವೆಚ್ಚವನ್ನೂ ನೀಡುವ ಬಗೆಬಗೆಯ ಯೋಜನೆಗಳನ್ನು ಸರಕಾರಗಳು ಆರಂಭಿಸಿವೆ; ಕಾರ್ಮಿಕರ ವಿಮೆ, ಯಶಸ್ವಿನಿ, ನಗರ ಯಶಸ್ವಿನಿ, ವಾಜಪೇಯಿ ಆರೋಗ್ಯಶ್ರೀ, ತಾಯಿ ಭಾಗ್ಯ, ಬಾಲ ಸಂಜೀವಿನಿ, ರಾಜೀವ ಆರೋಗ್ಯ ಭಾಗ್ಯ, ಆರೋಗ್ಯ ಕರ್ನಾಟಕ, ಮತ್ತೀಗ ಆಯುಷ್ಮಾನ್ ಭಾರತ ಇತ್ಯಾದಿ ಹೆಸರುಗಳಲ್ಲಿ ಈ ಖಾಸಗಿ ಮಹಾ ಆಸ್ಪತ್ರೆಗಳಿಗೆ ಸರಕಾರಿ ವೆಚ್ಚದಲ್ಲಿ ರೋಗಿಗಳನ್ನು ಕಳಿಸಲಾಗುತ್ತಿದೆ. ಈ ಕಾರ್ಪರೇಟ್ ಆಸ್ಪತ್ರೆಗಳನ್ನು ಇನ್ನಷ್ಟು ಕೊಬ್ಬಿಸುವುದಕ್ಕಾಗಿ ಮಿತದರದಲ್ಲಿ ಸೇವೆಯೊದಗಿಸುವ ಸಣ್ಣ ಹಾಗೂ ಮಧ್ಯಮ ಗಾತ್ರದ ಖಾಸಗಿ ಆಸ್ಪತ್ರೆಗಳಿಗೆ ಸಮಸ್ಯೆಯೊಡ್ಡಿ, ಅವನ್ನು ಮುಚ್ಚಿಸುವ ಸ್ಥಿತಿಯನ್ನು ನಿರ್ಮಿಸಲಾಗುತ್ತಿದೆ.

ಆಯುಷ್ಮಾನ್ ಭಾರತವೂ ಸೇರಿದಂತೆ ಈಗಾಗಲೇ ಆರಂಭಿಸಲಾಗಿರುವ ಆರೋಗ್ಯ ಸುರಕ್ಷಾ ಯೋಜನೆಗಳಲ್ಲಿ ಸಣ್ಣ ಹಾಗೂ ಮಧ್ಯಮ ಮಟ್ಟದ ಖಾಸಗಿ ಆಸ್ಪತ್ರೆಗಳನ್ನು ಹೊರಗುಳಿಸುವ ತಂತ್ರಗಳನ್ನು ಹೆಣೆಯಲಾಗಿದೆ. ಆಯುಷ್ಮಾನ್ ಭಾರತದಡಿಯಲ್ಲಿ ಲಭ್ಯವಾಗಲಿರುವ ೧೩೫೪ ಚಿಕಿತ್ಸೆಗಳಿಗೆ ರೂ. ೧೦೦೦ದಿಂದ ರೂ. ೧.೬ ಲಕ್ಷದವರೆಗೆ ದರವನ್ನು ನಿಗದಿಪಡಿಸಲಾಗಿದೆ; ಅವುಗಳಲ್ಲಿ, ಸಣ್ಣ ಹಾಗೂ ಮಧ್ಯಮ ಗಾತ್ರದ ಆಸ್ಪತ್ರೆಗಳಲ್ಲಿ ನಡೆಸುವ ಚಿಕಿತ್ಸೆಗಳಿಗೆ ಖರ್ಚಿನ ಶೇ. ೧೦-೩೦ರಷ್ಟನ್ನು ಮಾತ್ರ ನೀಡಿದರೆ, ಕಾರ್ಪರೇಟ್ ಮತ್ತು ದೊಡ್ಡ ಆಸ್ಪತ್ರೆಗಳಲ್ಲಿ ನೀಡಲಾಗುವ ಉನ್ನತ ಚಿಕಿತ್ಸೆಗಳಿಗೆ ಖರ್ಚಿನ ಶೇ. ೬೦-೧೦೦ರಷ್ಟನ್ನು ಮರಳಿಸಲಾಗುತ್ತದೆ. ಹಾಗಾಗಿ ಯೋಜನೆಯಲ್ಲಿ ಭಾಗಿಯಾಗುವ ಸಣ್ಣ ಆಸ್ಪತ್ರೆಗಳು ನಷ್ಟಕ್ಕೀಡಾಗಿ, ಬಾಗಿಲು ಹಾಕಿಕೊಳ್ಳುವ ಸ್ಥಿತಿಯುಂಟಾಗಲಿದೆ, ಈಗಾಗಲೇ ಇಂತಹ ಯೋಜನೆಗಳಿಂದಾಗಿ ದೇಶದ ಹಲವೆಡೆ ಸಣ್ಣ ಆಸ್ಪತ್ರೆಗಳು ಮುಚ್ಚಿಹೋಗಿರುವ ವರದಿಗಳಾಗಿವೆ.

ಜೊತೆಗೆ, ಆಸ್ಪತ್ರೆಗಳಿಗೆ ಕಡಿವಾಣ ಹಾಕುವ ಹೆಸರಲ್ಲಿ ಕಠಿಣವಾದ ಕಾನೂನುಗಳನ್ನು ತರಲಾಗುತ್ತಿದೆ. ನಕಲಿ ವೈದ್ಯರ ಹಾವಳಿಯನ್ನು ತಡೆಯುವುದಕ್ಕೆಂದು ಕರ್ನಾಟಕದಲ್ಲಿ ೨೦೦೭ರಲ್ಲಿ ಜಾರಿಗೊಳಿಸಿದ ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ (ಕೆಪಿಎಂಇ) ಕಾಯಿದೆಯಿಂದ ನಕಲಿ ವೈದ್ಯರು ಕಡಿಮೆಯಾಗುವ ಬದಲು ಆ ಕಾನೂನಿನಡಿಯಲ್ಲೇ ನೋಂದಣಿ ಪಡೆದಿರುವ ವರದಿಗಳಾಗಿವೆ; ಅದಾಗಲೇ ಅಸ್ತಿತ್ವದಲ್ಲಿದ್ದ ಆಸ್ಪತ್ರೆಗಳಿಗೆ ಮೂಲ ಸೌಕರ್ಯಗಳ ಬಗ್ಗೆ ಕಾನೂನಿನಲ್ಲಿ ವಿನಾಯಿತಿಯಿದ್ದರೂ, ಅದೇ ಕಾರಣಕ್ಕೆ ಅಧಿಕಾರಿಗಳ ಉಪಟಳ ಹಾಗೂ ಭ್ರಷ್ಟಾಚಾರಗಳಿಗೆ ಅವಕಾಶವೊದಗಿ, ಪ್ರಾಮಾಣಿಕತೆಯಿಂದ ಆಸ್ಪತ್ರೆಗಳನ್ನು ನಡೆಸುತ್ತಿದ್ದವರು ಕಷ್ಟಕ್ಕೀಡಾಗಿದ್ದಾರೆ, ಗಿರಿಜನರ ಹಾಡಿಯೊಳಗೆ ಅತ್ಯಂತ ಮಿತದರದಲ್ಲಿ ಸೇವೆಯೊದಗಿಸುತ್ತಿದ್ದ ಪ್ರತಿಭಾವಂತ ವೈದ್ಯರೊಬ್ಬರು ತಮ್ಮ ಆಸ್ಪತ್ರೆಯನ್ನೇ ಮುಚ್ಚಿಬಿಟ್ಟಿದ್ದಾರೆ. ಸಣ್ಣ ಆಸ್ಪತ್ರೆಗಳಿಗೆ ಕಂಟಕವಾಗುವ ಇಂತಹ ಯಾವುದೇ ಕಾನೂನುಗಳು ದುಡ್ಡಿನ ಗೋಣಿಗಳ ಮೇಲೆ ಕೂತಿರುವ ಕಾರ್ಪರೇಟ್ ಧಣಿಗಳ ಕೂದಲನ್ನೂ ಅಲುಗಾಡಿಸುವುದಿಲ್ಲ.

ಈಗ ಇವೇ ಕಾರ್ಪರೇಟ್ ಕುಳಗಳು ರಾಷ್ಟ್ರೀಯ ಆಸ್ಪತ್ರೆಗಳ ಮಾನ್ಯತಾ ಸಂಸ್ಥೆ, ಎನ್‌ಎಬಿಎಚ್, ಎಂಬುದನ್ನು ಹುಟ್ಟಿಸಿ, ಎಲ್ಲಾ ಖಾಸಗಿ ಆಸ್ಪತ್ರೆಗಳೂ ಅದರಡಿ ಮಾನ್ಯತೆಯನ್ನು ಪಡೆಯುವಂತೆ ಮಾಡಲು ಬಗೆಬಗೆಯ ಕುತಂತ್ರಗಳನ್ನು ಹೆಣೆಯುತ್ತಿದ್ದಾರೆ. ಈ ಎನ್‌ಎಬಿಎಚ್ ಮಾನ್ಯತೆಯನ್ನು ಪಡೆಯಬೇಕಾದರೆ ಆಸ್ಪತ್ರೆಗಳು ಲಕ್ಷಗಟ್ಟಲೆ ವೆಚ್ಚ ಮಾಡಬೇಕಾಗುತ್ತದೆ, ಮಾತ್ರವಲ್ಲ, ಅದರ ಮಾನದಂಡಗಳನ್ನು ಅನುಸರಿಸುವುದಕ್ಕೆ ನಿರಂತರವಾಗಿ ೨-೩ ಪಟ್ಟು ಹೆಚ್ಚು ವ್ಯಯಿಸುತ್ತಿರಬೇಕಾಗುತ್ತದೆ. ಇಂತಹ ಮಾನದಂಡಗಳಿಗಾಗಿ ಅಷ್ಟೊಂದು ವ್ಯಯಿಸಿದ ಬಳಿಕ ಚಿಕಿತ್ಸೆಯ ಪರಿಣಾಮಗಳು ಉತ್ತಮಗೊಳ್ಳುತ್ತವೆ ಎಂಬುದಕ್ಕೆ ಇದುವರೆಗೆ ಯಾವ ಅಧ್ಯಯನಗಳಲ್ಲೂ ಆಧಾರಗಳು ದೊರೆತಿಲ್ಲ. ಆದ್ದರಿಂದ ಈ ಖಾಸಗಿ ಕಾರ್ಪರೇಟ್ ಮಾನದಂಡಗಳ ದುರುದ್ದೇಶವು ಸಣ್ಣ ಹಾಗೂ ಮಧ್ಯಮ ಮಟ್ಟದ ಆಸ್ಪತ್ರೆಗಳ ಮೇಲೆ ಅನಗತ್ಯವಾದ ವೆಚ್ಚವನ್ನು ಹೇರಿ, ಅವು ತಮ್ಮ ಚಿಕಿತ್ಸೆಗೆ ವಿಧಿಸುವ ದರಗಳನ್ನು ಮೂರ್ನಾಲ್ಕು ಪಟ್ಟು



ಆಂಬ್ಯುಲೆನ್ಸ್ ಸೇವೆ ಸಿಗದೆ ರೋಗಿಯನ್ನು ಆಸ್ಪತ್ರೆಗೆ ಕರೆದೊಯ್ಯುತ್ತಿರುವುದು

ಹೆಚ್ಚಿಸುವಂತೆ ಬಲಾತ್ಕರಿಸಿ, ಆ ಮೂಲಕ ಕಾರ್ಪರೇಟ್ ಆಸ್ಪತ್ರೆಗಳು ವಿಧಿಸುತ್ತಿರುವ ವಿಪರೀತ ದರಗಳಿಗೆ ಸಮವಾಗುವಂತೆ ಮಾಡಿ, ಕಾರ್ಪರೇಟ್ ದರಗಳಿಗೆ ಸಮರ್ಥನೆಯೊದಗಿಸುವುದು, ಮತ್ತು ಅಂತಹ ವಿಪರೀತ ದರಗಳಲ್ಲಿ ಸಣ್ಣ ಊರುಗಳಲ್ಲಿ ಸೇವೆಯೊದಗಿಸಲಾಗದಂತೆ ಮಾಡಿ ಈ ಸಣ್ಣ ಆಸ್ಪತ್ರೆಗಳನ್ನು ಮುಚ್ಚಿಸುವುದು ಆಗಿದೆ. ಕಳೆದ ವರ್ಷ ಕೆಪಿಎಂಇ ಕಾಯಿದೆಯನ್ನು ಪರಿಷ್ಕರಿಸಹೊರಟಾಗ ಅದರೊಳಗೆ ಈ ಎನ್‌ಎಬಿಎಚ್ ಮಾನದಂಡಗಳನ್ನು ನುಗ್ಗಿಸುವ ಹಾಗೂ ಎನ್‌ಎಬಿಎಚ್ ನೋಂದಾಯಿತ ಆಸ್ಪತ್ರೆಗಳನ್ನು ಕೆಪಿಎಂಇ ಪರಿಶೀಲನೆಗಳಿಂದ ಹೊರಗುಳಿಸುವ ಪ್ರಯತ್ನಗಳಾಗಿದ್ದವು; ರಾಜ್ಯದ ವೈದ್ಯರ ಹೋರಾಟದಿಂದ ಅವನ್ನು ಕೈಬಿಡಬೇಕಾಯಿತು. ನಂತರ ಕೆಪಿಎಂಇ ನಿಯಮಗಳನ್ನು ರಚಿಸುವಾಗ ಮತ್ತೆ ಎನ್‌ಎಬಿಎಚ್ ನುಸುಳಲು ಯತ್ನಿಸಿತ್ತು, ಅದನ್ನೂ ತಡೆಯಲಾಗಿತ್ತು. ಕೆಪಿಎಂಇ ಕಾಯಿದೆಯೊಳಕ್ಕೆ ಎನ್‌ಎಬಿಎಚ್ ಪ್ರಾಯೋಜಿತ ರೋಗಿಗಳ ಸನದನ್ನು ತೂರಿಸಲು ನಡೆಸಿದ ಪ್ರಯತ್ನಗಳನ್ನು ರಾಜ್ಯದ ವೈದ್ಯರು ವಿರೋಧಿಸಿದ್ದರೂ, ಕೆಲವು ಚಳುವಳಿಗಾರರ ಹಠದಿಂದ ಅದು ಕಾಯಿದೆಯಲ್ಲಿ ಸೇರಿಕೊಂಡಿತು; ಈಗ ಕೇಂದ್ರ ಸರಕಾರವೂ ಅದೇ ಎನ್‌ಎಬಿಎಚ್ ಸನದನ್ನು ಆಧರಿಸಿರುವ ಕರಡನ್ನು ಪ್ರಕಟಿಸಿದೆ. ತಮಗೆ ಪ್ರತಿಸ್ಪರ್ಧಿಗಳೆನಿಸಿದವರನ್ನು ಮಟ್ಟ ಹಾಕುವ ಕಾರ್ಪರೇಟ್ ತಂತ್ರಗಳು ಹೀಗೆ ಬೇರೆ ಬೇರೆ ಹಾದಿಗಳಲ್ಲಿ ನುಸುಳಲು ಯತ್ನಿಸುತ್ತವೆ, ಸರಕಾರಗಳು ಅವಕ್ಕೆ ಅವಕಾಶ ನೀಡುತ್ತವೆ, ಗೂಢಾರ್ಥಗಳನ್ನು ಅರಿಯದವರು, ಅಥವಾ ಅರಿತಿದ್ದರೂ ಸೋಗು ಹಾಕಿಕೊಳ್ಳುವವರು ಅವುಗಳ ಬೆಂಬಲಕ್ಕೆ ನಿಲ್ಲುತ್ತಾರೆ. ಈ ತಂತ್ರಗಳ ಭಾಗವಾಗಿ ಈಗ ಆರೋಗ್ಯ ಕರ್ನಾಟಕ ಯೋಜನೆಯ ನಿಯಮಗಳೊಳಕ್ಕೆ ಎನ್‌ಎಬಿಎಚ್‌ಅನ್ನು ಯಶಸ್ವಿಯಾಗಿ ತೂರಿಸಲಾಗಿದ್ದು, ಎನ್‌ಎಬಿಎಚ್ ಮಾನ್ಯತೆಯಿಲ್ಲದ ಆಸ್ಪತ್ರೆಗಳು ಆರೋಗ್ಯ ಕರ್ನಾಟಕ ಯೋಜನೆಯಲ್ಲಿ ಸೇರದಂತೆ ಮಾಡಲಾಗಿದೆ. ಹಾಗೆಯೇ, ವಿಮಾ ನಿಯಂತ್ರಣ ಪ್ರಾಧಿಕಾರದ ನಿಯಮಗಳಲ್ಲೂ ಎನ್‌ಎಬಿಎಚ್ ಅನ್ನು ತೂರಿಸಿ, ಅದಿಲ್ಲದ ಆಸ್ಪತ್ರೆಗಳಲ್ಲಿ ನಗದುರಹಿತ ವಿಮಾ ಸೌಲಭ್ಯವಿಲ್ಲದಂತೆ ಮಾಡಲಾಗಿದೆ. ಈ ಕುತಂತ್ರಗಳಿಗೆ ಸಿಲುಕಿದ ಆಸ್ಪತ್ರೆಗಳು ಒಂದೋ ಈ ಎನ್‌ಎಬಿಎಚ್ ಮಾನ್ಯತೆಯನ್ನು ಪಡೆಯಲು ಲಕ್ಷಗಟ್ಟಲೆ ವೆಚ್ಚ ಮಾಡಿ, ತಮ್ಮ ಚಿಕಿತ್ಸಾ ದರಗಳನ್ನು ಮೂರ್ನಾಲ್ಕು ಪಟ್ಟು ಹೆಚ್ಚಿಸಿಕೊಳ್ಳಬೇಕು, ಅಥವಾ ವಿಮೆಯುಳ್ಳ ತಮ್ಮ ರೋಗಿಗಳಿಗೆ ಚಿಕಿತ್ಸೆ ನೀಡುವ ಅವಕಾಶದಿಂದ ವಂಚಿತರಾಗಬೇಕು; ಇವೆರಡರಲ್ಲಿ ಯಾವುದನ್ನು ಆಯ್ದುಕೊಂಡರೂ ಕೆಲವೇ ದಿನಗಳಲ್ಲಿ ಅವು ಬಾಗಿಲು ಮುಚ್ಚುವ ದುಸ್ಥಿತಿಗೆ ಸಿದ್ಧರಾಗಿರಬೇಕು.




ತೊಂಬತ್ತರ ದಶಕದಿಂದೀಚೆಯ ಖಾಸಗೀಕರಣದ ನೀತಿಯಲ್ಲಿ ವೈದ್ಯಕೀಯ ಶಿಕ್ಷಣವೂ ಖಾಸಗೀಕರಣಗೊಳ್ಳುತ್ತಾ ಸಾಗಿದೆ; ಆ ಬಳಿಕ ಆರಂಭಗೊಂಡಿರುವ ವೈದ್ಯಕೀಯ ಕಾಲೇಜುಗಳಲ್ಲಿ ಶೇ. ೭೦ಕ್ಕೂ ಹೆಚ್ಚು ಕಾಲೇಜುಗಳು ಖಾಸಗಿ ರಂಗದಲ್ಲೇ ಇವೆ. ಈಗ ದೇಶದಲ್ಲಿರುವ ೪೯೭ ವೈದ್ಯಕೀಯ ಕಾಲೇಜುಗಳಲ್ಲಿ ೨೫೫ ಕಾಲೇಜುಗಳು ಹಾಗೂ ಒಟ್ಟು ೬೦೬೮೦ ಎಂಬಿಬಿಎಸ್ ಸೀಟುಗಳಲ್ಲಿ ೨೭೫೨೦ ಸೀಟುಗಳು ಖಾಸಗಿ ಆಡಳಿತಗಳ ನಿಯಂತ್ರಣದಲ್ಲಿವೆ. ಈ ಖಾಸಗಿ ಕಾಲೇಜುಗಳು ಲಕ್ಷಗಟ್ಟಲೆ ಕೊಟ್ಟವರಿಗೆ ವೈದ್ಯಕೀಯ ಸೀಟುಗಳನ್ನು ಮಾರುವುದಕ್ಕೆ ವ್ಯವಸ್ಥೆಗಳನ್ನು ಮಾಡಿಕೊಂಡಿದ್ದು, ಪ್ರತಿಭಾವಂತರಿಗಷ್ಟೇ ಸೀಟುಗಳನ್ನು ನೀಡುವುದಕ್ಕೆ ಎಲ್ಲಾ ಬಗೆಯ ಅಡ್ಡಿಗಳನ್ನುಂಟುಮಾಡುತ್ತಿವೆ. ಕೇಂದ್ರೀಕೃತ ಸಾಮಾನ್ಯ ಪ್ರವೇಶ ಪರೀಕ್ಷೆಗಳು ಬಂದಾಗ ಅವಕ್ಕೆ ಪರ್ಯಾಯವಾಗಿ ತಾವೇ ಪರೀಕ್ಷೆಗಳನ್ನು ನಡೆಸಿ ಸೀಟು ಹಂಚಿಕೆ ಮಾಡಿದ್ದ ಈ ಕಾಲೇಜುಗಳು, ಈಗ ಸರ್ವೋಚ್ಚ ನ್ಯಾಯಾಲಯದ ಆಣತಿಯಂತೆ ನೀಟ್ ಫಲಿತಾಂಶಗಳ ಆಧಾರದಲ್ಲೇ ಸೀಟು ಹಂಚಿಕೆ ಮಾಡಬೇಕಾದ ಸನ್ನಿವೇಶದಲ್ಲಿ ಸೀಟುಗಳ ಶುಲ್ಕವನ್ನು ವಿಪರೀತವಾಗಿ ಹೆಚ್ಚಿಸಿ ದುಡ್ಡಿದ್ದವರಿಗಷ್ಟೇ ಸೀಟು ದೊರೆಯುವಂತೆ ಮಾಡುತ್ತಿವೆ. ಈ ವರ್ಷ ಎಂಬಿಬಿಎಸ್ ವ್ಯಾಸಂಗಕ್ಕೆ ವಾರ್ಷಿಕ ೬ರಿಂದ ೩೦ ಲಕ್ಷದಷ್ಟು (ಪೂರ್ಣ ವ್ಯಾಸಂಗಕ್ಕೆ ೩೦ಲಕ್ಷದಿಂದ ಒಂದೂವರೆ ಕೋಟಿ) ಶುಲ್ಕವನ್ನು ನಿಗದಿಪಡಿಸಲಾಗಿದ್ದು, ನೀಟ್‌ನಲ್ಲಿ ಅತಿ ನಿಕೃಷ್ಟ ಶ್ರೇಣಿಯಿರುವ ವಿದ್ಯಾರ್ಥಿಗಳು ಈ ವಿಪರೀತ ಶುಲ್ಕವನ್ನು ತೆತ್ತು ಸೀಟು ಪಡೆಯಬಹುದಾದ ವ್ಯವಸ್ಥೆಯನ್ನು ಈ ಕಾಲೇಜುಗಳು ಮಾಡಿವೆ. ಸರಕಾರವೂ ಕೂಡ ಇದಕ್ಕೆ ಪೂರಕವಾದ ನಿಯಮಗಳನ್ನು ಮಾಡುತ್ತಿದೆ; ನೀಟ್ ಆಧಾರಿತ ಪ್ರವೇಶಾತಿಗೆ ಅರ್ಹತೆಯನ್ನು ಶೇ. ೫೦ ಅಂಕಗಳ ಬದಲಿಗೆ ಉನ್ನತ ಶ್ರೇಯಾಂಕಗಳಿರುವ ಶೇ. ೫೦ ವಿದ್ಯಾರ್ಥಿಗಳು ಎಂದು ಮಾಡಲಾಗಿದ್ದು, ಈ ವರ್ಷ ಮೀಸಲಾತಿಯಿಲ್ಲದ ವರ್ಗದಲ್ಲಿ ೭೨೦ಕ್ಕೆ ಕೇವಲ ೧೧೯ ಅಂಕಗಳನ್ನು ಪಡೆದವರೂ ಪ್ರವೇಶ ಪಡೆಯುವಂತಾಗಿದೆ, ಪದವಿಪೂರ್ವ ಪರೀಕ್ಷೆಯಲ್ಲಿ ಅತಿ ಕಡಿಮೆ ಅಂಕಗಳನ್ನು ಪಡೆದವರೂ, ಪ್ರವೇಶ ಪರೀಕ್ಷೆಯಲ್ಲಿ ಕೆಲವು ವಿಷಯಗಳಲ್ಲಿ ಸೊನ್ನೆ ಸಂಪಾದಿಸಿದವರೂ ವೈದ್ಯಕೀಯ ಪ್ರವೇಶವನ್ನು ಗಿಟ್ಟಿಸಿಕೊಂಡಿದ್ದಾರೆಂದು ವರದಿಗಳಾಗಿವೆ. ಪ್ರತಿಭಾವಂತರು ವಂಚಿತರಾಗಿ, ಸೊನ್ನೆ ಪಡೆದವರೇ ವೈದ್ಯರಾಗುವ ಇಂಥ ವ್ಯವಸ್ಥೆಯಲ್ಲಿ ವೈದ್ಯರಾಗುವವರ ಗುಣಮಟ್ಟಗಳು ಕಳಪೆಯಾಗಿರುತ್ತವೆ ಎಂದು ಪ್ರತ್ಯೇಕವಾಗಿ ಹೇಳುವ ಅಗತ್ಯವೇ ಇಲ್ಲ.

ವೈದ್ಯಕೀಯ ಶಿಕ್ಷಣವನ್ನು ಖಾಸಗಿ ಆಡಳಿತಗಳ ಕೈಗಿತ್ತು ಬೆಳೆಸುವಲ್ಲಿ ಭಾರತೀಯ ವೈದ್ಯಕೀಯ ಪರಿಷತ್ತು (ಎಂಸಿಐ) ಮತ್ತು ಬಹುತೇಕ ಎಲ್ಲಾ ಸರಕಾರಗಳಿಗೂ ಪಾಲಿದೆ. ವೈದ್ಯಕೀಯ ಪ್ರವೇಶಾತಿಯಲ್ಲಿ ಪ್ರತೀ ವರ್ಷ ಹತ್ತು ಸಾವಿರ ಕೋಟಿಗೂ ಹೆಚ್ಚು ಕಪ್ಪು ಹಣದ ಬಳಕೆಯಾಗುತ್ತದೆ ಎಂಬ ವರದಿಗಳಾಗಿದ್ದವು; ಜೊತೆಗೆ, ಕಳೆದ ಎರಡು ದಶಕಗಳಲ್ಲಿ ಪ್ರತೀ ವರ್ಷ ಸರ್ವೋಚ್ಚ ನ್ಯಾಯಾಲಯದಲ್ಲಿ ವೈದ್ಯಕೀಯ ಕಾಲೇಜುಗಳ ಪ್ರವೇಶಾತಿಯ ಬಗ್ಗೆ ಒಂದಿಲ್ಲೊಂದು ಪ್ರಕರಣಗಳು ನಡೆದಿದ್ದು, ಹತ್ತು ಹಲವು ಹೆಸರಾಂತ ವಕೀಲರು ಈ ಖಾಸಗಿ ಕಾಲೇಜುಗಳನ್ನು ಪ್ರತಿನಿಧಿಸುತ್ತಿದ್ದರೆಂದರೆ ಈ ಖಾಸಗಿ ವೈದ್ಯಕೀಯ ಕಾಲೇಜುಗಳ ವ್ಯವಹಾರವೆಷ್ಟು, ಅದಕ್ಕಾಗಿ ಅವು ಪಡುತ್ತಿರುವ ಪಾಡೆಷ್ಟು ಎನ್ನುವುದು ಅರ್ಥವಾಗುತ್ತದೆ. ಅಷ್ಟೊಂದು ಮೌಲ್ಯವುಳ್ಳ ವೈದ್ಯಕೀಯ ಶಿಕ್ಷಣವನ್ನು ಇನ್ನಷ್ಟು ಲಾಭದಾಯಕವಾಗಿಸುವುದಕ್ಕೆ, ಇನ್ನಷ್ಟು ದೊಡ್ಡ ಬಂಡವಾಳವುಳ್ಳವರಿಗೆ ಅದರಲ್ಲಿ ಅವಕಾಶ ನೀಡುವುದಕ್ಕೆ ಈಗಿನ ಕೇಂದ್ರ ಸರಕಾರವು ಯೋಜನೆಯನ್ನು ಹಾಕಿಕೊಂಡಿದೆ. ಇಷ್ಟು ವರ್ಷಗಳ ಕಾಲ ಎಂಸಿಐ ಅನ್ನು ತಮ್ಮಿಷ್ಟದಂತೆ ಬಳಸಿಕೊಂಡು, ಬಯಸಿದ ರಾಜಕಾರಣಿ–ವ್ಯಾಪಾರಸ್ಥರೆಲ್ಲರೂ ವೈದ್ಯಕೀಯ ಕಾಲೇಜುಗಳನ್ನು ತೆರೆದಾದ ಬಳಿಕ, ಅದೇ ಎಂಸಿಐ ಮೇಲೆ ಭ್ರಷ್ಟಾಚಾರದ ಆರೋಪ ಹೊರಿಸಿ, ಚುನಾಯಿತ ಸಂಸ್ಥೆಯಾದ ಅದನ್ನು ವಿಸರ್ಜಿಸಿ, ಅದರ ಜಾಗದಲ್ಲಿ ಕೇಂದ್ರ ಸರಕಾರದಿಂದಲೇ ನೇಮಿಸಲ್ಪಟ್ಟ ಸದಸ್ಯರುಳ್ಳ ರಾಷ್ಟ್ರೀಯ ವೈದ್ಯಕೀಯ ಪರಿಷತ್ತನ್ನು (ಎನ್‌ಎಂಸಿ) ರಚಿಸುವುದಕ್ಕಾಗಿ ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಲಾಗಿತ್ತು. (ಅದೇ ಸಮಯದಲ್ಲಿ, ಎಂಸಿಐಯಲ್ಲಿ ಭ್ರಷ್ಟಾಚಾರವೆಸಗಿದ್ದಕ್ಕಾಗಿ ಸಿಬಿಐ ತನಿಖೆಯನ್ನು ಎದುರಿಸುತ್ತಿದ್ದ ಡಾ॥ ಕೇತನ್ ದೇಸಾಯಿ ಅವರ ಮೇಲೆ ಮೊಕದ್ದಮೆ ಹೂಡುವುದಕ್ಕೆ ಗುಜರಾತ್ ಸರಕಾರವು ಅನುಮತಿ ನೀಡದೆ, ದಿಲ್ಲಿ ನ್ಯಾಯಾಲಯದಲ್ಲಿ ಅದನ್ನೀಗ ಕೈಬಿಡಲಾಗಿದೆ) ಈ ಮೊದಲು, ಲಾಭದಲ್ಲಿ ಆಸಕ್ತಿಯಿಲ್ಲದ ದತ್ತಿ ಸಂಸ್ಥೆಗಳಷ್ಟೇ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸಬಹುದು, ಹಾಗೂ ಶುಲ್ಕವು ನಿಯಂತ್ರಣ ಸಮಿತಿಯ ಒಪ್ಪಿಗೆಗೆ ಅನುಸಾರವಾಗಿರಬೇಕು ಎಂಬ ನಿಯಮಗಳು ಕಾಗದದಲ್ಲಾದರೂ ಇದ್ದವು; ಆದರೆ, ಈ ಹೊಸ ವ್ಯವಸ್ಥೆಯಡಿ ಲಾಭ ಮಾಡಿಕೊಳ್ಳುವ ಉದ್ದೇಶವುಳ್ಳವರೂ ವೈದ್ಯಕೀಯ ಕಾಲೇಜುಗಳನ್ನು ಸ್ಥಾಪಿಸಬಹುದು ಹಾಗೂ ಶೇ. ೪೦ರಷ್ಟು ಸೀಟುಗಳಿಗೆ ಯಾವುದೇ ಶುಲ್ಕ ನಿಯಂತ್ರಣವಿರುವುದಿಲ್ಲ ಎಂಬುದನ್ನು ನೇರವಾಗಿಯೇ ಹೇಳಲಾಗಿದೆ. ಜೊತೆಗೆ, ಆಯುಷ್ ಪದ್ಧತಿಗಳನ್ನು ಕಲಿತವರಿಗೆ ಕೆಲವು ತಿಂಗಳ ತರಬೇತಿ ನೀಡಿ ಆಧುನಿಕ ವೈದ್ಯರಾಗಿ ವೃತ್ತಿ ನಡೆಸುವುದಕ್ಕೆ ಅವಕಾಶ ನೀಡುವ ಪ್ರಸ್ತಾಪವೂ ಕರಡು ಮಸೂದೆಯಲ್ಲಿತ್ತು. ದೇಶದ ವೈದ್ಯರ ಪ್ರತಿಭಟನೆಗಳು ಹಾಗೂ ಬಹುಶಃ ಆಯುಷ್ಮಾನ್ ಭಾರತ ಯೋಜನೆಗೆ ತೊಡಕಾಗಬಹುದೆಂಬ ಆತಂಕಗಳಿಂದಾಗಿ ಸದ್ಯಕ್ಕೆ ಕೇಂದ್ರ ಸರಕಾರವು ಆ ಮಸೂದೆಯನ್ನು ಬದಿಯಲ್ಲಿಟ್ಟಿದೆ.

ಆಧುನಿಕ, ನುರಿತ ವೈದ್ಯರಿಗೆ ಸಂಬಳ–ಸವಲತ್ತುಗಳನ್ನು ಕೊಡುವ ಬದಲು

ಆಯುಷ್ ಪದ್ಧತಿಗಳಲ್ಲಿ ತರಬೇತಾದವರನ್ನು ನೇಮಿಸುವ ಅಪಾಯಕಾರಿ ಕೆಲಸವನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕಳೆದೊಂದು ದಶಕದಿಂದ ಮಾಡುತ್ತಿವೆ; ಕರ್ನಾಟಕವೂ ಸೇರಿದಂತೆ ಕೆಲವು ರಾಜ್ಯಗಳು ಆಯುಷ್ ಚಿಕಿತ್ಸಕರು ಆಧುನಿಕ ಔಷಧಗಳನ್ನು ಬಳಸಬಹುದೆಂಬ ನ್ಯಾಯಬಾಹಿರವಾದ ಸುತ್ತೋಲೆಗಳನ್ನೂ ಹೊರಡಿಸಿದ್ದವು, ಪ್ರತಿಭಟನೆ ಹಾಗೂ ನ್ಯಾಯಾಲಯಗಳ ವ್ಯಾಜ್ಯಗಳಿಂದ ಕರ್ನಾಟಕದಲ್ಲೂ, ಇತರ ಹಲವೆಡೆಗಳಲ್ಲೂ ಅವನ್ನು ತಡೆಯಲಾಗಿತ್ತು. ಆಯುಷ್ ತರಬೇತಾದವರನ್ನು ಕಡಿಮೆ ಸಂಬಳಕ್ಕೆ ನೇಮಿಸಿ ಹಣವುಳಿಸಿಕೊಳ್ಳುವ ಪ್ರಯತ್ನಗಳಲ್ಲಿ ಹಲವು ಆಧುನಿಕ ಆಸ್ಪತ್ರೆಗಳೂ ಭಾಗಿಯಾಗಿವೆ. ಎನ್‌ಎಂಸಿ ಮಸೂದೆಯಲ್ಲಿ ಆಯುಷ್ ಪದ್ಧತಿಗಳವರಿಗೆ ಸೇತು–ಶಿಕ್ಷಣ ನೀಡಿ ಅಧುನಿಕ ವೈದ್ಯರಾಗಿ ಪರಿವರ್ತಿಸುವ ಯೋಜನೆಯು ಈ ಆಯುಷ್ ಪದ್ಧತಿಗಳವರನ್ನು ಹೀಗೆ ಅಲ್ಪ ಸಂಬಳಕ್ಕೆ ದುಡಿಸಿಕೊಳ್ಳುವುದನ್ನು ನ್ಯಾಯಬದ್ಧಗೊಳಿಸುವ ಉದ್ದೇಶವನ್ನೇ ಹೊಂದಿತ್ತೆನ್ನಬಹುದು. ಯೋಗ, ಗೋಮೂತ್ರ, ಸೆಗಣಿ ಇತ್ಯಾದಿ ಚಿಕಿತ್ಸೆಯೇ ಅಲ್ಲದವುಗಳನ್ನು ಸರ್ವರೋಗ ನಿವಾರಕ ಚಿಕಿತ್ಸೆಗಳೆಂದು ಭರ್ಜರಿ ಪ್ರಚಾರ ನಡೆಸುತ್ತಿರುವುದು ಕೂಡ ಆಧುನಿಕ ವೈದ್ಯವಿಜ್ಞಾನದ ಸೌಲಭ್ಯಗಳನ್ನು ಒದಗಿಸಲಾಗದ ವೈಫಲ್ಯವನ್ನು ಮುಚ್ಚಿಹಾಕಿ ಜನರನ್ನು ಮರುಳುಗೊಳಿಸುವ ಹುನ್ನಾರವೆಂದೇ ಹೇಳಬಹುದು.

ಗ್ರಾಮೀಣ ಪ್ರದೇಶಗಳಲ್ಲಿ ಅತ್ಯಗತ್ಯವಾದ ಮೂಲಭೂತ ಆರೋಗ್ಯ ಸೇವೆಗಳನ್ನು ಖಾತರಿಪಡಿಸುವ ಬದಲು ಆಯುಷ್ ಚಿಕಿತ್ಸಕರು, ದಾದಿಯರು ಮೊದಲಾದವರಿಗೆ ತರಬೇತಿ ನೀಡಿ ನಿಯೋಜಿಸುವ ಯೋಜನೆಯು ಅಪಾಯಕಾರಿಯಷ್ಟೇ ಅಲ್ಲ, ಆ ಪ್ರದೇಶಗಳಲ್ಲಿ ವಾಸಿಸುತ್ತಿರುವ ದೇಶದ ಶೇ. ೭೦ರಷ್ಟು ಜನತೆಗೆ ಮಾಡುತ್ತಿರುವ ಅವಮಾನವೂ ಆಗಿದೆ. ಈಗ ಅಲ್ಲಿರುವ ಒಂದೂವರೆ ಲಕ್ಷ ಉಪಕೇಂದ್ರಗಳಿಗೆ ಅತ್ಯಲ್ಪ ಹಣವೊದಗಿಸಿ ಆರೋಗ್ಯ–ಸೌಖ್ಯಾಲಯಗಳಾಗಿ ಅಭಿವೃದ್ಧಿಪಡಿಸಲಾಗುವುದೆಂಬ ಭರವಸೆಯೂ ಕೂಡ ಮರುಳು ಮಾಡುವ ತಂತ್ರವಷ್ಟೇ ಆಗಿದೆ. ಜೊತೆಗೆ, ಹತ್ತು ಕೋಟಿ ಬಡ ಕುಟುಂಬಗಳಿಗೆ ತಲಾ ೫ ಲಕ್ಷ ಮೊತ್ತದ ಆರೋಗ್ಯ ಸುರಕ್ಷಾ ಯೋಜನೆಯು ಕೂಡ ಕಾಗದದ ಘೋಷಣೆಯಾಗಿಯೇ ಉಳಿಯಲಿದೆ ಮತ್ತು ಮೇಲೆ ಹೇಳಿರುವಂತೆ ಸಣ್ಣ ಹಾಗೂ ಮಧ್ಯಮ ಮಟ್ಟದ ಖಾಸಗಿ ಆಸ್ಪತ್ರೆಗಳು ಅದರಲ್ಲಿ ಭಾಗಿಯಾದರೆ ಮುಚ್ಚಿಹೋಗುವ ಸ್ಥಿತಿಯೊದಗಲಿದೆ. ಆದರೆ ಈ ಎಲ್ಲಾ ಯೋಜನೆಗಳಿಗೆ ಆಧಾರ್ ಜೋಡಣೆಯನ್ನು ಕಡ್ಡಾಯ ಮಾಡಿರುವುದನ್ನು ನೋಡಿದರೆ, ಇವುಗಳ ಹಿಂದೆ ಬೇರೆಯೇ ಉದ್ದೇಶವಿರುವ ಸಂಶಯಗಳೂ ಏಳುತ್ತವೆ.

ಈ ಸರಕಾರವು ಫೆಬ್ರವರಿ ೨೦೧೮ರಲ್ಲಿ ಪ್ರಕಟಿಸಿದ ಆರೋಗ್ಯದ ಮಿಂದಾಖಲೆಗಳ ಮಾನದಂಡಗಳು, ಕಳೆದ ವರ್ಷ ಪ್ರಕಟಿಸಿದ ಆರೋಗ್ಯ ನೀತಿ, ಮತ್ತು ಅದರೊಳಗೆ ಪ್ರಸ್ತಾಪಿಸಲಾಗಿರುವ ರಾಷ್ಟ್ರೀಯ ಗಣಕೀಕೃತ ಆರೋಗ್ಯ ಪ್ರಾಧಿಕಾರ ಇತ್ಯಾದಿ ಎಲ್ಲಾ ಯೋಜನೆಗಳಲ್ಲಿ ಆಧಾರ್ ಜೋಡಣೆಗೆ ಪ್ರಾಧಾನ್ಯತೆ ನೀಡಲಾಗಿದ್ದು, ಆಸ್ಪತ್ರೆಗಳಿಂದ, ವೈದ್ಯರಿಂದ, ಧರಿಸುವ ಸಾಧನಗಳು ಮತ್ತು ಬಳಸುವ ಫೋನ್‌ಗಳಿಂದ, ಹೀಗೆ ಎಲ್ಲೆಡೆಗಳಿಂದ ದೇಶದ ಎಲ್ಲಾ ನಾಗರಿಕರ ಆರೋಗ್ಯ ಮಾಹಿತಿಯನ್ನು ಸಂಗ್ರಹಿಸುವ ಬಗ್ಗೆ ಹೇಳಲಾಗಿದೆ, ಮತ್ತು ಈ ಅಗಾಧ ಮಾಹಿತಿಯನ್ನು ಖಾಸಗಿ ಕಂಪೆನಿಗಳೊಂದಿಗೆ ಹಂಚಿಕೊಳ್ಳುವುದಕ್ಕೆ ಅವಕಾಶವನ್ನೂ ಕಲ್ಪಿಸಲಾಗಿದೆ. ಈಗೆರಡು ತಿಂಗಳ ಹಿಂದೆ ನೀತಿ ಆಯೋಗವು ಪ್ರಕಟಿಸಿರುವ ರಾಷ್ಟ್ರೀಯ ಆರೋಗ್ಯ ಬಣವೆ (National Health Stack) ಎಂಬ ಕರಡಿನಲ್ಲಿ ಇನ್ನೂ ಭಯಾನಕವಾದ ಸಂಗತಿಗಳನ್ನು ಹೇಳಲಾಗಿದೆ. ನೀತಿ ಆಯೋಗದ ಆರೋಗ್ಯ ವಿಭಾಗದ ಸದಸ್ಯ ಡಾ॥ ವಿನೋದ್ ಪಾಲ್ ಅವರು ಕರಡಿನ ಮೊದಲ ಪುಟದಲ್ಲಿ ರಾಷ್ಟ್ರೀಯ ಆರೋಗ್ಯ ಬಣವೆಯು ದೂರದರ್ಶಿತ್ವದ, ಗಣಕೀಯ ಚೌಕಟ್ಟಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರಕಾರಗಳು ಅದನ್ನು ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರಗಳಲ್ಲಿ ಬಳಸಬಹುದೆಂದೂ, ಕ್ಷಿಪ್ರವಾದ, ವಿಚ್ಛಿದ್ರಕಾರಿಯಾದ ಬದಲಾವಣೆಗಳನ್ನೂ, ಅನಿರೀಕ್ಷಿತವಾದ ತಿರುವುಗಳನ್ನೂ ಕಾಣಲಿರುವ (ಆರೋಗ್ಯ) ಕ್ಷೇತ್ರಕ್ಕೆ ಅದು ಭವಿಷ್ಯದ ಮಾಹಿತಿ ತಂತ್ರಜ್ಞಾನದ ಮಾರ್ಗೋಪಾಯಗಳನ್ನು ಒದಗಿಸಲಿದೆ ಎಂದೂ ಬರೆದಿದ್ದರೆ, ಕರಡಿನ ಎರಡನೇ ಪುಟದಲ್ಲಿ ಆಯೋಗದ ಮುಖ್ಯ ಆಡಳಿತಾಧಿಕಾರಿ ಅಮಿತಾಭ್ ಕಾಂತ್ ಅವರು ಇನ್ನೂ ಒಂದಷ್ಟು ಮುಂದೆ ಹೋಗಿ, ಪ್ರಸ್ತಾವಿತ ಆರೋಗ್ಯ ಬಣವೆಯು ಶಕ್ತಿಶಾಲಿ ಸಾಧನ–ವಿಧಾನಗಳನ್ನು ಬಳಸಿ ಅಗಾಧ ಮಾಹಿತಿಯ ವಿಶ್ಲೇಷಣೆ, ಯಂತ್ರಕಲಿಕೆ, ಕೃತಕ ಬುದ್ಧಿಮತ್ತೆ, ಮತ್ತು ಮುಂದಕ್ಕೆ, ನೀತಿ ನಿರೂಪಣೆ ಮಾಡಬಲ್ಲ ಅತ್ಯಾಧುನಿಕ ಗಣಕೀಯ ಭಾಷೆಗಳನ್ನು ಅಭಿವೃದ್ಧಿಪಡಿಸುವವರೆಗೆ ಬೆಳೆಯಲಿದೆ ಎಂದೂ, ಆ ಮೂಲಕ, ಜನತೆ, ಹಣ ಮತ್ತು ಮಾಹಿತಿಗಳ ಹರಿವನ್ನು ಮರುವಿನ್ಯಾಸಗೊಳಿಸಿ, ಎಲ್ಲಾ ರಾಜ್ಯಗಳಿಗೆ ಮತ್ತು ಯೋಜನೆಗಳಿಗೆ ಆರೋಗ್ಯದ ವಿಚಾರದಲ್ಲಿ ಸಮಗ್ರವಾದ ತಳಹದಿಯನ್ನು ಒದಗಿಸಿ, ಆರೋಗ್ಯ ರಕ್ಷಣೆಯ ವೆಚ್ಚವನ್ನು ಗಣನೀಯವಾಗಿ ಇಳಿಸಿ, ನಗದುರಹಿತವಾಗಿಸಿ, ಆರೋಗ್ಯ ಸುಧಾರಣೆಗೆ ನೆರವಾಗಲಿದೆ ಎಂದೂ ಬರೆದಿದ್ದಾರೆ. ಅಂದರೆ, ಎಲ್ಲೆಡೆಗಳಿಂದ ಒತ್ತಾಯಪೂರ್ವಕವಾಗಿ, ಅಥವಾ ಗುಟ್ಟಾಗಿಯೇ, ಆರೋಗ್ಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಎಳೆದು ಪಡೆಯುವುದು, ಆ ಅಗಾಧ ಮಾಹಿತಿಯನ್ನು ಖಾಸಗಿಯವರಿಗೆ ಒಪ್ಪಿಸುವುದು, ಅವರ ಮೂಲಕ ಯಂತ್ರಕಲಿಕೆಯ ಕೃತಕ ಬುದ್ಧಿಮತ್ತೆಯಿಂದ ವಿಶ್ಲೇಷಿಸುವುದಕ್ಕೆ ಬಳಸಿಕೊಳ್ಳುವುದು, ಮತ್ತು ಕೊನೆಗೆ, ಆ ಯಂತ್ರಗಳಿಗೆ ನೀತಿ ನಿರೂಪಣೆಯ ಗಣಕೀಯ ಭಾಷೆಯನ್ನೂ ಸಿದ್ಧಪಡಿಸಿ, ಅವುಗಳ ಮೂಲಕವೇ ನೀತಿಗಳನ್ನು ತಯಾರಿಸಿ, ಸಂಸತ್ತು ಹಾಗೂ ವಿಧಾನಮಂಡಲಗಳ ಜಾಣ್ಮೆಯನ್ನೇ ನಿರಾಕರಿಸಿ, ಈ ಕೃತಕ ಬುದ್ಧಿಮತ್ತೆಯ ನೀತಿಗಳನ್ನು ಹೇರುವ ಮೂಲಕ ಸಂಸದೀಯ ಪ್ರಜಾಪ್ರಭುತ್ವವನ್ನು ಧ್ವಂಸಗೊಳಿಸುವುದು ಇವೆಲ್ಲದರೊಳಗೆ ಅಡಗಿರುವ ತೀರಾ ಅಮಾನವೀಯವಾದ ಮಹಾ ಯೋಜನೆಯಂತೆ ಕಾಣುತ್ತದೆ. ಕಲಿತವರಾರೂ ಕಾಣಲೊಲ್ಲದ ಸರಕಾರಗಳು ಇಂಥ ಯೋಜನೆಗಳನ್ನು ಪೆದ್ದುತನದಿಂದ ಒಪ್ಪಿಕೊಳ್ಳುತ್ತಿವೆಯೇನೋ ಅನಿಸುತ್ತದೆ.



ದೇಶದ ಆರೋಗ್ಯ ಸೇವೆಗಳನ್ನು ಇಂಥ ಬರ್ಬರತೆಯಿಂದ ರಕ್ಷಿಸಬೇಕಾದರೆ ಮೊತ್ತಮೊದಲು ಜನಸಾಮಾನ್ಯರಿಂದ ಹಿಡಿದು ಪ್ರಜಾಸತ್ತೆಯ ಉಳಿವಿಗಾಗಿ ದನಿಯೆತ್ತುತ್ತಿರುವ ವ್ಯಕ್ತಿಗಳು ಮತ್ತು ಸಂಘಟನೆಗಳು ಹಾಗೂ ಎಲ್ಲಕ್ಕಿಂತ ಮುಖ್ಯವಾಗಿ ಆಧುನಿಕ ವೈದ್ಯರು ಮತ್ತವರ ಎಲ್ಲಾ ಸಂಘಟನೆಗಳವರೆಗೆ ಎಲ್ಲರೂ ಎಚ್ಚೆತ್ತುಕೊಳ್ಳಬೇಕಾಗಿದೆ. ಸರಕಾರಿ ಆರೋಗ್ಯ ಸೇವೆಗಳನ್ನು ಬಲಪಡಿಸುವುದು, ರಾಷ್ಟ್ರೀಯ ಉತ್ಪನ್ನದ ಕನಿಷ್ಠ ಶೇ. ೬ರಷ್ಟನ್ನು ಆರೋಗ್ಯ ಸೇವೆಗಳಿಗೆ ಒದಗಿಸುವುದು; ಅಲ್ಲಿಯವರೆಗೆ, ಸಣ್ಣ ಮತ್ತು ಮಧ್ಯಮ ಮಟ್ಟದ ಖಾಸಗಿ ಆಸ್ಪತ್ರೆಗಳಿಗೆ ಮಿತದರದಲ್ಲಿ ಸೇವೆಯೊದಗಿಸಲು ಅಡ್ಡಿಯಾಗದಿರುವುದು, ಸಾಧ್ಯವಿದ್ದರೆ, ಗ್ರಾಮೀಣ ಹಾಗೂ ಹಿಂದುಳಿದ ಪ್ರದೇಶಗಳಲ್ಲಿ ಅಂತಹ ಆಸ್ಪತ್ರೆಗಳನ್ನು ಉತ್ತೇಜಿಸುವುದು; ವೈದ್ಯಕೀಯ ಶಿಕ್ಷಣವನ್ನು ರಾಷ್ಟ್ರೀಕರಿಸುವುದು ಅಥವಾ ಪಾರದರ್ಶಕವಾಗಿ, ಸಂಪೂರ್ಣವಾಗಿ ನಿಯಂತ್ರಿಸಿ ಪ್ರತಿಭಾವಂತರಿಗಷ್ಟೇ ಅವಕಾಶವೊದಗಿಸುವುದು ಮತ್ತು ಶಿಕ್ಷಣದ ಗುಣ ಮಟ್ಟವನ್ನು ಉತ್ತಮ ಪಡಿಸುವುದು; ಆರೋಗ್ಯ ಸೇವೆಗಳಲ್ಲೂ, ವೈದ್ಯಕೀಯ ಶಿಕ್ಷಣದಲ್ಲೂ ಕಾರ್ಪರೇಟ್ ವಲಯದ ದಾಳಿಯನ್ನು ತಡೆಯುವುದು; ಆಯುಷ್ಮಾನ್ ಭಾರತ, ಆರೋಗ್ಯ ಕರ್ನಾಟಕ ಮುಂತಾದ ಸರಕಾರಿ ಹಣದಲ್ಲಿ ಕಾರ್ಪರೇಟ್ ಆಸ್ಪತ್ರೆಗಳಲ್ಲಿ ಸೀಮಿತ ಚಿಕಿತ್ಸೆಗಳನ್ನೊದಗಿಸುವ ಯೋಜನೆಗಳ ಹೆಸರಲ್ಲಿ ಜನರನ್ನು ಮರುಳು ಮಾಡದೆ, ಸಾರ್ವಜನಿಕ ಆರೋಗ್ಯ ಸೇವೆಗಳಲ್ಲೇ ಹಣ ಹೂಡಿ, ಸಮಗ್ರ ಆರೋಗ್ಯ ಸೇವೆಗಳನ್ನು ನಿಜಾರ್ಥದಲ್ಲಿ ಒದಗಿಸುವುದು ಎಲ್ಲರ ಆದ್ಯತೆಯಾಗಬೇಕು.

ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಬಿ.
"ಅಕ್ಷಯ", ಕದ್ರಿ ಕೈಬಟ್ಟಲ್, ಅಲ್ವಾರಿಸ್ ರಸ್ತೆ, ಮಂಗಳೂರು – ೫೭೫ ೦೦೨



# ಗುರು–ಶುಕ್ರಗಳ ವಿದಾಯ

**ಕ**ಳೆದ ತಿಂಗಳವರೆಗೂ ಸಂಜೆಯ ಆಕಾಶದಲ್ಲಿ ಕಣ್ಣು ಕೋರೈಸುವಂತೆ ಬೆಳಗುತ್ತಿದ್ದ ಶುಕ್ರ ಈ ತಿಂಗಳಲ್ಲಿ ಕ್ರಮೇಣ ದಿಗಂತದ ಅಂಚಿಗೆ ಸರಿಯಲಿದೆ. ಈ ಚಲನೆಯನ್ನು ಗಮನಿಸುವುದೇ ಒಂದು ಒಳ್ಳೆಯ ಪ್ರಯೋಗ ಎನ್ನಬಹುದು. ಏಕೆಂದರೆ ಗುರುಗ್ರಹ ಕೂಡ ದಿಗಂತದ ಅಂಚಿಗೆ ಧಾವಿಸುತ್ತಿರುತ್ತದೆ. ಇವೆರಡರ ಚಲನೆಯ ವ್ಯತ್ಯಾಸ ಸ್ಫುಟವಾಗಿ ಗೋಚರಿಸುತ್ತದೆ. ಈ ಮಧ್ಯೆ ಬುಧ ಗ್ರಹ ಪಶ್ಚಿಮದ ಅಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ಅದು ಮಾತ್ರ ದಿಗಂತದಿಂದ ಮೇಲ ಮೇಲಕ್ಕೆ ಏರುತ್ತಿರುವಂತೆ ಕಾಣುತ್ತದೆ. ಈ ಎಲ್ಲ ಸಂಕೀರ್ಣ ಚಲನೆಗಳ ಕಾರಣ ೧೧ ಮತ್ತು ೧೨ರಂದು ಸಂಜೆ ಬಾಲ ಚಂದ್ರನ ಸುತ್ತಲೂ ಈ ಮೂರೂ ಗ್ರಹಗಳು ಕಾಣುತ್ತವೆ. ಈ ಅದ್ಭುತ ಸಮಾಗಮ ಛಾಯಾಗ್ರಹಣಕ್ಕೆ ಸದವಕಾಶವಾಗಲಿದೆ. ೧೩ಕ್ಕೆ ಈ ಗುಂಪು ಅಲ್ಲೇ ಇರುತ್ತದೆಯಾದರೂ ಚಂದ್ರ ಅದನ್ನು ತೊರೆದು ದೂರ ಸಾಗಿರುತ್ತದೆ. ದಿನೇ ದಿನೇ ದಿಗಂತದ ಅಂಚಿಗೆ ಧಾವಿಸುವ ಶುಕ್ರ ೧೬–೧೭ರ ಹೊತ್ತಿಗೇ ಕಾಣೆಯಾಗಿ ಬಿಡುತ್ತದೆ. ೨೬ರಂದು ಯುತಿ ಅಂದರೆ ಸೂರ್ಯನನ್ನು ಹಾದುಹೋಗುವ ಸಂದರ್ಭ. ಇದಾದ ಮೇಲೆ ಮುಂದಿನ ತಿಂಗಳಿನಿಂದ ಬೆಳಗಿನ ಜಾವ ಕಾಣುತ್ತದೆ. ನಿಧಾನವಾಗಿ ಮೇಲಕ್ಕೆ ಏರುತ್ತಿರುವ ಬುಧ ಗ್ರಹ ೨೯ರಂದು ಗುರುಗ್ರಹದ ಜೊತೆಗೂಡುತ್ತದೆ.






೧೧ರ ಸಂಜೆ ಚಂದ್ರ – ಗುರು – ಶುಕ್ರ – ಬುಧ ಪುಟ್ಟ ಗುಂಪು

ಶನಿ ಮತ್ತು ಮಂಗಳಗಳನ್ನು ಸಂಜೆಯ ಆಕಾಶದಲ್ಲಿ ಸುಲಭವಾಗಿ ಗುರುತಿಸಬಹುದು. ಇವು ನೆತ್ತಿಯ ಮೇಲೆಯೇ ಇದ್ದರೂ ನಿಧಾನವಾಗಿ ಪಶ್ಚಿಮಕ್ಕೆ ಸಾಗುತ್ತಿರುವುದನ್ನು ಗುರುತಿಸಬಹುದು. ೧೫ರಂದು ಚಂದ್ರ ಶನಿಯ ಪಕ್ಕವೇ ಕಾಣುವುದು. ೧೯ರಂದು ಮಂಗಳದ ಪಕ್ಕ ಕಾಣುವುದು. ಈ ತಿಂಗಳ ಯಾವುದೇ ಸಂಜೆ ಮೋಡಗಳು ಅವಕಾಶಕೊಟ್ಟರೂ ತಪ್ಪಿಸದೇ ಶನಿ ಇರುವ ಭಾಗವನ್ನು ಗಮನವಿರಿಸಿ ನೋಡಿ. ಅದು ಆಕಾಶಗಂಗೆಯ ಪ್ರವಾಹ. ಅಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚು. ನೆಬ್ಯುಲಾಗಳು, ನಕ್ಷತ್ರ ಗುಚ್ಛಗಳೂ ಹೇರಳವಾಗಿವೆ. ಛಾಯಾಗ್ರಹಣಕ್ಕೆ ಈ ತಿಂಗಳಲ್ಲಿ ಒಳ್ಳೆಯ ಅವಕಾಶಗಳಿವೆ. ಶನಿಗ್ರಹದ ಚಿತ್ರವನ್ನು ಎರಡು ದಿನಗಳಿಗೊಮ್ಮೆ ತೆಗೆಯುತ್ತಾ ಬಂದರೆ ಸುತ್ತಲಿನ ನೆಬ್ಯುಲಾಗಳು (ಎಂ೨೧, ಎಂ೨೦, ಎಂ೨೨, ಎಂ೨೩ – ಈ ಸಂಖ್ಯೆಯವು) ದಾಖಲಾಗುವುವು. ಚಂದ್ರನಿಲ್ಲದ ರಾತ್ರಿಗಳು ಇದಕ್ಕೆ ಸೂಕ್ತ. ಮೆಸಿಯರ್ ಎಂಬ ಖಗೋಳ ವೀಕ್ಷಕನಿಗೆ ಧೂಮಕೇತುಗಳನ್ನು ಹುಡುಕುವುದೇ ವೃತ್ತಿಯಂತಾಗಿತ್ತು. ಇದಕ್ಕಾಗಿ ಆಕಾಶದಲ್ಲಿ ಕಾಣುವ ಹತ್ತಿಯಂತಹ ಕಾಯಗಳ ಪಟ್ಟಿಯನ್ನು ಆತ ತಯಾರಿಸಿಕೊಂಡಿದ್ದನು. ಏಕೆಂದರೆ ಇವು ಧೂಮಕೇತುಗಳಿರಬಹುದು ಎಂಬ ಭ್ರಮೆ ಹುಟ್ಟಿಸುತ್ತಿದ್ದವು. ಆ ಮುಂದೆ ಆತನ ಪಟ್ಟಿ ಬಹಳ ಜನಪ್ರಿಯವಾಯಿತು. ಅಲ್ಲಿರುವ ನಮೂದಿನ ಸಂಖ್ಯೆ ಗುರುತನ್ನಾಗಿ ಈಗಲೂ ಬಳಸುತ್ತಾರೆ. “ಎಂ” ಎಂಬ ಸಂಖ್ಯೆಗಳೆಲ್ಲಾ

(೪೦ನೇ ಪುಟಕ್ಕೆ)



ಡಾ॥ ಎನ್. ಗಾಯತ್ರಿ



# ತೆಲಂಗಾಣ ಹೋರಾಟಗಾರ್ತಿ ಕೋಟೇಶ್ವರಮ್ಮ ಇನ್ನಿಲ್ಲ

**ಕೊಂ**ಡಪಲ್ಲಿ ಕೋಟೇಶ್ವರಮ್ಮನವರ ಮೊಮ್ಮಗಳು ಸುಧಾ ಇದೇ ಸೆಪ್ಟೆಂಬರ್ ೧೯ರಂದು ವಿಶಾಖಪಟ್ಟಣದಿಂದ ನನಗೆ ಫೋನ್ ಮಾಡಿ ಕಳೆದ ರಾತ್ರಿ ಅವರ ಅಜ್ಜಿ ಕೋಟೇಶ್ವರಮ್ಮ ತೀರಿಕೊಂಡ ಸುದ್ದಿ ತಿಳಿಸಿದಾಗ ತಕ್ಷಣ ಏನು ಹೇಳಬೇಕೋ ತೋಚಲಿಲ್ಲ. ಸುದ್ದಿ ನಿಜಕ್ಕೂ ಶಾಕಿಂಗ್ ಆಗಿತ್ತು. ಕಳೆದ ವರ್ಷ ಅದೆಷ್ಟು ಲವಲವಿಕೆಯಿಂದ ಆಕೆ ನಮ್ಮೊಡನೆ ಸಮಯ ಕಳೆದಿದ್ದರು! ಆ ನೆನಪುಗಳ ಗುಂಗಿನಿಂದ ಹೊರಗೆ ಬರಲು ಸಾಕಷ್ಟು ಸಮಯವೇ ಬೇಕಾಯಿತು.

ಎರಡು ವರ್ಷಗಳ ಹಿಂದೆ ಪ್ರಕಟವಾದ ಸ. ರಘುನಾಥ ಕನ್ನಡಕ್ಕೆ ಅನುವಾದಿಸಿರುವ ಕೊಂಡಪಲ್ಲಿ ಕೋಟೇಶ್ವರಮ್ಮ ಅವರ ಆತ್ಮಕಥನ "ಒಂಟಿ ಸೇತುವೆ" ಪುಸ್ತಕವನ್ನು ಓದಿದ ನಂತರ ಈ ಹಿರಿಯ ಸಾಹಸಿ ಜೀವವನ್ನು ನೋಡಲೇಬೇಕೆಂದು ನಿರ್ಧರಿಸಿದೆ. ಕಳೆದ ಸೆಪ್ಟೆಂಬರ್‌ನಲ್ಲಿ ಮೊಮ್ಮಗಳೊಡನೆ ವಾಸಿಸುತ್ತಿದ್ದ ಕೋಟೇಶ್ವರಮ್ಮ ಅವರನ್ನು ವಿಶಾಖಪಟ್ಟಣದ ಅವರ ಮನೆಯಲ್ಲಿ ಭೇಟಿಯಾದೆವು. ನಾವು ಬರುವುದು ಮುಂಚೆಯೇ ಗೊತ್ತಿದ್ದರಿಂದ ನಮಗಾಗಿ ಕಾಯುತ್ತಾ ಹಾಸಿಗೆಯಲ್ಲಿ ಉರುಳಿಕೊಂಡು ಪೇಪರ್ ಓದುತ್ತಿದ್ದ ಅಜ್ಜಮ್ಮ ನಮ್ಮನ್ನು ನೋಡಿದೊಡನೆ ಚಕ್ಕನೆದ್ದು ಪುಟ್ಟ ಹುಡುಗಿಯಂತೆ ಸಡಗರಿಸಿ ಕುಳಿತದ್ದು ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಬೆಂಗಳೂರಿನಲ್ಲಿ ಗೌರಿಯವರ ಕೊಲೆಯಾಗಿ ಆಗಿನ್ನು ಒಂದು ವಾರವಾಗಿತ್ತು, ಅಷ್ಟೇ. ಅದರ ಬಗ್ಗೆ ವಿಷಯ ತಿಳಿಯಲು ಅದೆಷ್ಟು ಕಾತುರತೆ ಮತ್ತು ಕಾಳಜಿ ತೋರಿಸಿದರು! 'ನಿಮಗೆ ಗೌರಿ ಗೊತ್ತೆ?' ಎಂದು ಕೇಳಿದರು. 'ಗೊತ್ತು. ಅವರು ಇವರ ಶಿಷ್ಯೆ'ಎಂದು ಪಕ್ಕದಲ್ಲಿದ್ದ ಡಾ॥ ಜಿ. ಆರ್. ಅವರನ್ನು ತೋರಿಸಿದೆ. ಸರಿ, ಇಡೀ ದಿನ ಅವರು ಮಾತನಾಡಿದ್ದೆಲ್ಲ ಗೌರಿಯವರ ವಿಷಯವನ್ನೇ. ದಿನಕ್ಕೆ ಆರು ಪತ್ರಿಕೆಗಳನ್ನು ಓದುವ ಕೋಟೇಶ್ವರಮ್ಮ ಜಗತ್ತಿನ ಎಲ್ಲ ಆಗುಹೋಗುಗಳನ್ನೆ ಅದೆಷ್ಟು ತನ್ಮಯತೆಯಿಂದ ಗ್ರಹಿಸಿ ಚರ್ಚಿಸುತ್ತಾರೆಂದರೆ ಯಾರಿಗಾದರೂ ಆಶ್ಚರ್ಯವಾಗದೇ ಇರದು.

ಮನೆಯಲ್ಲೆಲ್ಲಾ ವಾಕರ್ ಹಿಡಿದು ಓಡಾಡುವ ಈ ಅಜ್ಜಿ ಸಂಜೆ ನಾವು ಸಮುದ್ರ ತೀರ ನೋಡಲು ಹೊರಟರೆ, ನಮ್ಮೊಂದಿಗೆ ಅವರೂ ಸಿದ್ಧವಾಗಿ ನಿಂತರು. ಅದೆಂತಹ ಜೀವನೋತ್ಸಾಹ! ಓಹ್, ಅವರ ನೆನಪಿನ ಶಕ್ತಿಯಂತೂ ಅಸಾಧಾರಣವಾದುದು. ರಾಮಕೃಷ್ಣ ಬೀಚಿನ ಮುಂದೆ ಕೂತು ತಮ್ಮ ನೆನಪಿನ ಗಣಿಯಿಂದ ಒಂದೊಂದೇ ಕತೆಯನ್ನು ಬಿಚ್ಚಿದರು. ಅಲ್ಲಿ ಎದುರಿಗೇ ಇದ್ದ ವೈದ್ಯಕೀಯ ವಿದ್ಯಾರ್ಥಿನಿಯರ ಹಾಸ್ಟೆಲ್ ತೋರಿಸುತ್ತಾ, ಶ್ರೀ ಶ್ರೀಯವರಿಗೆ ೬೦ನೇ ವರ್ಷದ ಆಚರಣೆಯ ಸಂದರ್ಭದಲ್ಲಿ ಭಾಗವಹಿಸಲು ಬಂದಾಗ, ಆ ಹಾಸ್ಟೆಲ್‌ನಲ್ಲಿದ್ದುದನ್ನು ನೆನಪಿಸಿಕೊಂಡರು. ನಾವು ಅವರ ಮನೆಯಲ್ಲಿದ್ದ ಎರಡೂ ದಿನ ಅದೆಷ್ಟು ಹಳೆಯ ನೆನಪುಗಳನ್ನು ಸಂಭ್ರಮದಿಂದ ಹಂಚಿಕೊಂಡರೆಂದರೆ ನಮ್ಮ ದೇಶದ ಕಮ್ಯುನಿಸ್ಟ್ ಚಳುವಳಿಯ ಸ್ಮೃತಿ ಸಂಚಯದ ಜ್ಞಾನ ಭಂಡಾರದೊಡನೆ ಮುಖಾಮುಖಿಯಾದ ಭಾವ ನಮಗೆ. ಅಂದು ಅವರು ತಮ್ಮ ಮೊಮ್ಮಗಳ ಗಂಡ ಕೃಷ್ಣ ಅವರೊಂದಿಗೆ ತಾವು ಬೀಚಿಗೆ ಹೋದದ್ದು, ಆಂಧ್ರ ವಿಶ್ವವಿದ್ಯಾಲಯಕ್ಕೆ ಹೋಗಿಬಂದದ್ದನ್ನು ಸಂತೋಷದಿಂದ ಹಂಚಿಕೊಂಡರು. ಆಗ ಕೃಷ್ಣ ಅವರು, ನಮಗೆ "ನೀವು ಅವರ ಆಯಸ್ಸನ್ನು ಇನ್ನೊಂದು ವರ್ಷ ವಿಸ್ತರಿಸಿದ್ದೀರಿ" ಎಂದರು. ಅದೇಕೋ ಅವರ ಸಾವಿನ ಸುದ್ದಿ ಕೇಳಿದೊಡನೆ ಈ ಮಾತೇ ಕಿವಿಯಲ್ಲಿ ಗುಯ್ ಗುಡುತ್ತಿತ್ತು.

ಹೋರಾಟಗಳ ನಾಡಾದ ಆಂಧ್ರದ ಕೃಷ್ಣ ಜಿಲ್ಲೆಯ ಪಾಮರುವಿನಲ್ಲಿ, ಅನುಕೂಲಸ್ಥ ಮಧ್ಯಮ ವರ್ಗದ ರೆಡ್ಡಿ ಕುಟುಂಬದಲ್ಲಿ ೧೯೨೦ರಲ್ಲಿ ಹುಟ್ಟಿದ ಕೋಟೇಶ್ವರಮ್ಮನಿಗೆ, ಮನೆಯಲ್ಲಿ ಅವರು ಹುಟ್ಟಿದಂದಿನಿಂದಲೇ ರಾಷ್ಟ್ರೀಯತಾ ವಾದದ ಪರಿಸರ ದೊರಕಿತ್ತು. ಅವರಿಗೆ ಆರೇಳು ವರ್ಷ ವಯಸ್ಸಾಗಿದ್ದಾಗಲೇ ವಿಧವೆಯ ಪಟ್ಟ ಬಂದಿತ್ತು. ಬುದ್ಧಿ ಬರುವುದಕ್ಕಿಂತ ಮುಂಚೆಯೇ ವಿಧವೆಯಾಗಿದ್ದ ಕೋಟೇಶ್ವರಮ್ಮ ಕಮ್ಯುನಿಸ್ಟ್ ಕಾರ್ಯಕರ್ತರಾಗಿದ್ದ ಕೊಂಡಪಲ್ಲಿ ಸೀತಾರಾಮಯ್ಯನವರನ್ನು ಮದುವೆ ಯಾದದ್ದು ಕ್ರಾಂತಿಕಾರಿಗಳಲ್ಲಿ ಉತ್ಸಾಹವನ್ನು, ನೆಂಟರಲ್ಲಿ ದ್ವೇಷವನ್ನು ಒಟ್ಟಿಗೆ ಹುಟ್ಟಿಸಿತು. ಮದುವೆಯ ನಂತರ ಆಕೆಯೂ ಕಮ್ಯುನಿಸ್ಟ್ ಪಕ್ಷ ಸೇರಿ, ಎರಡು ಬಾರಿ ಪಕ್ಷ ನಿಷೇಧಿಸಲ್ಪಟ್ಟಾಗ



ಭೂಗತಳಾಗಿ ಪಡಬಾರದ ಪಾಡುಪಟ್ಟ ಕೋಟೇಶ್ವರಮ್ಮನ ರೋಮಾಂಚಕಾರಿ ಜೀವನಗಾಥೆ ಅವರ ಆತ್ಮಕಥೆ 'ಒಂಟಿ ಸೇತುವೆ'ಯಲ್ಲಿ ಬಿಚ್ಚಿಕೊಳ್ಳುತ್ತದೆ.

ತೆಲಂಗಾಣ ಹೋರಾಟದ ಅಜ್ಞಾತವಾಸವೆಲ್ಲಾ ಮುಗಿದ ಮೇಲೆ ಪಕ್ಷ ಬಹಿರಂಗವಾಗಿ ಚಟುವಟಿಕೆ ಆರಂಭಿಸಿದಾಗ ಕೋಟೇಶ್ವರಮ್ಮ ಕ್ರಿಯಾಶೀಲವಾಗಿ ತಮ್ಮನ್ನು ತೊಡಗಿಸಿಕೊಂಡರು. ೧೯೫೨ರ ಚುನಾವಣೆಯಲ್ಲಿ ನಡೆದ ಬಿರುಸಿನ ಚುನಾವಣಾ ಪ್ರಚಾರ ಕಾರ್ಯದಲ್ಲಿ ಇತರ ಮಹಿಳಾ ನಾಯಕರೊಂದಿಗೆ ಕೋಟೇಶ್ವರಮ್ಮ ಕೂಡ ಭಾಗಿಯಾದರು. ಭೂಗತ ಹೋರಾಟದಲ್ಲಿದ್ದಾಗ ಮೃತನಾದ ವೀರಯೋಧನ ಪತ್ನಿಯೊಂದಿಗೆ ಸಂಬಂಧ ಬೆಳೆದು ಪತ್ನಿ ಕೋಟೇಶ್ವರಮ್ಮನಿಂದ ದೂರ ಸರಿದ ಸೀತಾರಾಮಯ್ಯ ಹೋಗುವಾಗ ಮಕ್ಕಳನ್ನು ತನ್ನೊಡನೆ ಕರೆದುಕೊಂಡು ಹೋಗಿ ಪತ್ನಿಯನ್ನು ತಬ್ಬಲಿ ಮಾಡಿದರು. ಆ ಸಂದರ್ಭದಲ್ಲಿ ಎಷ್ಟೇ ದುಃಖ ತುಂಬಿದ್ದರೂ ಜೀವನ ನಿರ್ವಹಣೆಗೆ, ಬದುಕಿಗೊಂದು ಅರ್ಥ ಕಂಡುಕೊಳ್ಳಲು ಬಿಟ್ಟು ಹೋಗಿದ್ದ ಶಿಕ್ಷಣವನ್ನು ಮುಂದುವರೆಸಲು, ದುರ್ಗಾಬಾಯಿ ದೇಶಮುಖ್ ಕಟ್ಟಿದ ಆಂಧ್ರ ಮಹಿಳಾ ಸಭಾದ ಹಾಸ್ಟೆಲ್‌ನಲ್ಲಿದ್ದು ಓದಿ ಮೆಟ್ರಿಕ್‌ನಲ್ಲಿ ತೇರ್ಗಡೆ ಹೊಂದಿದರು. ನಂತರ ಕಾಕಿನಾಡ ಪಾಲಿಟೆಕ್ನಿಕ್ ಹಾಸ್ಟೆಲ್‌ನಲ್ಲಿ ಮೇಟ್ರನ್ ಆಗಿ ಕೆಲಸ ಮಾಡಿ ತಮ್ಮ ಜೀವನ ನಿರ್ವಹಣೆ ಮಾಡಿಕೊಂಡರು. ಅವರ ಮಕ್ಕಳು ಚಂದು ಮತ್ತು ಕರುಣ ಕೂಡ ಕ್ರಾಂತಿಕಾರಿ ಹೋರಾಟದ ಚೈತನ್ಯವನ್ನು ತಮ್ಮಲ್ಲಿ ಬೆಳೆಸಿಕೊಂಡು ತಾಯಿಯ ಕಣ್ಣ ಮುಂದೆಯೇ ತೀರಿಹೋದದ್ದು ಅವರಿಗೆ ಜೀವನದಲ್ಲಿ ಭಾರಿ ಪೆಟ್ಟನ್ನು ಒದಗಿಸಿತು. ಮಕ್ಕಳ ಸಾವಿನ ನಂತರ, ಮೇಟ್ರನ್ ಹುದ್ದೆಯಿಂದ ನಿವೃತ್ತರಾದ ಮೇಲೆ ಹತ್ತು ವರ್ಷಗಳ ಕಾಲ ಹೈದರಾಬಾದ್‌ನಲ್ಲಿ ರಾಜೇಶ್ವರರಾವ್ ಅವರ ಹೆಸರಿನ ವೃದ್ಧಾಶ್ರಮದಲ್ಲಿ ಕಾಲ ಕಳೆದರು. ಒಳ್ಳೆಯ ಹಾಡುಗಾರ್ತಿ ಮತ್ತು ನಟಿಯಾಗಿದ್ದ ಕೋಟೇಶ್ವರಮ್ಮ ಸ್ವತಃ ಕವಿ ಮತ್ತು ಕತೆಗಾರ್ತಿ. ಅವರ ಜೀವನ ಸಂಧ್ಯೆಯಲ್ಲಿ ವಿಶಾಖಪಟ್ಟಣದಲ್ಲಿರುವ ಅವರ ಇಬ್ಬರು ಮೊಮ್ಮಕ್ಕಳು ಸುಧಾ ಮತ್ತು ಅನುರಾಧ ಅವರ ಒಂಟಿತನವನ್ನು ಮರೆಸುವ ಸಂಜೀವಿನಿಯಾಗಿದ್ದರು.


ಸೆಪ್ಟೆಂಬರ್ 11, 2017ರಂದು 'ಹೊಸತು' ಸಂದರ್ಶನದ ವೇಳೆಯಲ್ಲಿ

ಕಮ್ಯುನಿಸ್ಟ್ ಚಳುವಳಿಗಾಗಿ ತಮ್ಮ ಸಕಲವನ್ನು ಧಾರೆಯೆರೆದ ಕೋಟೇಶ್ವರಮ್ಮ ಪಕ್ಷ ಇಬ್ಭಾಗವಾದಾಗ ಬಹಳ ನೊಂದುಕೊಂಡರು. ಸ್ವಲ್ಪ ಕಾಲ ಎರಡು ಪಕ್ಷಗಳಿಗೂ ಸದಸ್ಯತ್ವ ಶುಲ್ಕವನ್ನು ಕಳಿಸುತ್ತಿದ್ದರು. ಈಗ ಕೊನೆಯವರೆಗೂ ಕಮ್ಯುನಿಸ್ಟ್ ಪಕ್ಷಗಳು ಒಂದಾಗುವ ಕನಸನ್ನು ಕಾಣುತ್ತಿದ್ದರಾಕೆ.


**ಡಾ॥ ಎನ್. ಗಾಯತ್ರಿ**
೨೦೧, ಸ್ಕೈಲೈನ್ ಗೋಲ್ಡನ್ ರೇಸ್, ಛತ್ರಂ ಬ್ಲಾಕ್, ಗವಿಪುರಂ, ಬೆಂಗಳೂರು – ೫೬೦ ೦೧೯


*(೩೮ನೇ ಪುಟದಿಂದ)*

ಮೆಸಿಯರ್ ಕ್ಯಾಟಲಾಗ್ ಎಂಬುದರಿಂದ ಉದ್ಧೃತವಾದವು. ಇವುಗಳಲ್ಲಿ ನೆಬ್ಯುಲಾಗಳು, ಗೆಲಾಕ್ಸಿಗಳು, ನಕ್ಷತ್ರಗುಚ್ಛಗಳು ಎಲ್ಲವೂ ಸೇರಿವೆ. ಇವುಗಳನ್ನು ಬರಿಗಣ್ಣಿನಿಂದ ಗುರುತಿಸುವುದೇ ಒಂದು ಸವಾಲು. ಇದಕ್ಕಾಗಿ ಹವ್ಯಾಸಿ ವೀಕ್ಷಕರು ಊರಾಚೆ ಕತ್ತಲು ದಟ್ಟವಾಗಿರುವ ಪ್ರದೇಶಕ್ಕೆ ಹೋಗಿ "ಮೆಸಿಯರ್ ಮ್ಯಾರಥಾನ್" ನಡೆಸುತ್ತಾರೆ.

ಗ್ರಹಗಳು ಒಟ್ಟಾಗುವ ಸಂದರ್ಭಗಳು ಅಲ್ಲದೆ ೨೭ರಂದು ಕೃತ್ತಿಕಾ ಮತ್ತು ರೋಹಿಣಿಗಳ ನಡುವೆ ಚಂದ್ರ ಹಾದು ಹೋಗುವುದನ್ನೂ ಕಾಣಬಹುದು. ಹುಣ್ಣಿಮೆಯ ಚಂದ್ರ ಅಶ್ವಿನಿ ನಕ್ಷತ್ರದ ಬಳಿ ಇರುವುದನ್ನು ಪರಿಶೀಲಿಸ ಬಹುದು. ೧೧ರಂದು ಐದೂ ಗ್ರಹಗಳು ಸಂಜೆಯಲ್ಲಿಯೇ ಕಾಣಸಿಗುವುದು ವಿಶೇಷ ವಾದರೂ ಬುಧ ಮತ್ತು ಶುಕ್ರ ದಿಗಂತದ ಅಂಚಿನಲ್ಲಿರುವುದರಿಂದ ಹುಡುಕುವುದು ಕಷ್ಟ. ಆಕಾಶ ಶುಭ್ರವಾಗಿದ್ದರೆ ಶುಕ್ರಗ್ರಹವನ್ನು ಸೂರ್ಯಾಸ್ತಕ್ಕೆ ಮುಂಚೆಯೇ ಹುಡುಕಬಹುದು. ಆದರೆ, ಬುಧಗ್ರಹವನ್ನು ಸೂರ್ಯಾಸ್ತವಾದ ಮೇಲೆ ಹುಡುಕುವುದೂ ಕಷ್ಟ. ಆ ನಂತರ ಅದು ದಿಗಂತದಿಂದ ಮೇಲೇರುವುದರಿಂದ ಪತ್ತೆ ಮಾಡಬಹುದು.

ಈ ತಿಂಗಳಲ್ಲಿ ಒರಿಯನಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಹ್ಯಾಲೀ ಧೂಮಕೇತುವಿನ ತುಣುಕುಗಳು ಭೂಮಿಯನ್ನು ಅಪ್ಪಳಿಸಿ ಉರಿದು ಹೋಗುವುವು. ತಿಂಗಳುದ್ದಕ್ಕೂ ಈ ಚಟುವಟಿಕೆ ನಡೆಯಲಿದ್ದು ೨೧–೨೨ರ ಹೊತ್ತಿಗೆ ಗರಿಷ್ಠ ಅಂದರೆ ಗಂಟೆಗೆ ೧೫–೨೦ ಉಲ್ಕೆಗಳು ಬೀಳಲಿವೆ. ಹೆಸರೇ ಸೂಚಿಸುವಂತೆ ಒರ್ರೈಯನ್ ಅಂದರೆ ಮಹಾವ್ಯಾಧ ನಕ್ಷತ್ರಪುಂಜದಿಂದ ಹೊರಟಂತೆ ಕಾಣುತ್ತವೆ. ಮಹಾವ್ಯಾಧ ಮುಂಜಾವಿನಲ್ಲಿ ಕಾಣ ಸಿಗುತ್ತದೆ ಎಂಬುದರ ಸುಳಿವೂ ಇಲ್ಲಿಯೇ ಸಿಗುತ್ತದೆ. ಇಲ್ಲಿ ಕೊಟ್ಟಿರುವ ಸಂಜೆಯ ನಕ್ಷೆಯಲ್ಲಿ (ತಿಂಗಳ ಮಧ್ಯಭಾಗಕ್ಕೆ) ಮಹಾವ್ಯಾಧ ಇಲ್ಲ.

**ಖಗೋಳ ದಿನಚರಿ**

೨ ಚಾಂದ್ರಮಾಸದ ಕೊನೆಯ ಪಾದ
೫ ಶುಕ್ರಗ್ರಹದ ಹಿನ್ನಡೆ ಆರಂಭ
ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
ಚಂದ್ರ–ಮಘ ಜೋಡಿ*
೯ ಅಮಾವಾಸ್ಯೆ
೧೧,೧೨ ಚಂದ್ರ – ಗುರು – ಶುಕ್ರ – ಬುಧ ಪುಟ್ಟ ಗುಂಪು*
೧೫ ಚಂದ್ರ – ಶನಿ ಜೋಡಿ*
೧೬ ಚಾಂದ್ರಮಾಸದ ಮೊದಲ ಪಾದ
೧೭ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೨೪ ಹುಣ್ಣಿಮೆ
೨೬ ಶುಕ್ರಗ್ರಹದ ಯುತಿ
೨೭ ಚಂದ್ರ – ರೋಹಿಣಿ ಜೋಡಿ*
೨೯ ಬುಧ – ಗುರು ಜೋಡಿ*
೩೧ ಚಾಂದ್ರಮಾಸದ ಕೊನೆಯ ಪಾದ
ಚಂದ್ರ – ಭೂಮಿ ನಡುವೆ ಗರಿಷ್ಠ ದೂರ

*(*ಛಾಯಾಗ್ರಹಣಕ್ಕೆ ಸದವಕಾಶ)*


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

# ಮಲೆನಾಡಿನ 'ನೋಟ' ಬಲು ಚೆಂದ...

*ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಂಗಳಿಗಂಜಿದೊಡೆಂತಯ್ಯ?*
*ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ?*
*ಸಂತೆಯೊಳಗೊಂದು ಮನೆಯ ಮಾಡಿ ಶಬ್ದಕ್ಕೆ ನಾಚಿದೊಡೆಂತಯ್ಯ?*
*ಚನ್ನಮಲ್ಲಿಕಾರ್ಜುನದೇವ ಕೇಳಯ್ಯ!*

'ಮಲೆನಾಡು' ಎಂದಾಕ್ಷಣ ಕಣ್ಣಿನ ಮುಂದೆ ಮೂಡುವ ಚಿತ್ರಣವೆಂದರೆ ಹಚ್ಚ ಹಸುರಿನ ಹೊದಿಕೆಯ ಬೆಟ್ಟ-ಗುಡ್ಡಗಳ ಸಾಲು, ತಂಗಾಳಿ, ಮಂಜು ಮುಸುಕಿದ ವಾತಾವರಣ, ಚಿಲಿಪಿಲಿಗುಟ್ಟುವ ಪಕ್ಷಿಗಳ ಕಲರವ, ಬೆಟ್ಟಗಳ ತುದಿಯಿಂದ ಕುಪ್ಪಳಿಸುತ್ತ ಹರಿಯುವ ಝರಿಗಳು, ಅಲ್ಲೊಂದು ಇಲ್ಲೊಂದು ಗುಡಿಸಲಿನಂತಹ ಮನೆಗಳಿರುವ ಪುಟ್ಟ ಗ್ರಾಮಗಳು, ಗ್ರಾಮಗಳ ವಿಶಾಲ ಗೋಮಾಳದಲ್ಲಿ ಹಸಿರು ಹುಲ್ಲು ಸ್ವಚ್ಛಂದವಾಗಿ ಮೇಯುತ್ತ ಸಾಗುವ ಮಲೆನಾಡಿನ ಗಿಡ್ಡ ರಾಸುಗಳು, ರಾಸುಗಳ ಚಲನವಲನವನ್ನು ಗಮನಿಸುತ್ತ, ಕಾಯುತ್ತ ಕಾಲ ಕಳೆಯುವ ಕಂಬಳಿ ಹೊತ್ತ ವಯೋವೃದ್ಧರು, ಗ್ರಾಮಗಳ ಸಂಪರ್ಕಕ್ಕೆ ಹೆಸರಿಗೆ ರಸ್ತೆಗಳಿದ್ದರೂ ಕಾಣದ ವಾಹನಗಳು... ಇವೆಲ್ಲ ಒಂದು ದೃಶ್ಯವಾದರೆ ಮಳೆಗಾಲದ ಚಿತ್ರಣವೇ ವಿಭಿನ್ನ, ವಿಶೇಷ! ಮಲೆನಾಡಿನ ಪ್ರದೇಶಗಳಲ್ಲಿ ವರ್ಷದ ಸುಮಾರು ನಾಲ್ಕೈದು ತಿಂಗಳುಗಳ ಕಾಲ ಎಡೆಬಿಡದ ಮಳೆ (ಮುಂಚಿನ ದಿನಗಳಲ್ಲಿ ಆರು ತಿಂಗಳಿಗೂ ಹೆಚ್ಚು ಮಳೆಗಾಲ ಬರುಬರುತ್ತ ಕಡಿತಗೊಂಡಿದೆ), ಮಳೆಗಾಲ ಆರಂಭವಾಗುತ್ತಿದ್ದಂತೆ ಕೃಷಿ ಚಟುವಟಿಕೆಗಳ ಪ್ರಾರಂಭ. ಹೆಚ್ಚಾಗಿ ಗದ್ದೆಗಳಲ್ಲಿ ಭತ್ತ ಬೆಳೆಯುವುದೇ ಮೂಲ ಕಸುಬು, ಭತ್ತದ ಕುಯ್ಲು, ಒಕ್ಕಣೆ ಮುಕ್ತಾಯವಾದ ನಂತರದ ದಿನಗಳಲ್ಲಿ ಶುಂಠಿ, ಹಸಿ ಮೆಣಸಿನಕಾಯಿ, ಕೆಲವು ಆಯ್ದ ತರಕಾರಿಗಳನ್ನು ಸ್ವ-ಬಳಕೆಗೆ ಬೆಳೆಯುವುದು ರಿವಾಜು! ಸಾರಿಗೆ ಸಂಪರ್ಕ ವ್ಯವಸ್ಥೆ ಇಲ್ಲದ ಕಾರಣಕ್ಕೆ ವ್ಯಾವಹಾರಿಕವಾಗಿ ಬೆಳೆ ಬೆಳೆಯುವುದು ಇಂದಿಗೂ ಕಷ್ಟಸಾಧ್ಯವಾಗಿದೆ ಎಂದರೆ ತಪ್ಪಾಗದು! ಮಳೆಗಾಲದಲ್ಲಿ ಧೋ ಎಂದು ಹಗಲಿರುಳು ಮಳೆ ಸುರಿದರೂ ಬೇಸಿಗೆಯಲ್ಲಿ ನೀರಿಗೆ ಬವಣೆ ತಪ್ಪಿದ್ದಲ್ಲ! ಇದು ಮಲೆನಾಡಿನ ಸಂಕ್ಷಿಪ್ತ ಚಿತ್ರಣ.

ಆದರೆ, ಕಳೆದ ಹಲವು ವರ್ಷಗಳ ಅವಧಿಯಲ್ಲಿ ಮಲೆನಾಡಿನ ಪ್ರದೇಶಗಳಿಗೆ, ಗ್ರಾಮೀಣ ಭಾಗಕ್ಕೆ ಎಲ್ಲಿಲ್ಲದ ಪ್ರಾಧಾನ್ಯತೆ ಬಂದಿದ್ದು ಮಲೆನಾಡನ್ನು ವಿಭಿನ್ನವಾಗಿ ಗುರುತಿಸಲಾಗಿದೆ. ನಗರ, ಪಟ್ಟಣ ಪ್ರದೇಶದ ಮಂದಿ, ಅದರಲ್ಲಿಯೂ ಯುವಜನತೆ, ರಜಾ ದಿನಗಳಲ್ಲಿ ಮಜಾ ಮಾಡುವ ಉದ್ದೇಶದಿಂದ, ನಗರದ ಜಂಜಾಟವನ್ನು ವಾರದ ಕೊನೆಯ ಒಂದೆರಡು ದಿನಗಳ ಮಟ್ಟಿಗೆ ಮರೆಯುವ ದೃಷ್ಟಿಯಿಂದ, ಮಲೆನಾಡನ್ನು ಪ್ರವಾಸಕ್ಕೆ ಆಯ್ಕೆ ಮಾಡುವ ಪದ್ಧತಿ ದಿನೇ ದಿನೇ ಹೆಚ್ಚುತ್ತಿದೆ. ವಾರದ ಕೊನೆಯಲ್ಲಿ ಭೇಟಿ ನೀಡುವ ಸಿರಿವಂತ ಅತಿಥಿಗಳಿಗೆ ಆತಿಥ್ಯ ನೀಡಲೆಂದೇ ಹೋಮ್ ಸ್ಟೇ ವ್ಯವಸ್ಥೆ, ರೆಸಾರ್ಟ್ ಸೌಲಭ್ಯಗಳು ತಲೆ ಎತ್ತುತ್ತಿವೆ, ಜನಪ್ರಿಯವಾಗುತ್ತಿವೆ. ಮಲೆನಾಡಿನ ಕೆಲವು ಕಾಫಿ ತೋಟಗಳ ಮಾಲೀಕರು ತಮ್ಮ ಪೂರ್ವಜರ ವಿಶಾಲ ವಾಸದ ಮನೆಗಳಲ್ಲಿ (ತೊಟ್ಟಿ ಮನೆ) ಒಂದು ಭಾಗದಲ್ಲಿ ವಾರಾಂತ್ಯದಲ್ಲಿ ಆಗಮಿಸುವ ಅತಿಥಿಗಳಿಗೆ ಮೀಸಲಿಟ್ಟರೆ, ಇನ್ನು ಕೆಲವು ಸಂಪದ್ಭರಿತ ವ್ಯಕ್ತಿಗಳು ತೋಟಗಳ ನಡುವೆ, ಕೃಷಿ ಜಮೀನಿನ ನಡುವೆ, ಗುಡ್ಡಗಾಡು ಪ್ರದೇಶಗಳಲ್ಲಿ ಠೀಕಾಗಿ, ಆಧುನಿಕ ಅತಿಥಿ ಗೃಹಗಳನ್ನು ನಿರ್ಮಿಸಿ ಹೋಮ್ ಸ್ಟೇ ಎಂಬ ವ್ಯವಸ್ಥೆ ಕಲ್ಪಿಸಿಕೊಟ್ಟು ಕೃಷಿಗಿಂತ ಮಿಗಿಲಾದ ಆರ್ಥಿಕ ವ್ಯವಹಾರವನ್ನಾಗಿಸಿರುವ ಉದಾಹರಣೆಗಳು ಹಲವಾರು. ಆದರೆ, ಐಶಾರಾಮಿ ಹೋಮ್ ಸ್ಟೇಗಳಲ್ಲಿ ಕೇವಲ ವಾರಾಂತ್ಯದಲ್ಲಿ, ರಜಾ ದಿನಗಳಲ್ಲಿ ಯಾವುದೇ ಕಟ್ಟುಪಾಡುಗಳಿಲ್ಲದೇ ಸಮಯ ಕಳೆಯುವದನ್ನು ಮಲೆನಾಡಿನ ಜೀವನ ಶೈಲಿಯೆಂದು ಪರಿಗಣಿಸಲು ಸಾಧ್ಯವೇ?

ಮಲೆನಾಡಿನ ಜನತೆಯ ದಿನನಿತ್ಯದ ನೈಜ ಜೀವನದ ಚಿತ್ರಣವೇ ಬೇರೆ. ಹೋಮ್ ಸ್ಟೇ ಮಾದರಿಯಲ್ಲಿ ಜೀವನ ಸಾಗಿಸುವುದು ನನಸಾಗದ ಕನಸು! ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ಏಳು ದಶಕಗಳಿಗೂ ಮೀರಿದರೂ ಬಹುತೇಕ ಗ್ರಾಮಗಳಿಗೆ ಇಂದೂ ಸಹ ಮೂಲಭೂತ ಸೌಕರ್ಯಗಳಿಲ್ಲ ಎಂದರೆ ಅಚ್ಚರಿಪಡುವ ಅಗತ್ಯವಿಲ್ಲ. ಮಹಾತ್ಮ ಗಾಂಧೀಜಿಯವರ ಗ್ರಾಮ ರಾಜ್ಯದ ಕನಸು, ಕೇವಲ ಕನಸಾಗಿಯೇ ಉಳಿದಿರುವುದು ವಿಪರ್ಯಾಸವೇನಲ್ಲ... ಕಾರಣ ನಮ್ಮನ್ನಾಳುವ ಬಹುತೇಕ ಜನಪ್ರತಿನಿಧಿಗಳು ವಲಸಿಗರು, ನಗರವಾಸಿಗಳು. ಗ್ರಾಮಗಳ ಅಭಿವೃದ್ಧಿ

**ರಾಜೀವ್ ಎನ್. ಮಾಗಲ್**





ಕೇವಲ ಯೋಜನೆಗಳಾಗಿಯೇ ಉಳಿದಿರುವುದರಿಂದ ಗ್ರಾಮಗಳು ಇಂದಿಗೂ ಪಟ್ಟಣ ಪ್ರದೇಶಗಳ ಹಾಗೆ ಕಾಂಕ್ರೀಟ್ ಕಾಡಾಗಿ ಪರಿವರ್ತನೆಯಾಗಿಲ್ಲ, ಆಧುನಿಕವಾಗಿಲ್ಲ, ಬದಲಾಗಿಲ್ಲ! ಇನ್ನು ಮಲೆನಾಡಿನ ಮಳೆಗಾಲವೇನೋ ನಿಜಕ್ಕೂ ಚೆನ್ನ... ಅಪರೂಪಕ್ಕೆ ಭೇಟಿ ನೀಡುವ ಪ್ರವಾಸಿಗರಿಗೆ! ಪ್ರತಿ ಹದಿನೈದು ದಿನಕ್ಕೊಮ್ಮೆ ನಕ್ಷತ್ರದ ಪ್ರಕಾರ ಬದಲಾಗುವ ಮಳೆಯ ಪ್ರಮಾಣದಲ್ಲಿ ದೃಗ್ಗೋಚರವಾದ ಬದಲಾವಣೆ ಅನುಭವಿಸಬಹುದಾದರೂ ಇತ್ತೀಚೆಗಿನ ಮಳೆಗಾಲ ಸಾಕಷ್ಟು ಬದಲಾಗಿದೆ, ಜಿಟಿ–ಜಿಟಿ ಮಳೆ, ಸೋನೆ ಮಳೆ ಕಡಿಮೆಯಾಗಿ ಧಾರಾಕಾರ ಮಳೆ ಹೆಚ್ಚಿದೆ; ಮಳೆಗಾಲ ಆರಂಭವಾಯಿತೆನ್ನುವುದಕ್ಕೆ ಮೊದಲ ಸೂಚನೆ ವಿದ್ಯುತ್ ಸಂಪರ್ಕದ ಕಡಿತ... ಅದೂ ಒಂದೆರಡು ಘಂಟೆಗಳಿಗೆ ಸೀಮಿತವಾಗಿರದು! ಮಳೆಗಾಲದ ಸಮಯದಲ್ಲಿ ಗ್ರಾಮಗಳಲ್ಲಿ ಒಮ್ಮೆ ವಿದ್ಯುತ್ ಸಂಪರ್ಕ ಕಡಿತವಾಯಿತೆಂದರೆ ಕನಿಷ್ಠ ೧೫–೨೦ ದಿನಗಳ ಕಾಲ ಆ ದಿಸೆಯಲ್ಲಿ ಚಿಂತೆಯೇ ಇರದು, ಯಾವುದೇ ಹೆಲ್ಪ್‌ಲೈನ್ ಕಾರ್ಯ ನಿರ್ವಹಿಸದು... ೧೫–೨೦ ದಿನಗಳಲ್ಲಿ ಪುನಃ ವಿದ್ಯುತ್ ಸಂಪರ್ಕ ಸಿಕ್ಕರೆ ಪುಣ್ಯ! ದಿನದ ಬಹುತೇಕ ಸಮಯ ಸಿಂಗಲ್ ಫೇಸ್, ಅಂದರೆ ಮಿಣುಕು ದೀಪ! ವಾಸ್ತವದಲ್ಲಿ, ಗ್ರಾಮಸ್ಥರಿಗೆ ವಿದ್ಯುತ್ ಸಂಪರ್ಕದ ವಿಚಾರದಲ್ಲಿ ದೂರು ನೀಡಬಹುದೆಂಬ ಪರಿಜ್ಞಾನವೂ ಇರದು! ಇನ್ನು ರಸ್ತೆಗಳ ಪರಿಸ್ಥಿತಿಯಂತೂ ದೇವರಿಗೇ ಪ್ರೀತಿ! ರಸ್ತೆಗಳಲ್ಲಿ ಗುಂಡಿಗಳಲ್ಲ, ಹೊಂಡಗಳು! ಈಜಾಡಬಹುದು! ನಿತ್ಯ ಬಳಕೆಗೆ ಚಾವಣಿಗಳ ಮೇಲಿನ ನೀರಿನ ಸಂಗ್ರಹವೇ ಮೂಲ! ಸಕಲರೂ ಮೊಬೈಲ್ ಫೋನ್ ಒಡೆಯರಾದರೂ, ವಿದ್ಯುತ್ ಇಲ್ಲದ ಮೇಲೆ ನಗಣ್ಯ! ಏಕೈಕ ಮನರಂಜನೆಯಾದ ಟಿ.ವಿ. ವ್ಯರ್ಥ! ಕೆಲವು ಚಟಗಳಿಗೆ ತೃಪ್ತಿಪಟ್ಟುಕೊಳ್ಳಬೇಕಾದ್ದು ಅನಿವಾರ್ಯತೆ! ಮಲೆನಾಡಿನ ಗ್ರಾಮಗಳು ಗುಡ್ಡಗಾಡು ಪ್ರದೇಶದಲ್ಲಿರುವ ಕಾರಣ ಸಾರ್ವಜನಿಕ ಸಂಪರ್ಕ ವ್ಯವಸ್ಥೆ ಮರೀಚಿಕೆಯೆಂದೇ ಹೇಳಬಹುದು... ಇನ್ನು ಮಳೆಗಾಲದಲ್ಲಿ ಹೆಚ್ಚಿಗೆ ಹೇಳುವ ಹಾಗಿಲ್ಲ, ಕೇಳುವ ಹಾಗಿಲ್ಲ! ಬಯಲು ಸೀಮೆಯಲ್ಲಿ ವರ್ಷವಿಡೀ ಬೀಳುವ ಮಳೆ ಮಲೆನಾಡಿನಲ್ಲಿ ಕೆಲವೇ ಘಂಟೆಗಳಲ್ಲಿ ಸುರಿಯುವುದು ಸರ್ವೇ–ಸಾಧಾರಣ! ಗ್ರಾಮಸ್ಥರಿಗೆ, ಗ್ರಾಮೀಣ ಭಾಗದ ಶಾಲಾ ಮಕ್ಕಳಿಗೆ ಕಾಲು ನಡಿಗೆಯೇ ಉತ್ತಮ ಸಾಧನ! ದಿನಕ್ಕೆ ಎಂಟು–ಹತ್ತು ಕಿ.ಮೀ.ಗಳ ಹಾದಿ ಕಾಲ್ನಡಿಗೆಯಲ್ಲಿ ಕ್ರಮಿಸುವುದು ದಿನಚರಿ ಎಂದರೆ ತಪ್ಪಾಗದು! ಅತೀ ಹೆಚ್ಚು ಸಂಕಷ್ಟವನ್ನು ಎದುರಿಸುವವರು ಎಂದರೆ ಆರೋಗ್ಯ ಸಮಸ್ಯೆ ಹೊಂದಿರುವ ವಯೋವೃದ್ಧರು, ಗರ್ಭಿಣಿ ಮಹಿಳೆಯರು, ಕಂದಮ್ಮಗಳು! ಹೋಬಳಿಯಲ್ಲಿ ಎಲ್ಲೋ ಒಂದು ಕಡೆ ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದರೂ, ಕೆಲವದರಲ್ಲಿ ವೈದ್ಯರಿರೋದಿಲ್ಲ, ಕೆಲವದರಲ್ಲಿ ಸಿಬ್ಬಂದಿಗಳ ಕೊರತೆ, ಇಬ್ಬರೂ ಇದ್ದರೆ ಔಷಧಗಳಿಗೆ ಬರ! ಇವೆಲ್ಲದರ ನಡುವೆ ಶಿಥಿಲಾವಸ್ಥೆಯಲ್ಲಿರುವ ಕಟ್ಟಡಗಳು! ಮನುಷ್ಯರ ಪಾಡೇ ಈ ಮಾದರಿಯಾದರೆ, ಸಾಕು ಪ್ರಾಣಿಗಳ, ಜಾನುವಾರುಗಳ ಬಗ್ಗೆ ಹೆಚ್ಚಿಗೆ ಹೇಳಲು ಅಸಾಧ್ಯ! ಈ ಕಾರಣಕ್ಕೆ ಗ್ರಾಮೀಣ ಭಾಗದ ಹೆಚ್ಚಿನ ಮಂದಿ ಮನೆಮದ್ದು ತಯಾರಿಸಿಕೊಳ್ಳುವುದು, ಗ್ರಾಮದೇವರಿಗೆ ಪ್ರಾರ್ಥನೆ, ಹರಕೆ, ತಾಯತ, ಮಂತ್ರ–ತಂತ್ರಕ್ಕೆ ಮೊರೆ... ನಾಟಿ ವೈದ್ಯರ ಮೊರೆಹೋಗುವುದು, ಆರೋಗ್ಯ ಸಮಸ್ಯೆಯ ನಿವಾರಣೆಗೆ ಅತ್ಯಂತ ಸುಲಭದ, ಅನಿವಾರ್ಯ ಮಾರ್ಗೋಪಾಯಗಳಾಗಿವೆ! ಅನೇಕ ಗ್ರಾಮಗಳಲ್ಲಿ ಆರೋಗ್ಯ ಸಮಸ್ಯೆಯಿಂದ ಅಕಾಲಿಕ ಮರಣಗಳು ಸಂಭವಿಸಿದರೆ ಅದನ್ನು ದೇವರ ಶಾಪವೆಂದು ಪರಿಗಣಿಸಿ ಸುಮ್ಮನಾಗುವ ಸನ್ನಿವೇಶಗಳು ಅಪರೂಪವೇನಲ್ಲ! ಮಳೆಗಾಲದ ಅನೇಕ ಸಂದರ್ಭಗಳಲ್ಲಿ ಶವಸಂಸ್ಕಾರವೇ ಬಹು ದೊಡ್ಡ ಸಮಸ್ಯೆಯಾಗುವುದರ ಬಗ್ಗೆ ವಿವರಣೆ ಅನಗತ್ಯ! ದೇವರನ್ನು ನಂಬಿ ಬದುಕುವ ಮಂದಿ ಅನುಸರಿಸುವುದು "ದೇವರಿಟ್ಟಂಗಾಗಲಿ" ಎನ್ನುವ ಸತ್ಯ ಸಂದೇಶವನ್ನು!

ಇವೆಲ್ಲದರ ನಡುವೆ, ಅಪರೂಪಕ್ಕೆ ಮಲೆನಾಡಿನ ಗುಡ್ಡ–ಗಾಡು ಪ್ರದೇಶಗಳಿಗೆ ಸುವಿಹಾರಿ ವಾಹನಗಳಲ್ಲಿ ಕುಟುಂಬ ಸಮೇತ ಭೇಟಿ ನೀಡಿ, ಕುಡಿದು – ಕುಣಿದು, ಕುಪ್ಪಳಿಸಿ, ಕಾಡು – ಮೇಡು ಸುತ್ತಿ, ವಿಹರಿಸಿ ನಗರಗಳಿಗೆ ಹಿಂದಿರುಗುವ ಮಂದಿಗೆ ಶಾಶ್ವತವಾಗಿ, ಮಲೆನಾಡಿನ ಗ್ರಾಮಗಳಲ್ಲಿ ಜೀವನೋಪಾಯದ ಅನಿವಾರ್ಯತೆಯಿಂದ ಜೀವನ ಸಾಗಿಸುವವರ ಕಷ್ಟ – ಕಾರ್ಪಣ್ಯಗಳ, ಒದ್ದಾಟ –ಪೇಚಾಟದ ಅರಿವಾಗುವುದು ಕಠಿಣವೇ! ಮಲೆನಾಡಿನ ಅಭಿವೃದ್ಧಿಗೆಂದೇ ಪ್ರತ್ಯೇಕವಾಗಿ ರಚಿಸಲಾಗಿರುವ ಮಲೆನಾಡು ಅಭಿವೃದ್ಧಿ ಪ್ರಾಧಿಕಾರವಿರಬಹುದು, ಗ್ರಾಮೀಣಾಭಿವೃದ್ಧಿ ಸಚಿವಾಲಯವಿರಬಹುದು, ಆದರ್ಶ ಗ್ರಾಮ ಯೋಜನೆಗಳಿರಬಹುದು, ಗ್ರಾಮ ವಿಕಾಸ ಕಾರ್ಯಕ್ರಮಗಳಿರಬಹುದು, ಪ್ರಧಾನ ಮಂತ್ರಿಗಳ ಗ್ರಾಮ ಸಡಕ್ ಯೋಜನೆ ಇರಬಹುದು, ಒಟ್ಟಾರೆಯಾಗಿ ಸರ್ಕಾರಗಳು ಹಮ್ಮಿಕೊಳ್ಳುವ ಬಹುತೇಕ ಜನಪರ ಅಭಿವೃದ್ಧಿ ಯೋಜನೆಗಳ ಫಲಾನುಭವಿಗಳು ಗ್ರಾಮಸ್ಥರೇ ಆದರೆ ಉಚಿತವಾದೀತು. ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳು ಕಣ್ಣಿಗೆ ಕಾಣಬಹುದು ಮಾತ್ರವಲ್ಲ, ಗ್ರಾಮಸ್ಥರಿಗೆ ಲಭ್ಯವಾಗಬಹುದು! ಆದರೆ ದೇಶದ ಆರ್ಥಿಕತೆಯ ಬೆನ್ನೆಲುಬು ಎನಿಸಿಕೊಂಡಿರುವ ಮಲೆನಾಡಿನ ಕೃಷಿಕರ ಮನಃಸ್ಥಿತಿ ಬದಲಾಗಿದೆ, ಮಲೆನಾಡು ಗ್ರಾಮೀಣ ಭಾಗದ ಪರಿಸ್ಥಿತಿ ಸಹ ಬದಲಾಗುತ್ತಿದೆ. ಮಲೆನಾಡಿನ ನೈಸರ್ಗಿಕ ಸೊಬಗು ಹಾಗೂ ಜೀವನದ ವಸ್ತುಸ್ಥಿತಿಗಳೆರಡೂ ಒಂದೇ ನಾಣ್ಯದ ಎರಡು ಮುಖಗಳಾಗಿಲ್ಲ! ಪ್ರವಾಸಿಗರ ಕಣ್ಣಲ್ಲಿ ಮಲೆನಾಡಿನ ಸೊಬಗಿನ ವಿವರಣೆಗೂ... ಮಲೆನಾಡಿಗರ ದಿನನಿತ್ಯದ ಜೀವನಕ್ಕೂ ಇರುವ ಅಸಾದೃಶ್ಯ ಮಾತ್ರ ಅವಿವರಣೀಯ! ಅಷ್ಟಿಲ್ಲದೆ ನಮ್ಮ ಪೂರ್ವಜರು ಹೇಳಲು ಸಾಧ್ಯವೇ... "ದೂರದ ಬೆಟ್ಟ ಸದಾ ಹಸಿರು" ಎಂದು! ಒಟ್ಟಿನಲ್ಲಿ ಪ್ರಕೃತಿಯ ಮಡಿಲಿನಲ್ಲಿ ಜೀವಿಸುವ ಮಲೆನಾಡಿಗರು ಅನುಸರಿಸುವ ಜೀವನ ರೀತಿಯನ್ನು ಡಿ.ವಿ.ಜಿ.ಯವರ ಮಂಕುತಿಮ್ಮನ ಕಗ್ಗದ ಹಿನ್ನೆಲೆಯಲ್ಲಿ ವಿವರಿಸಿದರೆ...

*ಮುಂದೇನೊ, ಮತ್ತೇನೊ, ಇಂದಿಗಾ ಮಾತೇಕೆ ?।*
*ಸಂದರ್ಭ ಬರಲಿ, ಬಂದಾಗಳಾ ಚಿಂತೆ ॥*
*ಹೊಂದಿಸುವನಾರೊ, ನಿನ್ನಾಳಲ್ಲ, ಬೇರಿಹನು।*
*ಇಂದಿಗಿಂದಿನ ಬದುಕು... ಮಂಕುತಿಮ್ಮ*

ತಾತ್ಪರ್ಯ... "ಮುಂದೇನೊ, ಮತ್ತೇನೊ ಎಂಬ ಚಿಂತೆಯು ಏಕೆ ? ಸಮಯ ಬರಲಿ, ಬಂದಾಗ ಚಿಂತಿಸೋಣ. ನಾಳಿನ ಹೊರೆಯು ಇಳಿಸುವವನೊಬ್ಬನುಂಟು, ಇಂದಿಗೆ ಇಂದಿನ ಬದುಕು ಸಾಕು!"

ನಿಜಾರ್ಥದಲ್ಲಿ ಇದು ಮಲೆನಾಡಿಗರ ಬದುಕು! ವಾರದ ಕೊನೆಯಲ್ಲಿ ಮಲೆನಾಡಿಗೆ ಭೇಟಿ ನೀಡುವ ಪ್ರವಾಸಿಗರದಲ್ಲ!

ರಾಜೀವ್ ಎನ್. ಮಾಗಲ್
ಶ್ರೀ ಸಾಯಿ ಸಿರಿ ಎಸ್ಟೇಟ್, ಅಂಚೆಪೆಟ್ಟಿಗೆ – ೬೩, ಸಕಲೇಶಪುರ – ೫೭೩ ೧೩೪, ಹಾಸನ ಜಿಲ್ಲೆ

# ಏಸುಕ್ರಿಸ್ತ ಮತ್ತು ಕಾಫಿಲೋಟ

**ಶಂಕರ**

"ಬೇಗ ಪೂಜೆ ಮುಗಿಸಿ ಬಂದು ಊಟ ಮಾಡಿ ರೆಡಿಯಾಗಿ. ಆ ಜೋಸೆಫ್ ಸರಿಯಾದ ಟೈಮ್ಗೆ ಬಂದ್ಬಿಡ್ತಾರೆ?", ಶಂಕರನ ಹೆಂಡತಿ ಅಡುಗೆಮನೆಯಿಂದ ಕೂಗಿದಳು. ಜರ್ಮನಿಯಲ್ಲಿ ಮೂರು ತಿಂಗಳು ಕಳೆಯಬೇಕಾಗಿದ್ದುದರಿಂದ ಸೂಟ್ಕೇಸ್ ದೊಡ್ಡದೇ ಇತ್ತು. ಅದರಲ್ಲಿ ಮಡಿವಂತ ಶಂಕರನ ಕುಕ್ಕರ್, ಮೆಂತ್ಯದ ಪುಡಿ, ಚಟ್ನಿ ಪುಡಿ, ಇವುಗಳದ್ದೇ ಹೆಚ್ಚು ತೂಕ. ಬೇಕಾದ ಎಲ್ಲ ಸಾಮಾನುಗಳು ಮತ್ತು ಪಾಸ್ಪೋರ್ಟ್ ಹಾಗೂ ಇತರ ಕಾಗದ ಪತ್ರಗಳು ಇವೆ ಎಂದು ಕೊನೆಯ ಬಾರಿಗೆ ಖಾತ್ರಿ ಮಾಡಿಕೊಂಡ ಶಂಕರ ಪೂಜೆ, ಊಟಗಳತ್ತ ಗಮನ ಹರಿಸಿದ. ಶ್ರದ್ಧೆಯಿಂದ ಪೂಜೆ ಮಾಡಿ ಊಟಕ್ಕೆ ಹೊರಟ.

**ಜೋಸೆಫ್**

ಸೈನ್ಯದಿಂದ ನಿವೃತ್ತನಾಗಿ ಮತ್ತೆ ಖಾಸಗಿ ಕಂಪನಿಯಲ್ಲಿ ಕೆಲಸಕ್ಕೆ ಸೇರಿದ್ದ ಜೋಸೆಫ್‌ಗೆ ಎಲ್ಲವೂ ಸರಿಯಾದ ಸಮಯಕ್ಕೆ ಆಗಬೇಕೆಂಬ ನಿಯಮ. ಪ್ರಯಾಣಕ್ಕೆ ತಕ್ಕ ಬಟ್ಟೆ ತೊಟ್ಟು, ಸೂಟ್ಕೇಸನ್ನು ಬಾಗಿಲಿನ ಹತ್ತಿರ ನಿಲ್ಲಿಸಿ, ಶಿಸ್ತಿನಿಂದ ಕುಳಿತ. ಮಾಡಬೇಕಾದ ಸಿದ್ಧತೆಗಳ, ತೆಗೆದುಕೊಂಡು ಹೋಗಬೇಕಾದ ಸಾಮಾನುಗಳು ಮತ್ತು ಕಾಗದಪತ್ರಗಳ ಪಟ್ಟಿಯನ್ನು ತಲೆಯಲ್ಲೇ ಪರಿಶೀಲಿಸಿ, ಎಲ್ಲವೂ ಇವೆ ಎಂದು ಖಾತ್ರಿ ಮಾಡಿಕೊಂಡು ಮೊದಲೇ ಕಾದಿರಿಸಿದ್ದ ಟ್ಯಾಕ್ಸಿಯ ದಾರಿ ಕಾಯುತ್ತ ಕುಳಿತ. "ಅಮ್ಮನನ್ನು ಸರಿಯಾಗಿ ನೋಡಿಕೊಳ್ಳಿ" ಎಂದು ಮಕ್ಕಳಿಬ್ಬರಿಗೂ ಹಾಸ್ಯದಿಂದ ಹೇಳುತ್ತ ಮನೆಯವರೊಂದಿಗೆ ಮಾತನಾಡುತ್ತಿದ್ದಂತೆಯೇ ಟ್ಯಾಕ್ಸಿ ಬಂದಿತ್ತು.

ಅವನು ಎದ್ದು ಹೊರಟಾಗ, "ದೇವರಿಗೆ ಪೂಜೆ ಮಾಡಿ ಹೋಗಿ" ಎಂದಳು ಅವನ ಹೆಂಡತಿ. ದೇವರಲ್ಲಿ ನಂಬಿಕೆ ಇದ್ದರೂ, ಇವೆಲ್ಲದರ ಅಭ್ಯಾಸವಿರಲಿಲ್ಲ ಅವನಿಗೆ. ಆದರೂ ಅವಳ ಮಾತಿಗೆ ಬೆಲೆಕೊಟ್ಟು, ಊಟದ ಮನೆಯ ಮಾಡದಲ್ಲಿದ್ದ ಶಿಲುಬೆಯ ಮುಂದೆ ಎರಡು ನಿಮಿಷ ಕಣ್ಮುಚ್ಚಿ, ಕೈಕಟ್ಟಿ ನಿಂತಿದ್ದು, ಶಿಲುಬೆಯ ಚಿಹ್ನೆಯನ್ನು ಹೋಲುವಂತೆ ಕೈಯಾಡಿಸಿ, ಹೊರಟ.

**ಚೆರಿಯನ್**

"ಮಾಮ್ ಅದೆಲ್ಲಿ, ಮಾಮ್ ಇದೆಲಿ" ಅನ್ನುತ್ತ ಅಮ್ಮನ ಸಹಾಯದಿಂದ ಸೂಟ್ಕೇಸ್ ತುಂಬಿಸಿದ. "ಎರಡು ದಿನದಿಂದ ಹೇಳ್ತಿದೀನಿ, ಈಗ ಎಲ್ಲ ದಭ ದಭ ಮಾಡ್ತಿದೀಯ", ಗದರಿಕೆಯ ಸುಳಿವೇ ಇಲ್ಲದ ದನಿಯಲ್ಲಿ ಗದರಿದಂತೆ ಹೇಳಿದಳು ಅಮ್ಮ. ಕೊನೆಗೂ ಎಲ್ಲವನ್ನೂ ತುಂಬಿ, ಸೂಟ್ಕೇಸಿನ ಮೇಲೆ ಕುಳಿತು ಅದರ ಬಾಯಿ ಮುಚ್ಚಿಸಿದ. ಊಟ ಕಲೆಸಿ, ಟೇಬಲ್ ಮೇಲೆ ಇಟ್ಟು ಅಮ್ಮ ಅವನ ಸುತ್ತಲೂ ನೊಣದಂತೆ ಸುತ್ತಾಡುತ್ತ ಅವನು ಸರಿಯಾಗಿ ಊಟ ಮಾಡುವುದನ್ನು ಖಾತ್ರಿ ಮಾಡಿಕೊಂಡಳು. ಅವನು ಊಟ ಮಾಡಿದಷ್ಟು ಹೊತ್ತೂ, ಬೆಚ್ಚಗೆ ಬಟ್ಟೆ ಹಾಕಿಕೊ, ಸರಿಯಾಗಿ ಊಟ ಮಾಡು, ಇತ್ಯಾದಿಯಾಗಿ ತಾಕೀತು ಮಾಡಿದಳು.

ಅವನ ಊಟದ ಕೊನೆಯ ಹಂತ ತಲುಪುವ ಹೊತ್ತಿಗೇ ಟ್ಯಾಕ್ಸಿಯ ಡ್ರೈವರ್ ಫೋನ್ ಮಾಡಿ, ಬಂದಿದ್ದೇನೆ ಎಂದ. ಅವಸರದಲ್ಲಿ ಊಟ ಮುಗಿಸಿ, ಬೂಟು ಧರಿಸಿ ಹೊರಟ ಚೆರಿಯನ್.

**ಜೆ. ಎಲ್. ಅನಿಲ್ ಕುಮಾರ್**

ಶಂಕರನ ಪ್ರಶ್ನೆಯಿಂದ ಆಶ್ಚರ್ಯಗೊಂಡ ಚೆರಿಯನ್, ಹೆಮ್ಮೆಯಿಂದ ಹೇಳಿದ, "ಸಂತ ಥಾಮಸ್ ಭಾರತದಲ್ಲಿ ಮೊತ್ತ ಮೊದಲು ಮತಾಂತರ ಮಾಡಿದ ಜನರೆಲ್ಲ ನಂಬೂದಿರಿ ಬ್ರಾಹ್ಮಣರು. ಅವರ ಸಂತತಿಯೇ ಸಿರಿಯನ್ ಕ್ಯಾಥೊಲಿಕ್‌ಗಳು. ನಮ್ಮ ಪೂರ್ವಜರೆಲ್ಲರೂ ಬ್ರಾಹ್ಮಣರೇ. ಅದಕ್ಕೇ ನಾನು ಅವನ ಲೋಟ ಎತ್ತುವುದಿಲ್ಲ".



ಅವನು ಟ್ಯಾಕ್ಸಿ ಹತ್ತುವ ವೇಳೆಗೆ, ಅವನ ಪಾಸ್ಪೋರ್ಟ್ ಮತ್ತಿತರ ಕಾಗದ ಪತ್ರಗಳಿದ್ದ ಸಂಚಿಯನ್ನು ತಂದ ಅಮ್ಮ, ದೇವರಿಗೆ ನಮಸ್ಕಾರ ಮಾಡಿ ಹೊರಡು ಎಂದು ಆಜ್ಞಾಪಿಸಿದಳು. ಗೊಣಗುತ್ತ ಒಳ ಓಡಿ, ಶಿಲುಬೆಗೆ ನಮಸ್ಕಾರ ಹಾಕಿ, ಹೊರ ಓಡಿ, ಟ್ಯಾಕ್ಸಿಯಲ್ಲಿ ಕುಳಿತು ನಿಟ್ಟುಸಿರುಬಿಟ್ಟ. ಸೂಟ್‌ಕೇಸ್ ತುಂಬಿಸಲು ಅಮ್ಮ ಮಾಡಿದ ಸಹಾಯಗಳನ್ನು ಮರೆತು ದೇವರಿಗೆ ನಮಸ್ಕಾರ ಹಾಕು ಎಂದು ತೊಂದರೆ ಕೊಟ್ಟದ್ದಕ್ಕೆ ಮನಸ್ಸಿನಲ್ಲೇ ಸಿಡುಕುತ್ತ ಏರ್ಪೋರ್ಟಿನತ್ತ ಸಾಗಿದ.

**ಎಂಜಲು ಲೋಟ**

ಮೂವರೂ ಮೊದಲು ಫ್ರಾಂಕ್‌ಫರ್ಟ್‌ನಲ್ಲಿ ಇಳಿದು, ಇನ್ನೊಂದು ವಿಮಾನವನ್ನು ಹತ್ತಿ, ಸ್ಟುಟ್ಗಾರ್ಟ್ ತಲುಪಿದರು. ಅವರು ತರಬೇತಿ ಪಡೆಯಲು ಹೊರಟಿದ್ದ ಕಂಪನಿಯವರು, ಅಲ್ಪಸ್ವಲ್ಪ ಇಂಗ್ಲಿಷ್ ತಿಳಿದಿದ್ದ ಡ್ರೈವರನ ಜೊತೆಗೆ ಏರ್ಪೋರ್ಟ್‌ಗೆ ಕಾರನ್ನು ಕಳಿಸಿದ್ದರು. ಅದರಲ್ಲಿ ಕುಳಿತು, ಅಲ್ಲಿಗೆ ಹತ್ತಿರದ ಸಣ್ಣ ಊರು, ಕಿರ್ಚ್‌ಹೈಮ್‌ಗೆ ತೆರಳಿದರು. ಇನ್ನು ಮೂರು ತಿಂಗಳು ಅವರಿಗೆ ಅಲ್ಲೇ ವಾಸ. ಮೂವರಿಗೂ ವಿದೇಶ ಪ್ರಯಾಣದ ಮೊದಲ ಅನುಭವ. ಸಮಾಧಾನದ ಮಾತೆಂದರೆ, ಮೂರು ಜನರೂ ಒಂದೇ ಅಪಾರ್ಟ್‌ಮೆಂಟಿನಲ್ಲಿ ಉಳಿದು ಕೊಳ್ಳಬೇಕಿತ್ತು. ಮಾರನೆಯ ದಿನದಿಂದಲೇ ತರಬೇತಿ ಪ್ರಾರಂಭವಾಯಿತು.

## ಅಭಿನಂದನೆ

ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ೨೦೧೮ನೇ ಸಾಲಿನ 'ನೃಪತುಂಗ ಸಾಹಿತ್ಯ ಪ್ರಶಸ್ತಿ'ಯು ದಲಿತ ಕವಿ ಸಿದ್ಧಲಿಂಗಯ್ಯ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ದಿನವೂ ಬೆಳಿಗ್ಗೆ ಬೇಗ ಎದ್ದು ಶಂಕರನೇ ಕಾಫಿ ಮಾಡಿ ಇತರರನ್ನು ಎಬ್ಬಿಸುವುದು. ಮೂರೂ ಜನ ಅದೂ ಇದೂ ಮಾತನಾಡುತ್ತ ಕಾಫಿಕುಡಿಯುವುದು. ಇನ್ನಿಬ್ಬರೂ ಸ್ನಾನ ಮುಗಿಸಿ, ಬೆಳಗಿನ ಉಪಾಹಾರ ಸಿದ್ಧ ಮಾಡುವ ಹೊತ್ತಿಗೆ ಬಾಲ್ಕನಿಗೆ ಹೋಗಿ ಸಿಗರೇಟ್ ಸೇದಿ, ಒಳಬಂದು ಜೋಸೆಫ್ ಕೂಡ ತಯಾರಾಗುವುದು. ಮೂವರೂ ಸೇರಿ, ಮನೆಯಲ್ಲಿ ಅಲ್ಲಿ ಇಲ್ಲಿ ಇಟ್ಟಿದ್ದ ಸಾಮಾನು, ಪಾತ್ರೆ, ಲೋಟ, ಚಮಚಗಳನ್ನು ಒಂದೆಡೆ ಸೇರಿಸಿ ಒಪ್ಪಮಾಡಿ ಹೊರಡುವುದು. ಇದು ಅವರ ದಿನನಿತ್ಯದ ದಿನಚರಿಯಾಯಿತು. ಆ ರೀತಿ ಒಪ್ಪಮಾಡಿ ಹೋಗುವುದು ಅಲ್ಲಿಯ ನಿಯಮ. ಇವರಿಲ್ಲದ್ದಾಗ ಬಂದು ಮನೆಯನ್ನು ಶುಚಿಗೊಳಿಸಿ ಹೋಗುವ ಕೆಲಸದಾಕೆಗೆ ತೊಂದರೆಯಾಗಬಾರದು ಎನ್ನುವುದಕ್ಕಾಗಿ ಈ ನಿಯಮ. ಹಾಗೆ ಮಾಡದೆಯೇ ಕೆಲಸಕ್ಕೆ ಹೋಗಿದ್ದು, ಕೆಲಸದಾಕೆ ತನಗೆ ಕೆಲಸ ಮಾಡಲು ಕಷ್ಟವಾಯಿತೆಂದು ಮನೆಯ ಮಾಲಕನಿಗೆ ದೂರಿತ್ತರೆ, ಇವರು ದಂಡ ತೆರಬೇಕಿತ್ತು.

ಒಂದು ವಾರ ಈ ರೀತಿ ಕಳೆದ ನಂತರ, ಶಂಕರನಿಗೆ ಒಂದು ಸಂಶಯ ಮೂಡಿತು. ಮೂರೂ ಕಾಫಿ ಲೋಟಗಳನ್ನು ತೆಗೆದು, ತೊಳೆದು ಒಳಗಿಡುವ ಕೆಲಸವನ್ನು ತಾನು ಮತ್ತು ಜೋಸೆಫ್ ಮಾತ್ರ ಮಾಡುತ್ತೇವೆ. ಇತರ ಕೆಲಸಗಳಲ್ಲಿ ತನ್ನ ಪಾಲನ್ನು ಚೆರಿಯನ್ ಸಹ ಮಾಡುತ್ತಿದ್ದರೂ, ಈ ಕೆಲಸವನ್ನು ಮಾತ್ರ ಮಾಡುತ್ತಿಲ್ಲ ಎನ್ನುವುದೇ ಈ ಸಂಶಯ. ಪಾತ್ರೆ ತೊಳೆಯುವ ಕೆಲಸ ಚೆರಿಯನ್‌ಗೆ ಇಷ್ಟವಿಲ್ಲ ವೆಂದೇನಿಲ್ಲ. ತನ್ನ ಊಟದ ತಟ್ಟೆಯನ್ನು ತೊಳೆಯುವುದು, ಮುಸುರೆ ಪಾತ್ರೆಯನ್ನು ತೊಳೆಯುವುದು, ಇವನ್ನೆಲ್ಲ ತಗಾದೆ ಇಲ್ಲದೆ ಮಾಡುತ್ತಿದ್ದ. ಸರಿ, ಇನ್ನೊಂದು ವಾರ ನೋಡೋಣ ಎಂದು ಸುಮ್ಮನಾದ ಶಂಕರ.

ಎರಡನೆಯ ವಾರವೂ ಇದೇ ಆದಾಗ ಈ ಒಗಟನ್ನು ಬಿಡಿಸಲೇ ಬೇಕೆಂದು ತೀರ್ಮಾನಿಸಿ, ಒಂದು ಸಂಜೆ, ಚೆರಿಯನ್ನನ್ನು ಕೇಳಿಯೇ ಬಿಟ್ಟ. ಅವನು ಹಾಗೇನಿಲ್ಲವಲ್ಲ ಎಂದು ತಳ್ಳಿಹಾಕಿದರೂ, ಶಂಕರನಿಗೆ ಸಮಾಧಾನವಾಗಲಿಲ್ಲ. ಆರುಘಂಟೆಗೇ ಅಂಗಡಿಯ ಬಾಗಿಲುಗಳು ಮುಚ್ಚುವುದನ್ನು ನೆನೆಸಿ ಕೊಂಡ ಜೋಸೆಫ್, ಅಂದೇ ಸಂಜೆ, ಅವಸರವಾಗಿ ಸಿಗರೇಟ್ ಕೊಳ್ಳಲು ಹತ್ತಿರದ ಅಂಗಡಿಗೆ ಓಡಿದ. ಆಗ ಚೆರಿಯನ್ ಅವನಾಗಿಯೇ ಬಂದು ತಾನು ಲೋಟ ತೊಳೆಯದ ಕತೆಯನ್ನು ಹೇಳಿದ. ಅವನು ಹೇಳಿದ ಮಾತು ಶಂಕರನನ್ನು ತಬ್ಬಿಬ್ಬು ಮಾಡಿತ್ತು.

ಅವನು ಹೇಳಿದ್ದು ಇದು : "ನಾನು ಸಿರಿಯನ್ ಕ್ಯಾಥೊಲಿಕ್. ಜೋಸೆಫ್ ಬರಿಯ ಕ್ಯಾಥೊಲಿಕ್. ಅವನ ಪೂರ್ವಜರು ಏನು ಬೇಕಾದರೂ ಆಗಿದ್ದಿರ ಬಹುದು. ಕೊನೆಗೆ ಅಸ್ಪೃಶ್ಯರು ಕೂಡ. ಅದಕ್ಕೇ ನಾನು ಅವನ ಲೋಟ ಎತ್ತುವುದಿಲ್ಲ". ಕೇರಳದ ವಿಷಯವಾಗಲಿ, ಕ್ರಿಶ್ಚಿಯನ್ನರ ವಿಷಯವಾಗಲಿ ಹೆಚ್ಚು ತಿಳಿಯದ ಶಂಕರ ಕೇಳಿದ, "ನಿನ್ನ ಪೂರ್ವಜರು ಏನಾಗಿದ್ದರು ಅಂದು ನಿನಗೇನು ಗೊತ್ತು?"

ಶಂಕರನ ಪ್ರಶ್ನೆಯಿಂದ ಆಶ್ಚರ್ಯಗೊಂಡ ಚೆರಿಯನ್, ಹೆಮ್ಮೆಯಿಂದ ಹೇಳಿದ, "ಸಂತ ಥಾಮಸ್ ಭಾರತದಲ್ಲಿ ಮೊತ್ತ ಮೊದಲು ಮತಾಂತರ ಮಾಡಿದ ಜನರೆಲ್ಲ ನಂಬೂದಿರಿ ಬ್ರಾಹ್ಮಣರು. ಅವರ ಸಂತತಿಯೇ ಸಿರಿಯನ್ ಕ್ಯಾಥೊಲಿಕ್‌ಗಳು. ನಮ್ಮ ಪೂರ್ವಜರೆಲ್ಲರೂ ಬ್ರಾಹ್ಮಣರೇ. ಅದಕ್ಕೇ ನಾನು ಅವನ ಲೋಟ ಎತ್ತುವುದಿಲ್ಲ."

ಜೆ. ಎಲ್. ಅನಿಲ್ ಕುಮಾರ್
ನಂ. ೨೪೩೩, ಪಳನಿ ಕುಪ್ಪುಸ್ವಾಮಿ ಅನುಗ್ರಹಂ
೯ನೇ ಮುಖ್ಯರಸ್ತೆ, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು –೫೬೦ ೦೭೦




*ನವಕರ್ನಾಟಕ ಪ್ರಕಟಿಸಿರುವ ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ ಅವರು ಅನುವಾದಿಸಿರುವ ಶ್ರೀ ಪಂಕಜ್ ಸೇಖ್‌ಸರಿಯಾ ಅವರ 'ಕೊನೆಯ ಅಲೆ – ದ್ವೀಪವೊಂದರ ಕಥೆ' ಕೃತಿಯನ್ನು ೨೬–೦೮–೨೦೧೮ರಂದು 'ದೆಹಲಿ ಕರ್ನಾಟಕ ಸಂಘ'ದಲ್ಲಿ ಡಾ॥ ಪುರುಷೋತ್ತಮ ಬಿಳಿಮಲೆಯವರು ಬಿಡುಗಡೆ ಮಾಡಿದರು.*

*ವೇದಿಕೆಯಲ್ಲಿ ಶ್ರೀಮತಿ ಪೂಜಾ ರಾವ್, ಶ್ರೀ ಬೆಳ್ಳಿಯಪ್ಪ, ಶ್ರೀ ಎಸ್. ಕೃಷ್ಣಭಟ್, ಶ್ರೀ ಪಂಕಜ್ ಸೇಖ್‌ಸರಿಯಾ, ಡಾ॥ ಪುರುಷೋತ್ತಮ ಬಿಳಿಮಲೆ, ಶ್ರೀ ಕೆ. ಎಸ್. ಜಿ. ಶೆಟ್ಟಿ ಮತ್ತು ಶ್ರೀ ರಾಧಾಕೃಷ್ಣ ಅವರು ಉಪಸ್ಥಿತರಿದ್ದರು.*






ಅನುವಾದ : ಸಿ. **ಆರ್. ಶಾನಭಾಗ**
ಬೆಲೆ : ರೂ. ೨೫೦  ಪುಟ : ೨೫೬
ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – ೫೬೦ ೦೦೧

# ಮಾರ್ಕ್ಸ್‌ರವರ ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೊಂದು ಕೊಡುಗೆ

**ಕಾ**ರ್ಲ್ ಮಾರ್ಕ್ಸ್‌ರವರ ಇನ್ನೂರನೆಯ ಜನ್ಮಶತಾಬ್ದಿ ಹಾಗೂ ಅವರು ರಚಿಸಿದ "ದಾಸ್ ಕ್ಯಾಪಿಟಲ್" ಕೃತಿಗೆ ನೂರ ಐವತ್ತು ವರ್ಷ ತುಂಬಿದ ಅಂಗವಾಗಿ ನಾಡಿನ ಪ್ರಸಿದ್ಧ ನವಕರ್ನಾಟಕ ಪ್ರಕಾಶನ ಸಂಸ್ಥೆ ಮತ್ತು ಕ್ರಿಯಾ ಮಾಧ್ಯಮ "ದಾಸ್ ಕ್ಯಾಪಿಟಲ್" ಸೇರಿದಂತೆ, ಮಾರ್ಕ್ಸ್ ಅವರ ಇನ್ನಿತರೆ ಕೃತಿಗಳನ್ನು ಕನ್ನಡ ಸಾಹಿತ್ಯಕ್ಕೆ ಪರಿಚಯಿಸುವ ಮಹತ್ವದ ಯೋಜನೆಯನ್ನು ಆರಂಭಿಸಿವೆ. ಈಗಾಗಲೆ ಈ ಯೋಜನೆಯ ಅಂಗವಾಗಿ ನಾಲ್ಕು ಕೃತಿಗಳು ಬಿಡುಗಡೆಯಾಗುವುದರ ಮೂಲಕ ಮಾರ್ಕ್ಸ್‌ರವರ ಪ್ರಖರ ಪ್ರತಿಭೆಯ ಜೊತೆಗೆ ಅವರ ಅರ್ಥಶಾಸ್ತ್ರದ ಚಿಂತನೆಗಳು ಕನ್ನಡಿಗರಿಗೆ ಪರಿಚಯವಾಗುತ್ತಿವೆ.

ಕಾರ್ಲ್ ಮಾರ್ಕ್ಸ್ ಕೇವಲ ಪ್ರಸಿದ್ಧ ರಾಜಕೀಯ ಮತ್ತು ತತ್ವಶಾಸ್ತ್ರದ ತಜ್ಞ ಎಂದು ಭಾವಿಸಿರುವ ಬಹುತೇಕ ಮಂದಿಗೆ ಅವರೊಳಗೊಬ್ಬ ಅರ್ಥಶಾಸ್ತ್ರದ ಅದ್ಭುತ ವಿಶ್ಲೇಷಕ ಹಾಗೂ ತಜ್ಞ ಕೂಡ ಜೀವಂತವಾಗಿದ್ದ ಎಂಬುದಕ್ಕೆ ಅವರ "ತತ್ತ್ವಶಾಸ್ತ್ರದ ದಾರಿದ್ರ್ಯ", "ಫ್ರಾನ್ಸ್‌ನಲ್ಲಿ ಅಂತರ್ಯುದ್ಧ", "ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೊಂದು ಕೊಡುಗೆ" ಹಾಗೂ "ಭಾರತವನ್ನು ಕುರಿತು ಮಾರ್ಕ್ಸ್" ಎಂಬ ನಾಲ್ಕು ಕೃತಿಗಳು ಸಾಕ್ಷಿಯಾಗಿವೆ. ಮನುಷ್ಯನ ಜಗತ್ತಿನ ಆರ್ಥಿಕ ಚಟುವಟಿಕೆಗಳನ್ನು ವಿಶ್ಲೇಷಿಸುವ ಅರ್ಥಶಾಸ್ತ್ರವು ಮನುಕುಲದ ನಾಗರಿಕತೆಯ ಕಾಲದಿಂದಲೂ ರಾಜಕೀಯಶಾಸ್ತ್ರದ ಜೊತೆ ಜೊತೆಯಲ್ಲಿ ಒಂದು ಜ್ಞಾನ ಶಿಸ್ತುವಾಗಿ ಬೆಳೆದುಬಂದಿದೆ. ಬೆಬಿಲೋನಿಯಾ, ಮೆಸಪಟೋಮಿಯಾ, ಗ್ರೀಸ್ ನಾಗರಿಕತೆಗಳ ಜೊತೆಗೆ ಪರ್ಷಿಯಾ, ಚೀನಾ ಮತ್ತು ಭಾರತದಲ್ಲಿ ಅರ್ಥಶಾಸ್ತ್ರವು ಹಲವು ರೂಪಗಳಲ್ಲಿ ವಿಸ್ತರಿಸುತ್ತಾ ಬೆಳೆದುಬಂದಿರುವುದು ಈಗ ಇತಿಹಾಸ. ಅರಿಸ್ಟಾಟಲ್, ಚೀನಾದ ಚೀನ್ ಶಿ ಹ್ಯಾಂಗ್, ಮತ್ತು ಇಬೆನ್ ಕಾಲ್ಡನ್, ಭಾರತದ ಕೌಟಿಲ್ಯ ಇವರುಗಳು ಅರ್ಥಶಾಸ್ತ್ರದ ಚಿಂತನೆಗಳಿಗೆ ಅಡಿಪಾಯ ಹಾಕಿದವರಲ್ಲಿ ಪ್ರಮುಖರು. ಆದರೆ, ೧೭೭೬ರಲ್ಲಿ ಇಂಗ್ಲೆಂಡಿನ ಆ್ಯಡಂ ಸ್ಮಿತ್ ತನ್ನ "ವೆಲ್ತ್ ಆಫ್ ನೇಷನ್ಸ್" ಕೃತಿಯಲ್ಲಿ ಪ್ರಕೃತಿ ನಿಯಮದ ದೃಷ್ಟಿಕೋನದಲ್ಲಿ ಅರ್ಥಶಾಸ್ತ್ರವನ್ನು ವಿಶ್ಲೇಷಿಸುವುದರ ಮೂಲಕ ಭೂಮಿ, ಬಂಡವಾಳ ಮತ್ತು ಕಾರ್ಮಿಕರು ರಾಷ್ಟ್ರವೊಂದರ ಸಂಪತ್ತು ಎಂದು ಕರೆದನು. ಒಂದು ರಾಷ್ಟ್ರದ ಸಂಪತ್ತಿನ ಹಂಚಿಕೆ ಮತ್ತು ವಿನಿಯೋಗ, ಸರಕುಗಳ ವಿನಿಮಯ, ನಾಣ್ಯ ಪದ್ಧತಿ ಮತ್ತು ಚಲಾವಣೆ ಕುರಿತು ವ್ಯವಸ್ಥಿತ ರೀತಿಯಲ್ಲಿ ಆರ್ಥಿಕ ಚಿಂತನೆಗೆ ಹೊಸ ರೂಪ ಕೊಟ್ಟು ಇವುಗಳನ್ನು ವಾಣಿಜ್ಯ, ವ್ಯಾಪಾರಗಳ ಸಿದ್ಧಾಂತ ಎಂದು ವ್ಯಾಖ್ಯಾನಿಸಿದನು, ಹಾಗಾಗಿ ಆತನನ್ನು ಅರ್ಥಶಾಸ್ತ್ರದ ಪಿತಾಮಹನೆಂದು ಗುರುತಿಸಲಾಗಿದೆ. ನಂತರದ ದಿನಗಳಲ್ಲಿ ಥಾಮಸ್ ಮಾಲ್ತೂಸ್, ಡೇವಿಡ್ ರಿಕಾರ್ಡೊ ಮುಂತಾದವರು ಅರ್ಥಶಾಸ್ತ್ರದ ಚಿಂತನೆಗಳನ್ನು ಮತ್ತಷ್ಟು ವಿಸ್ತರಿಸಿದರು. ಮಾಲ್ತೂಸ್‌ನ ಜನಸಂಖ್ಯಾ ಸಿದ್ಧಾಂತ, ಡೇವಿಡ್ ರಿಕಾರ್ಡೊವಿನ ಗೇಣಿ ಸಿದ್ಧಾಂತಗಳು ಭೂಮಿ, ಬಂಡವಾಳ, ಕಾರ್ಮಿಕರು, ಕಾರ್ಮಿಕರ ಬೇಡಿಕೆ ಮತ್ತು ಪೂರೈಕೆ, ಕೆಳವರ್ಗದ ಜನರ ಜೀವನ ಮಟ್ಟದ ಸುಧಾರಣೆ ಇಂತಹ ಅಂಶಗಳು ಇವರುಗಳ ಸಿದ್ಧಾಂತದಲ್ಲಿ ಒಳಗೊಂಡಿದ್ದವು.

ನಂತರದ ದಿನಗಳಲ್ಲಿ ಕಾರ್ಲ್ ಮಾರ್ಕ್ಸ್ ಅವರ ಮೂಲಕ "ನಿಯೊ ಕ್ಲಾಸಿಕಲ್ ಸಿದ್ಧಾಂತ" ಎಂಬ ಹೊಸ ಚಿಂತನೆಯೊಂದು ಬೆಳೆದುಬಂದಿತು. ಕಾರ್ಮಿಕರ ಶ್ರಮ ಕುರಿತ ಚಿಂತನೆಯನ್ನು ಇದು ಒಳಗೊಂಡಿತ್ತು. ಕೈಗಾರಿಕಾ ಕ್ರಾಂತಿಯ ಪರಿಣಾಮವನ್ನು ಬಲ್ಲವರಾಗಿದ್ದ ಮಾರ್ಕ್ಸ್ ತಮ್ಮ ಚಿಂತನೆಗಳನ್ನು ಪ್ರಕೃತಿ ವಿಜ್ಞಾನದಲ್ಲಿ ಬಳಸಲಾಗುವ ಗಣಿತಶಾಸ್ತ್ರದ ವಿಧಾನಗಳನ್ನು ಬಳಸಿ ಸಿದ್ಧಾಂತವೊಂದನ್ನು ಮಂಡಿಸಿದ್ದರು. ನವಶಾಸ್ತ್ರೀಯ ಅರ್ಥಶಾಸ್ತ್ರ ಎಂದು ಕರೆಯಲಾದ ಈ ಸಿದ್ಧಾಂತದಲ್ಲಿ ಬೇಡಿಕೆ, ಪೂರೈಕೆಯ ಜೊತೆಗೆ

**ಡಾ॥ ಎನ್. ಜಗದೀಶ್ ಕೊಪ್ಪ**

ಕಾರ್ಲ್ ಮಾರ್ಕ್ಸ್ ಕೇವಲ ಪ್ರಸಿದ್ಧ ರಾಜಕೀಯ ಮತ್ತು ತತ್ವಶಾಸ್ತ್ರದ ತಜ್ಞ ಎಂದು ಭಾವಿಸಿರುವ ಬಹುತೇಕ ಮಂದಿಗೆ ಅವರೊಳಗೊಬ್ಬ ಅರ್ಥಶಾಸ್ತ್ರದ ಅದ್ಭುತ ವಿಶ್ಲೇಷಕ ಹಾಗೂ ತಜ್ಞ ಕೂಡ ಜೀವಂತವಾಗಿದ್ದ ಎಂಬುದಕ್ಕೆ ಅವರ ''ತತ್ತ್ವಶಾಸ್ತ್ರದ ದಾರಿದ್ರ್ಯ'', ''ಫ್ರಾನ್ಸ್‌ನಲ್ಲಿ ಅಂತರ್ಯುದ್ಧ'', ''ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೊಂದು ಕೊಡುಗೆ'' ಹಾಗೂ ''ಭಾರತವನ್ನು ಕುರಿತು ಮಾರ್ಕ್ಸ್'' ಎಂಬ ನಾಲ್ಕು ಕೃತಿಗಳು ಸಾಕ್ಷಿಯಾಗಿವೆ. ಮನುಷ್ಯನ ಜಗತ್ತಿನ ಆರ್ಥಿಕ ಚಟುವಟಿಕೆಗಳನ್ನು ವಿಶ್ಲೇಷಿಸುವ ಅರ್ಥಶಾಸ್ತ್ರವು ಮನುಕುಲದ ನಾಗರಿಕತೆಯ ಕಾಲದಿಂದಲೂ ರಾಜಕೀಯಶಾಸ್ತ್ರದ ಜೊತೆ ಜೊತೆಯಲ್ಲಿ ಒಂದು ಜ್ಞಾನ ಶಿಸ್ತುವಾಗಿ ಬೆಳೆದುಬಂದಿದೆ.

ಮಾರುಕಟ್ಟೆಯ ಪ್ರಭಾವ ಕುರಿತು ಅವರು ವಿಶ್ಲೇಷಣೆ ಮಾಡಿದ್ದರು. ೧೯೩೦ರಲ್ಲಿ ಇಡೀ ವಿಶ್ವವು ಆರ್ಥಿಕ ಹಿಂಜರಿತಕ್ಕೆ ಒಳಗಾದ ನಂತರ ಅರ್ಥಶಾಸ್ತ್ರದಲ್ಲಿ ಹೊಸ ಮಾದರಿಯ ಚಿಂತನೆಗಳು ಆರಂಭಗೊಂಡವು. ಜಾನ್ ಮೇನಾರ್ಡ್ ಕೇನ್ಸ್ ಅವರ ಸಿದ್ಧಾಂತದ ಜೊತೆಗೆ ಹಲವು ಚಿಂತನೆಯ ಶಾಖೆಗಳು ಹುಟ್ಟಿಕೊಂಡವು. ಸ್ಕೂಲ್ ಆಫ್ ಥಾಟ್ಸ್ ಎಂದು ಕರೆಯಲಾಗುವ ವಿವಿಧ ಜ್ಞಾನಶಾಖೆಗಳಲ್ಲಿ ಮಾರುಕಟ್ಟೆಯ ಪ್ರಭಾವ, ಪ್ರಭುತ್ವದ ಪಾತ್ರ, ಹಣಕಾಸು ನಿರ್ವಹಣೆಯಲ್ಲಿ ಸರ್ಕಾರಗಳು ಕೈಗೊಳ್ಳಬೇಕಾದ ಜವಾಬ್ದಾರಿಯ ಅಂಶಗಳು ಒಳಗೊಂಡಿದ್ದವು. ೧೯೯೦ರವರೆಗೆ ಬೆಳೆದುಬಂದ ಈ ರೀತಿಯ ಚಿಂತನೆಗಳು ೧೯೯೦ರ ವೇಳೆಗೆ ಹಿನ್ನೆಲೆಗೆ ಸರಿದು ಜಾಗತೀಕರಣವೆಂಬ ಹೊಸ ಪರಿಕಲ್ಪನೆ ಮತ್ತು ವ್ಯವಸ್ಥೆ ಹುಟ್ಟಿಕೊಂಡ ಪರಿಣಾಮವಾಗಿ ತಮ್ಮ ಮಹತ್ವವನ್ನು ಕಳೆದುಕೊಂಡವು. ಜೊತೆಗೆ, ಅರ್ಥಶಾಸ್ತ್ರದ ವ್ಯಾಖ್ಯಾನವೂ ಕೂಡ ಬದಲಾಯಿತು. ಅಭಿವೃದ್ಧಿ ಅರ್ಥಶಾಸ್ತ್ರ, ಗ್ರಾಹಕರ ನಡವಳಿಕೆಯ ಅರ್ಥಶಾಸ್ತ್ರ (ಬಿಹೇವಿಯರಲ್ ಎಕನಾಮಿಕ್ಸ್), ಕೃಷಿ ಅರ್ಥಶಾಸ್ತ್ರ, ಮಾರುಕಟ್ಟೆಯ ಅರ್ಥಶಾಸ್ತ್ರ – ಹೀಗೆ ಹಲವು ಶಾಖೆಗಳು ಜನ್ಮ ತಾಳಿದವು. ಈ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಸ್ವೀಡನ್ನಿನ ಗುನ್ನಾರ್ ಮಿರ್ಡಲ್, ಅಮೇರಿಕಾದ ಜೋಸೆಫ್ ಸ್ಲಿಗ್ಲಿಟ್ಜ್, ಭಾರತದ ಅಮರ್ತ್ಯ ಸೇನ್, ಬಂಗ್ಲಾ ದೇಶದ ಮಹಮ್ಮದ್ ಯೂನಸ್ ಮುಂತಾದ ಮಾನವೀಯ ಮುಖವುಳ್ಳ ಅರ್ಥಶಾಸ್ತ್ರಜ್ಞರಾಗಿ ಹೊರಹೊಮ್ಮಿದರು. ಈ ಎಲ್ಲಾ ಮಹಾನುಭಾವರ ಚಿಂತನೆ ಹಾಗೂ ಕೃತಿಗಳಲ್ಲಿ ಜೀವಪರವಾದ ನಿಲುವುಗಳು ಮಾರ್ಕ್ಸ್ ಅವರ ಚಿಂತನೆಗಳಿಂದ ಪ್ರಭಾವಿತವಾಗಿವೆ. ಗುನ್ನಾರ್ ಮಿರ್ಡಲ್ ಅವರ "ದ ಏಷಿಯನ್ ಡ್ರಾಮ", ಜೋಸೆಫ್ ಸ್ಲಿಗ್ಲಿಟ್ಜ್ ಅವರ "ದ ಗ್ಲೋಬಲೈಜೇಷನ್ ಅಂಡ್ ಇಟ್ಸ್ ಡಿಸ್‌ಕಂಟೆಂಟ್ಸ್", ಅಮರ್ತ್ಯ ಸೇನ್‌ರವರ "ಐಡಿಯಾ ವಿತ್ ಜಸ್ಟೀಸ್", ಮಹಮ್ಮದ್ ಯೂನಸ್‌ರವರ "ಬ್ಯಾಂಕರ್ ಆಫ್ ಪೂರ್", ಈ ಎಲ್ಲಾ ಕೃತಿಗಳು ಮಾರ್ಕ್ಸ್ ಪ್ರತಿಪಾದಿಸಿದ ಮನುಷ್ಯಪರವಾದ ನಿಲುವುಗಳನ್ನು ಪುಷ್ಟೀಕರಿಸುತ್ತವೆ. ಈ ಕಾರಣಕ್ಕಾಗಿ ಇವರೆಲ್ಲರೂ ಅರ್ಥಶಾಸ್ತ್ರದ ನೊಬೆಲ್ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

ಇಂದಿನ ಜಗತ್ತು ಮಾರ್ಕ್ಸ್ ಅವರ "ನವಶಾಸ್ತ್ರೀಯ ಅರ್ಥಶಾಸ್ತ್ರವನ್ನು" ಪಕ್ಕಕ್ಕೆ ಸರಿಸಿ ಮುಂದೆ ಚಲಿಸಲು ಸಾಧ್ಯವಾಗದ ರೀತಿಯಲ್ಲಿ ಅವರು ಒಬ್ಬ ಪ್ರಭಾವಿ ಅರ್ಥಶಾಸ್ತ್ರಜ್ಞರಾಗಿರುವುದು ವಿಶೇಷವಾಗಿದೆ. ವಿಸ್ಮಯದ ಸಂಗತಿ ಯೆಂದರೆ, ಮಾರ್ಕ್ಸ್ ಜರ್ಮನಿಯನ್ನು ತ್ಯಜಿಸಿದ ನಂತರ ಜೀವನ ನಿರ್ವಹಣೆಗಾಗಿ ಲಂಡನ್ ನಗರದಲ್ಲಿ ಅವರು ಪತ್ರಿಕೆಗಾಗಿ ಬರೆದ ಲೇಖನಗಳು ಅರ್ಥಶಾಸ್ತ್ರದ ಚಿಂತನೆಗಳಾಗಿ ರೂಪ ಪಡೆದಿವೆ. ಅವರ ಭಾರತವನ್ನು ಕುರಿತ ಬರೆದ ಕೃತಿಯಲ್ಲಿ "ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ವ್ಯವಹಾರ" ಇಲ್ಲಿನ ತೆರಿಗೆ ಪದ್ಧತಿ ಕುರಿತಂತೆ ಚಿಂತನೆಗಳಿದ್ದರೆ, ತತ್ತ್ವಶಾಸ್ತ್ರದ ದಾರಿದ್ರ್ಯ ಕುರಿತ ಕೃತಿಯು ಪ್ರೂಧೋನ್ ಎಂಬುವರ ದಾರಿದ್ರ್ಯದ ತತ್ತ್ವಶಾಸ್ತ್ರ ಎಂಬ ಕೃತಿಗೆ ಪ್ರತಿಕ್ರಿಯೆಯಾಗಿ ಪತ್ರದ ರೂಪದಲ್ಲಿ ಬರೆದ ಚಿಂತನೆಗಳಾಗಿವೆ. ಹಣದ ವಿನಿಮಯ ಮೌಲ್ಯ, ಹಣ, ದುಡಿಮೆಯಿಂದ ಉಳಿತಾಯವಾಗುವ ಹಣ, ಶ್ರಮ ಮತ್ತು ವಿಭಜನೆ, ಯಂತ್ರಗಳು ಹಾಗೂ ಆಸ್ತಿ ಮತ್ತು ಗೇಣಿ, ಪೈಪೋಟಿ ಮತ್ತು ಏಕಸ್ವಾಮ್ಯತೆ ಹೀಗೆ ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ ಪ್ರತಿಕ್ರಿಯೆ ನೀಡಿದ್ದಾರೆ. ಈ ಎರಡೂ ಕೃತಿಗಳ ಮುಂದುವರಿದ ಚಿಂತನೆಗಳು ಎನ್ನುವಂತೆ ಅವರು ತಮ್ಮ "ರಾಜಕೀಯ ಅರ್ಥಶಾಸ್ತ್ರದ ವಿಮರ್ಶೆಗೊಂದು ಕೊಡುಗೆ" ಕೃತಿಯಲ್ಲಿ ಬಂಡವಾಳ, ಸರಕು, ಹಣದ ಚಲಾವಣೆ, ವಿನಿಮಯದ ಮೌಲ್ಯ, ನಾಣ್ಯಗಳು ಹಾಗೂ ಅವುಗಳ ಮೌಲ್ಯದ ಸಂಕೇತ ಇವುಗಳನ್ನು ಕುರಿತು ಗಂಭೀರ ಚಿಂತನೆ ನಡೆಸಿದ್ದಾರೆ.

ಉತ್ಪಾದನೆ, ಬಳಕೆ, ವಿತರಣೆ ಕುರಿತು ದಾಖಲಿಸಿರುವ ಮಾರ್ಕ್ಸ್, "ಬಂಡವಾಳವು ಕೆಲವೇ ಮಂದಿಯ ಕೈಯಲ್ಲಿ ಶೇಖರಗೊಳ್ಳುವುದರ ಮೂಲಕ ಒಂದೆಡೆ ಕೇಂದ್ರೀಕೃತಗೊಂಡು ಉತ್ಪಾದನೆಯ ಸಾಮರ್ಥ್ಯದ ಮೇಲೆ ಪರಿಣಾಮ ಬೀರುತ್ತದೆ. ಇಂತಹ ಬಂಡವಾಳವು ರೈತರು ಮತ್ತು ಕಾರ್ಮಿಕರಿಂದ ಬಂಡವಾಳಶಾಹಿ ಜಗತ್ತು ಕಸಿದುಕೊಂಡ ಸಂಪತ್ತು" ಎಂದು ವಿಶ್ಲೇಷಿಸುತ್ತಾರೆ. ಮಾನವ ಶ್ರಮವನ್ನು ಸಾರ್ವಜನಿಕ ಶ್ರಮ ಎಂದು ಕರೆದ ಮಾರ್ಕ್ಸ್, ಅದಕ್ಕೆ ಬಂಡವಾಳದಷ್ಟೇ ಮಾನ್ಯತೆಯನ್ನು ತಂದುಕೊಟ್ಟು ಮಹಾನ್ ಮಾನತಾವಾದಿ ಎಂದು ಬಣ್ಣಿಸಬಹುದು. ಈ ಮೂರು ಕೃತಿಗಳು ಉತ್ತಮವಾದ ಭಾಷೆಯಲ್ಲಿ ಕನ್ನಡಕ್ಕೆ ಅನುವಾದಗೊಂಡಿದ್ದರೂ ಸಹ ಇಲ್ಲಿನ ವಿಷಯಗಳು ಮಾರ್ಕ್ಸ್ ಅವರ ಚಿಂತನೆಗಳ ಆಸಕ್ತರಿಗೆ ಮತ್ತು ಅರ್ಥಶಾಸ್ತ್ರದ ಸಂಶೋಧಕರು, ವಿದ್ಯಾರ್ಥಿಗಳು ಹಾಗೂ ಪ್ರಾಧ್ಯಾಪಕರಿಗೆ ಹೆಚ್ಚಿನ ಉಪಯೋಗವಾಗುವುದರಲ್ಲಿ ಸಂಶಯವಿಲ್ಲ. ಆದರೆ, ಸಾಮಾನ್ಯ ಓದುಗರಿಗೆ ಇಂತಹ ವಿಷಯಗಳನ್ನು ಓದಿ ಜೀರ್ಣಿಸಿಕೊಳ್ಳುವುದು ಕೊಂಚಮಟ್ಟಿಗೆ ತ್ರಾಸದಾಯಕ. ಆದರೆ, ಕನ್ನಡದ ಸಾಹಿತ್ಯ ಮತ್ತು ಸಾಂಸ್ಕೃತಿಕ ಜಗತ್ತಿಗೆ ಕನ್ನಡದ ಭಾಷೆಯಲ್ಲಿ ಮಾರ್ಕ್ಸ್‌ರವರ ಚಿಂತನೆಗಳು ಕೃತಿಯ ರೂಪದಲ್ಲಿ ಪ್ರಕಟವಾಗುತ್ತಿರುವುದು ನಿಜಕ್ಕೂ ಅಭಿನಂದನಾರ್ಹ ಹಾಗೂ ಸ್ತುತ್ಯಾರ್ಹ ಕಾರ್ಯವಾಗಿದೆ.

**ಡಾ॥ ಎನ್. ಜಗದೀಶ್ ಕೊಪ್ಪ**
ನಂ. ೧೧೩, 'ಅಕ್ಷರ', ಆರೋಗ್ಯ ನಗರ ಬಡಾವಣೆ
ತೇಜಸ್ವಿ ನಗರ, ಧಾರವಾಡ – ೫೮೦ ೦೦೨

## 'ಹೊಸತು' ಪ್ರಾಯೋಜಕರಿಗೆ ಹೃತ್ಪೂರ್ವಕ ಧನ್ಯವಾದಗಳು

ನಾವು ಓದುಗರಲ್ಲಿ ಮಾಡಿಕೊಂಡ ವಿಶೇಷ ಮನವಿಗೆ ಸ್ಪಂದಿಸಿ ಆರ್ಥಿಕ ಬೆಂಬಲ ನೀಡುವ ಮೂಲಕ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಚಂದಾದಾರರನ್ನು ನೋಂದಾಯಿಸುವ / ಪ್ರಾಯೋಜಿಸುವ ಮೂಲಕ ನೆರವಾದ ಕೆಳಕಂಡ ಆತ್ಮೀಯ ಬಂಧುಗಳಿಗೆ 'ಹೊಸತು' ಬಳಗದ ಕೃತಜ್ಞತೆಗಳು.

1. **ಶ್ರೀ ಟಿ. ಎಂ. ಕುಮಾರ್,** ಬೆಂಗಳೂರು ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
2. **ಶ್ರೀ ಕ. ನಂ. ನಾಗರಾಜು,** ಬೆಂಗಳೂರು ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
3. **ಶ್ರೀ ಬಿ. ಕೆ. ಜನಗೊಂಡ,** ಬಾಗಲಕೋಟೆ ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
4. **ಶ್ರೀ ಶಶಿಧರ್ ತೋಡ್ಕರ್,** ಪ್ರಾಂಶುಪಾಲರು, ಹಿರೇಮಲ್ಲೂರು ಈಶ್ವರನ್ ಪದವಿ ಪೂರ್ವ ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಧಾರವಾಡ... **ರೂ.25,000/–** (ಚಂದಾ ಪ್ರಾಯೋಜಕತ್ವ)
5. **ಶ್ರೀ ಎಂ. ಬಿ. ಲಾಲ್,** ದೆಹಲಿ ... **ರೂ.10,000/–** (ಚಂದಾ ಪ್ರಾಯೋಜಕತ್ವ)
6. **ಶ್ರೀ ಯು. ಎಸ್. ಶ್ರೀನಿವಾಸನ್,** ಬೆಂಗಳೂರು ... **ರೂ.10,000/–** (ಚಂದಾ ನೋಂದಣಿ)

'ಹೊಸತು' ಓದುಗರು, ಹಿತೈಷಿಗಳು ಮುಂದೆಯೂ ಇದೇ ರೀತಿ ಸಹಕರಿಸಿ ಪತ್ರಿಕೆಯು ಆರ್ಥಿಕವಾಗಿ ಸದೃಢಗೊಳ್ಳಲು ನೆರವಾಗಬೇಕೆಂದು ವಿನಮ್ರವಾಗಿ ಕೋರುತ್ತೇವೆ.

**– ಪ್ರಕಾಶಕ**

ಅಮೀನ್‌ರನ್ನು ಆಫ್ರಿಕಾದ ಮುಂಚೂಣಿಯ ರಾಜಕೀಯ ಅರ್ಥಶಾಸ್ತ್ರಜ್ಞರೆಂದು ಪರಿಗಣಿಸಲಾಗುತ್ತಿತ್ತು. ವಿಶ್ವದ ದಕ್ಷಿಣ ಭಾಗವನ್ನು 'ತೃತೀಯ ವಿಶ್ವ'ವೆಂದೇ ಗುರುತಿಸಿದ ಅವರು ಬಂಡವಾಳಶಾಹಿ ವ್ಯವಸ್ಥೆಯಲ್ಲಿ (ಪ್ರಸ್ತುತ ಈ 'ತೃತೀಯ ವಿಶ್ವ' ಎಂಬ ಪದದ ಬಳಕೆ ಎಷ್ಟು ಸಮಂಜಸ ಎಂಬ ಪ್ರಶ್ನೆಯನ್ನು ಕೆಲವು ಚಿಂತಕರು ಮುಂದಿಡುತ್ತಾರೆ. ಏಕೆಂದರೆ ಸೋವಿಯತ್ ಯೂನಿಯನ್ ಪತನದ ತರುವಾಯ ಒಂದೇ ವಿಶ್ವದ (ಅಮೇರಿಕಾ) ಶಕ್ತಿ ಎಲ್ಲ ದೇಶಗಳ ಮೇಲೆ ತನ್ನ ಕಬಂಧ ಬಾಹುಗಳನ್ನು ಚಾಚುತ್ತಿದೆ ಎಂಬುವುದು ಅಂತಹವರ ಅಂಬೋಣ.) ಅಮೀನ್ 'ಅಲ್ಪಾವೃದ್ಧಿಯ ಅಭಿವೃದ್ಧಿ' ಎಂಬ ವಿಷಯದ ಬಗೆಗೆ ವಿಫುಲವಾಗಿ ವ್ಯಾಖ್ಯಾನಿಸಿ, ಗಮನೀಯ ಬೌದ್ಧಿಕ ಕೊಡುಗೆಗಳನ್ನು ನೀಡಿದರು.



# ನೇಪಥ್ಯಕ್ಕೆ ಸರಿದ ರ್‍ಯಾಡಿಕಲ್ ಚಿಂತಕ ಸಮೀರ್ ಅಮೀನ್

**ಸು**ಮಾರು ಐವತ್ತು ಮಂದಿಯಿದ್ದ ಒಂದು ತಂಡ ಬ್ರೆಝಿಲ್‌ನ ಪೋರ್ಟೊ ಅಲೆಗ್ರೆಯಲ್ಲಿ ಜೂನ್ ೨೦೦೧ರಲ್ಲಿ ಸಭೆ ಸೇರಿ, ವಿಶ್ವ ಆರ್ಥಿಕ ವೇದಿಕೆಗೆ ಪರ್ಯಾಯವಾಗಿ ವಿಶ್ವ ಸಾಮಾಜಿಕ ವೇದಿಕೆಗೆ ಚಾಲನೆಯನ್ನು ನೀಡಿತು. ಈ ತಂಡದಲ್ಲಿ ವಿವಿಧ ದೇಶಗಳ ಚಿಂತಕರು, ಬುದ್ಧಿಜೀವಿಗಳು, ಸಾಮಾಜಿಕ ಕಾರ್ಯಕರ್ತರು, ಅರ್ಥಶಾಸ್ತ್ರಜ್ಞರು ಹಾಗೂ ಇತರ ಕ್ಷೇತ್ರಗಳ, ಸಮಷ್ಟಿಯ ಹಿತಕ್ಕೆ ತುಡಿಯುವ ವ್ಯಕ್ತಿಗಳು ಇದ್ದರು. ಮನುಕುಲವನ್ನು ಬಾಧಿಸುತ್ತಿರುವ ಅಸಮಾನತೆ (ಎಲ್ಲ ಬಗೆಯ), ಲಿಂಗ ತಾರತಮ್ಯ, ಜನಾಂಗೀಯ ದ್ವೇಷ, ಜಾಗತೀಕರಣದ ಯಾಜಮಾನ್ಯದ ಅಟ್ಟಹಾಸದ ನಡೆಗಳು ಇತ್ಯಾದಿ ಹತ್ತು ಹಲವು ಸಮಸ್ಯೆಗಳು / ಸವಾಲುಗಳ ವಿರುದ್ಧ ಹೋರಾಡುತ್ತಿರುವ, ವಿಶ್ವ ಶಾಂತಿ, ಸಮ ಸಮಾಜದ ಸ್ಥಾಪನೆ ಮುಂತಾದುವುಗಳ ಪರವಾಗಿ ಶ್ರಮಿಸುತ್ತಿರುವ ನಾನಾ ಚಳವಳಿಗಳನ್ನು ಒಂದು ವೇದಿಕೆಯಡಿ ಸೇರಿಸಿ, ಅವುಗಳ ನಡುವೆ ವಿಚಾರ ವಿನಿಮಯವಾಗುವಂತಹ ಅವಕಾಶಗಳನ್ನು ಕಲ್ಪಿಸುವುದು ಈ ವೇದಿಕೆಯ ಮುಖ್ಯ ಗುರಿಗಳಲ್ಲಿ ಒಂದಾಗಿತ್ತು. ಇದು ಒಂದು ಪ್ರಕ್ರಿಯೆ ಆಗಿತ್ತು; ಚಳವಳಿಯಲ್ಲ. 'ಇನ್ನೊಂದು ಪರ್ಯಾಯವಿಲ್ಲ' ಎಂಬುದು ವಿಶ್ವ ಆರ್ಥಿಕ ವೇದಿಕೆಯ ಘೋಷವಾಕ್ಯವಾಗಿತ್ತು. ಇದಕ್ಕೆ ಪ್ರತಿಯಾಗಿ 'ಇನ್ನೊಂದು ವಿಶ್ವ ಸಾಧ್ಯ' ಎಂಬುದು ವಿಶ್ವ ಸಾಮಾಜಿಕ ವೇದಿಕೆಯ ಘೋಷಣೆಯಾಯಿತು. ಭಾರತ ಸಾಮಾಜಿಕ ವೇದಿಕೆ ಇದರ ಭಾಗವಾಗಿ ಅಸ್ತಿತ್ವಕ್ಕೆ ಬಂದಿತು. ಇದರಡಿ ಕರ್ನಾಟಕ ಸಾಮಾಜಿಕ ವೇದಿಕೆ ಕೆಲವು ವರ್ಷಗಳ ಕಾಲ ಸಕ್ರಿಯವಾಗಿತ್ತು. ಆ ಸಮಯದಲ್ಲಿ ಈಜಿಪ್ಟ್‌ನ ಎಡಪಂಥೀಯ, ರ್‍ಯಾಡಿಕಲ್ ಚಿಂತಕ ಸಮೀರ್ ಅಮೀನ್‌ರ ಹೆಸರು ಕೇಳಿಬರುತ್ತಿತ್ತು. ಅವರು ಈ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು, ಮೌಲ್ಯಯುತ ಕೊಡುಗೆಗಳನ್ನು ನೀಡುತ್ತಿದ್ದರು.

ಕಳೆದ ಆಗಸ್ಟ್ ೧೨, ೨೦೧೮ರಂದು ಅಸುನೀಗಿದ ಸಮೀರ್ ಅಮೀನ್ ಪ್ರಪಂಚದ ಒಬ್ಬ ಅಗ್ರಮಾನ್ಯ ಜನಪರ ಚಿಂತಕರಾಗಿದ್ದರು. ಈಜಿಪ್ಟ್‌ನ ಕೈರೋದಲ್ಲಿ ಸೆಪ್ಟೆಂಬರ್ ೩, ೧೯೩೧ರಲ್ಲಿ ಸಮೀರ್ ಜನಿಸಿದರು. ಇವರ ತಂದೆ ಈಜಿಪ್ಟ್‌ನವರಾಗಿದ್ದರೆ, ತಾಯಿ ಫ್ರಾನ್ಸ್ ದೇಶದ ಮೂಲದವರಾಗಿದ್ದರು. ಇಬ್ಬರೂ ವೈದ್ಯರಾಗಿದ್ದರು. ಅಮೀನ್‌ರ ಉನ್ನತ ಶಿಕ್ಷಣ ಪ್ಯಾರಿಸ್‌ನಲ್ಲಿ ಜರುಗಿತು. ೧೯೫೨ರಲ್ಲಿ ಅರ್ಥಶಾಸ್ತ್ರಕ್ಕೆ ಸಂಬಂಧಪಟ್ಟ ವಿಷಯದಲ್ಲಿ ಡಿಪ್ಲೊಮ ಪದವಿಯನ್ನು ಪಡೆದರು. ಅವರಿಗೆ ೧೯೫೭ರಲ್ಲಿ 'ಅಲ್ಪಾವೃದ್ಧಿ (ಅಂಡರ್ ಡೆವೆಲಪ್ಮೆಂಟ್)ಯ ಮೂಲಗಳು–ಜಾಗತಿಕ ಮಟ್ಟದ ಬಂಡವಾಳ ಸಂಚಯನ' ಎಂಬ ತಮ್ಮ ಮಹಾಪ್ರಬಂಧಕ್ಕೆ ಡಾಕ್ಟರೇಟ್ ಪದವಿ ಲಭಿಸಿತು. ಹಾಗೆಯೇ ಅವರು ಮ್ಯಾಥಮ್ಯಾಟಿಕಲ್ ಸ್ಟಾಟಿಸ್ಟಿಕ್ಸ್‌ನಲ್ಲಿ ಡಿಪ್ಲೊಮ ಗಳಿಸಿದರು. ಅವರು ಈಜಿಪ್ಟ್‌ನ ಯೋಜನಾ ಸಂಸ್ಥೆಯಲ್ಲಿ ೧೯೫೭–೧೯೬೦ರವರೆಗೆ ದುಡಿದರು. ತರುವಾಯ ಗಮಾಲ್ ಅಬ್ದೆಲ್ ನಾಸ್ಸರ್‌ನ ಆಡಳಿತ ಕಮ್ಯುನಿಸ್ಟರನ್ನು ಸದೆಬಡಿಯಲು ತೊಡಗಿದಾಗ, ಅಮೀನ್ ಆ ದೇಶವನ್ನು ತೊರೆದರು.

**ಮ. ಶ್ರೀ. ಮುರಳಿ ಕೃಷ್ಣ**

ಅವರು ೧೯೬೦–೧೯೬೩ರ ಅವಧಿಯಲ್ಲಿ ಮಾಲಿ ದೇಶದ ಯೋಜನಾ ಸಚಿವಾಲಯದ ಭಾಗವಾಗಿದ್ದರು. ೧೯೬೬ರಲ್ಲಿ ಫ್ರಾನ್ಸ್‌ನಲ್ಲಿ ಪ್ರೊಫೆಸರರಾಗಿ ತಮ್ಮ ಕೆಲಸವನ್ನು ಶುರುಮಾಡಿದ ಅವರು ನಂತರ ಸೆನೆಗಲ್ ದೇಶದ ಡಕಾರ್‌ನಲ್ಲಿ ೪೦ ವರ್ಷಗಳಿಗಿಂತಲೂ ಹೆಚ್ಚು ಕಾಲ ನೆಲೆನಿಂತರು. ೧೯೮೦ರಿಂದ ಅವರು 'ತೃತೀಯ ವಿಶ್ವ ವೇದಿಕೆ'ಯ ನಿರ್ದೇಶಕರಾಗಿದ್ದರು. ಸುಮಾರು ಇಪ್ಪತ್ತು ವರ್ಷಗಳ ಕಾಲ 'ಪರ್ಯಾಯ ವಿಶ್ವ ವೇದಿಕೆ'ಯ ಅಧ್ಯಕ್ಷರಾಗಿದ್ದರು.

ಅಮೀನ್‌ರನ್ನು ಆಫ್ರಿಕಾದ ಮುಂಚೂಣಿಯ ರಾಜಕೀಯ ಅರ್ಥಶಾಸ್ತ್ರಜ್ಞರೆಂದು ಪರಿಗಣಿಸಲಾಗುತ್ತಿತ್ತು. ವಿಶ್ವದ ದಕ್ಷಿಣ ಭಾಗವನ್ನು 'ತೃತೀಯ ವಿಶ್ವ'ವೆಂದೇ ಗುರುತಿಸಿದ ಅವರು ಬಂಡವಾಳಶಾಹಿ ವ್ಯವಸ್ಥೆಯಲ್ಲಿ (ಪ್ರಸ್ತುತ ಈ 'ತೃತೀಯ ವಿಶ್ವ' ಎಂಬ ಪದದ ಬಳಕೆ ಎಷ್ಟು ಸಮಂಜಸ ಎಂಬ ಪ್ರಶ್ನೆಯನ್ನು ಕೆಲವು ಚಿಂತಕರು ಮುಂದಿಡುತ್ತಾರೆ. ಏಕೆಂದರೆ ಸೋವಿಯತ್ ಯೂನಿಯನ್ ಪತನದ ತರುವಾಯ ಒಂದೇ ವಿಶ್ವದ (ಅಮೇರಿಕಾ) ಶಕ್ತಿ ಎಲ್ಲ ದೇಶಗಳ ಮೇಲೆ ತನ್ನ ಕಬಂಧ ಬಾಹುಗಳನ್ನು ಚಾಚುತ್ತಿದೆ ಎಂಬುವುದು ಅಂತಹವರ ಅಂಬೋಣ.) ಅಮೀನ್ 'ಅಲ್ಪಾವೃದ್ಧಿಯ ಅಭಿವೃದ್ಧಿ' ಎಂಬ ವಿಷಯದ ಬಗೆಗೆ ವಿಫುಲವಾಗಿ ವ್ಯಾಖ್ಯಾನಿಸಿ,

ಗಮನೀಯ ಬೌದ್ಧಿಕ ಕೊಡುಗೆಗಳನ್ನು ನೀಡಿದರು. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯಡಿ ವಿಶ್ವ ಆರ್ಥಿಕತೆ ಒಂದು ತೆರನಾದ ಶ್ರೇಣೀಕೃತ, ಅಸಮ ಹಾಗೂ ಶೋಷಣೆಯ ಬಗೆಯಲ್ಲಿ ವರ್ತಿಸುತ್ತದೆ. ಉತ್ತರದ 'ಪ್ರಥಮ ವಿಶ್ವ'ದ ದೇಶಗಳು ದಕ್ಷಿಣದ 'ತೃತೀಯ ವಿಶ್ವ'ದ ದೇಶಗಳನ್ನು ದಿವಾಳಿತನಕ್ಕೆ ಒಳಪಡಿಸಿ, ಅವುಗಳ ಮೇಲೆ ಸವಾರಿಯನ್ನು ಮಾಡಿ, ತಮ್ಮ ಅಭಿವೃದ್ಧಿಯನ್ನು ಕಂಡುಕೊಳ್ಳುತ್ತವೆ ಎಂಬುದು ಅವರ ಚಿಂತನೆಯ ಪ್ರಧಾನ ವಾದವಾಗಿತ್ತು. ಈ ಬಂಡವಾಳಶಾಹಿ ವಿನ್ಯಾಸವನ್ನು ಅನುಸರಿಸುವ ಉತ್ತರದ ದೇಶಗಳು ದಕ್ಷಿಣ ದೇಶಗಳ ಮೇಲೆ ಸಾಮ್ರಾಜ್ಯಶಾಹಿ ನಿಯಂತ್ರಣವನ್ನು ಹೊಂದುತ್ತವೆ. 'ಸಾಮ್ರಾಜ್ಯಶಾಹಿ' ಒಂದು ಘಟ್ಟವಲ್ಲ. ಅದು ಬಂಡವಾಳಶಾಹಿಯ ಅತ್ಯುನ್ನತ ಘಟ್ಟವೂ ಅಲ್ಲ. 'ಸಾಮ್ರಾಜ್ಯಶಾಹಿ' ಎಂಬುದು ಬಂಡವಾಳಶಾಹಿಯ ವಿಸ್ತರಣೆಯಲ್ಲೇ ಅಡಗಿದೆ. ಅದು ಜಾಗತಿಕ ದಕ್ಷಿಣದ ಜನತೆಯನ್ನು ಬಲಿಪಶುವನ್ನಾಗಿಸಿ, ಅವರನ್ನು ದಿವಾಳಿತನಕ್ಕೆ ಒಳಪಡಿಸುತ್ತದೆ. ಹೀಗಾಗಿ ವಿಶ್ವದಲ್ಲಿ ಸಾಮ್ರಾಜ್ಯಶಾಹಿ ಸ್ತಬ್ಧವಾಗಿಲ್ಲ. ಹಾಗೆಯೇ ವಿಶ್ವದಲ್ಲಿ ಒಂದೇ ಸಾಮ್ರಾಜ್ಯವಿದೆಯೆಂಬುದು ಸರಿಯಾದ ಅರ್ಥೈಸುವಿಕೆಯಲ್ಲ ಎಂಬುದು ಅವರ ಖಚಿತ ನಿಲುವುಗಳಾಗಿದ್ದವು.

೧೯೭೦ರ ದಶಕದಿಂದಲೇ ಅವರು 'ಅವಲಂಬನಾ ಪರಿಕಲ್ಪನೆ'ಯನ್ನು ಪ್ರತಿಪಾದಿಸಿದ ಮೂಲತರ್ಕ ಕಾರರಾಗಿದ್ದರು. ಅಂಚಿನಲ್ಲಿರುವ ದೇಶಗಳಿಂದ ಸಂಪನ್ಮೂಲಗಳ ಹರಹು ಉತ್ತರದ ಪ್ರಮುಖ ದೇಶಗಳನ್ನು ಹೇಗೆ ಸಮೃದ್ಧಿಗೊಳಿಸುತ್ತದೆ ಎಂಬುದನ್ನು ಅವರು ವಿದ್ವತ್ಪೂರ್ಣವಾಗಿ, ಪೂರಕ ಮಾಹಿತಿಗಳೊಡನೆ ಪ್ರಸ್ತುತಪಡಿಸುತ್ತಿದ್ದರು. ಈ ಬಗೆಯ ಅಂಚಿನಲ್ಲಿರುವ ದೇಶಗಳ 'ಮಿಗುತಾಯ ಸುಲಿಗೆ' (ಎಕ್ಸ್‌ಪ್ರಾಪ್‌ಪ್ರಿಯೆಷನ್)ಯನ್ನು ಅವರು 'ಸಾಮ್ರಾಜ್ಯಶಾಹಿ ಬಾಡಿಗೆ' ಎಂದು ಕರೆದರು. ದಕ್ಷಿಣ ಭಾಗದ ಈ ಸುಲಿಗೆ ಪ್ರಕ್ರಿಯೆಗಳು, ೨೦ನೇ ಶತಮಾನದಲ್ಲಿ ಅಲ್ಲಿನ ದಾಸ್ಯದ ವಿರುದ್ಧದ ವಿಮೋಚನಾ ಹೋರಾಟಗಳಿಗೆ ಕಾರಣವಾದವು. ಇದು ೨೧ನೇ ಶತಮಾನದ ಏಕಸ್ವಾಮ್ಯ ವಿತ್ತೀಯ ಬಂಡವಾಳ (ಮನಾಪಲಿ ಫೈನಾನ್ಸ್ ಕ್ಯಾಪಿಟಲ್) ವಿಷಯದಲ್ಲೂ ಜರುಗಬಹುದು ಎಂಬುದು ಅವರ ನಿರೀಕ್ಷೆಯಾಗಿತ್ತು.

ಈ ಕಾಲಮಾನದ ಏಕಸ್ವಾಮ್ಯ ವಿತ್ತೀಯ ಬಂಡವಾಳದ ಘಟ್ಟ ೧೯೭೦ರ ದಶಕದಲ್ಲಿ ಶುರುವಾಯಿತು. ಬಂಡವಾಳಶಾಹಿಯ ಸಂಚಯನಾ ಪ್ರವೃತ್ತಿ ಹಾಗೂ ನಿಶ್ಚಲತೆಯ ವಿರುದ್ಧವಾಗಿ ಈ ತರಹದ ವಿತ್ತೀಕರಣ ಜನ್ಮತಾಳಿತು. ೧೯೭೧ರಿಂದ ವಿಶ್ವ ಬಂಡವಾಳಶಾಹಿ ವ್ಯವಸ್ಥೆ ಇನ್ನೂ ಒಂದು ಬಿಕ್ಕಟ್ಟಿನೊಳಗೆ ನುಸುಳಿತು. ಪ್ರಾಯಶಃ ಇದು ಬಂಡವಾಳಶಾಹಿ ವ್ಯವಸ್ಥೆಯ ಕೊನೆಯ ಬಿಕ್ಕಟ್ಟು. ಏಕೆಂದರೆ ಅದು ತನ್ನ ಅಂತ್ಯದ ಹಂತದಲ್ಲಿದೆ. ಅದರ ದೀರ್ಘ ಇತಿಹಾಸದಲ್ಲಿ ಬಂಡವಾಳಶಾಹಿ ವ್ಯವಸ್ಥೆ, ೧೮೭೧ರಿಂದ ೧೯೪೫ರವರೆಗೆ ಮತ್ತು ೧೯೭೧ರಿಂದ ಇಂದಿನವರೆಗೆ ಎರಡು ದೀರ್ಘ ಬಿಕ್ಕಟ್ಟುಗಳನ್ನು ಕಂಡಿದೆ. ನಾವು ಈ ಅವಧಿಯಲ್ಲಿ ಬಾಳುತ್ತಿದ್ದೇವೆ ಎಂಬುದು ಅವರ ಅಭಿಮತಗಳಾಗಿದ್ದವು. ಬಂಡವಾಳಶಾಹಿ ವ್ಯವಸ್ಥೆ ಒಂದು ಅಪ್ರಚಲಿತ ಸಾಮಾಜಿಕ ವ್ಯವಸ್ಥೆಯಾಗಿದೆ ಎಂಬುದು ಅವರ ತೀರ್ಮಾನವಾಗಿತ್ತು.

ಈ ವಸ್ತುಸ್ಥಿತಿಯಲ್ಲಿ ಬಂಡವಾಳಶಾಹಿ ವ್ಯವಸ್ಥೆಯಿರುವಾಗಲೇ ಮನುಕುಲದ ಮುಂದೆ ಸಮಾಜವಾದದ ಆಯ್ಕೆ ಹಾಗೂ ಅಗತ್ಯ ಹೆಚ್ಚಾಗುತ್ತವೆ. ಈ ಅತಿ ಉದ್ದದ ಸುರಂಗದಿಂದ ಹೊರಬರುವಾಗ ನಾವು ಸಮಾಜವಾದಿ ವ್ಯವಸ್ಥೆಯತ್ತ ಹೆಜ್ಜೆ ಇಡುತ್ತೇವೆ. ಹೀಗಾಗುವ ಹಂತದಲ್ಲಿ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ಅಸಮ ಅಭಿವೃದ್ಧಿಯ ವಾರಸನ್ನು (ಲಿಗೆಸಿ) ಅಭಿಗಮಿಸಲಾಗುತ್ತದೆ. ಆಗ ಈ ಗ್ರಹದಲ್ಲಿರುವ ಎಲ್ಲ ಮಾನವರಿಗೆ ತಮ್ಮ ಸಾಮಾಜಿಕ ಅಭಿವೃದ್ಧಿಯ ಮೇಲೆ ಉತ್ತಮ ಹತೋಟಿ ಲಭ್ಯವಾಗುತ್ತದೆ ಎಂಬುದು ಅವರ ನಿಲುವುಗಳಾಗಿದ್ದವು.

ಅವರು ಮೂವತ್ತಕ್ಕೂ ಹೆಚ್ಚು ಪುಸ್ತಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಇಂಪಿರಿಯಲಿಸಂ ಅಂಡ್ ಅನ್‌ಈಕ್ವಲ್ ಡೆವಲಪ್‌ಮೆಂಟ್', ಗ್ಲೋಬಲ್ ಹಿಸ್ಟರಿ: ಎ ವ್ಯೂ ಫ್ರಮ್ ದಿ ಸೌತ್', 'ದಿ ಲಿಬರಲ್ ವೈರಸ್: ಪರ್ಮನೆಂಟ್ ವಾರ್ ಅಂಡ್ ದಿ ಅಮೇರಿಕನ್ಯೆರೈಝೇಷನ್ ಆಫ್ ದಿ ವರ್ಲ್ಡ್', 'ಯೂರೋಸೆಂಟ್ರಿಸಂ', 'ದಿ ಇಂಪ್ಲೋಷನ್ ಆಫ್ ಕಾಂಟೆಂಪೊರೆರಿ ಕ್ಯಾಪಿಟಲಿಸಂ', 'ದಿ ಲಾ ಆಫ್ ವರ್ಲ್ಡ್ ವೈಡ್ ವ್ಯಾಲ್ಯು', 'ಎಂಡಿಂಗ್ ದಿ ಕ್ರೈಸಿಸ್ ಆಫ್ ಕ್ಯಾಪಿಟಲಿಸಂ' ಮುಂತಾದವು ಸೇರಿವೆ. ರಾಜಕೀಯ ಆರ್ಥಿಕತೆ, ಸಮಾಜವಾದ, ಇಸ್ಲಾಂ ರಾಜಕಾರಣ, ಸಂಸ್ಕೃತಿ ಇತ್ಯಾದಿ ವಿಷಯಗಳ ಬಗೆಗೂ ಅವರು ಪುಸ್ತಕಗಳನ್ನು ರಚಿಸಿದ್ದಾರೆ.

ಹೀಗೆ ಸಮೀರ್ ಅಮೀನ್ ಜಗತ್ತಿನ ಒಳಿತಿಗಾಗಿ ಒಬ್ಬ ಸಾವಯವ ಚಿಂತಕರಾಗಿ, ಕ್ರಿಯಾಶೀಲ ಕಾರ್ಯಕರ್ತರಾಗಿ ಅನುಪಮ ಕೊಡುಗೆಗಳನ್ನು ನೀಡಿ ಅಸ್ತಂಗತರಾಗಿದ್ದಾರೆ. ಅವರಿಗೆ ನನ್ನ ನುಡಿನಮನ.

**ಮ. ಶ್ರೀ. ಮುರಳಿ ಕೃಷ್ಣ**
ನಂ ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯಾ ಲೇಔಟ್, ತುರಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

# ಕಾಣದ ದಾರಿ



ಎಲ್ಲಿ ಬಿಟ್ಟಿದ್ದೀರಿ...?
ಕಾಣದ ದಾರ ಕಟ್ಟಿದ್ದೀರಿ
ಅವರು, ಇವರು, ನೀವು ಅಂತಲ್ಲ
ಎಲ್ಲರು ಸೇರಿಯೇ ಕಟ್ಟಿದ್ದೀರಿ
ಸಮಾಜ, ಸಂಸ್ಕೃತಿ ಪರಂಪರೆ
ಎಲ್ಲ ಹೆಸರುಗಳಲ್ಲೂ ಇಟ್ಟಿಗೆ ಇಟ್ಟಿದ್ದೀರಿ
ನಮ್ಮಗಳ ತಡೆಗೋಡೆಗೆ
ಹೆಸರು ಯಾವುದಾದರೇನು...
ಹಾಕಿರುವ ಬೇಲಿಗೆ?
ಸದ್ದೇ ಮಾಡದೆ ಸಂಬಳ
ತರುವಷ್ಟು ಬೆಳೆದಿದ್ದೀವಿ.
ಹೌದಲ್ಲವೇ ಎಲ್ಲಾ ಕ್ಷೇತ್ರಗಳಲ್ಲಿ
ನಾವು ಕಾಲಿಟ್ಟಿದ್ದೀವಿ.
ಇಟ್ಟಿದೀವಿ ಅಷ್ಟೆ.
ಊರಲು, ಮೀರಲು, ಸಾಮರ್ಥ್ಯ
ತೋರಲು
ನೀವು ಎಲ್ಲಿ ಬಿಟ್ಟಿದ್ದೀರಿ?
ಕಾಣದ ದಾರ ಕಟ್ಟಿದ್ದೀರಿ

**ಪಿ. ಶಿಲ್ಪಾ,** ಮೈಸೂರು

ಡಾ॥ ರಹಮತ್ ತರೀಕೆರೆ

# ಚರಿತ್ರೆಯ ಪತ್ರಗಳಲ್ಲಿ ವಸಾಹತುಪ್ರಜ್ಞೆ

೧

**ನಾ**ಲ್ಕನೇ ಮೈಸೂರು ಯುದ್ಧದಲ್ಲಿ ಬ್ರಿಟಿಶರು ಟಿಪ್ಪುವನ್ನು ನವಾಬರು ಹಾಗೂ ಪೇಶ್ವೆಗಳ ನೆರವಿನೊಂದಿಗೆ ಸೋಲಿಸಿ ಕೊಂದ ಬಳಿಕ (೧೭೯೯) ಇನ್ನು ಭಾರತ ನಮ್ಮದಾಯಿತು ಎಂದು ಜಯಘೋಷ ಮಾಡಿದರಷ್ಟೆ . ಈ ಘಟನೆಯಿಂದ ಹಿಡಿದು ಅವರು ದೇಶ ಬಿಟ್ಟು ಹೋಗುವ ತನಕ (೧೯೪೭), ಒಂದೂವರೆ ಶತಮಾನದಲ್ಲಿ ಹಲವಾರು ರಾಜಕೀಯ ಪತ್ರಗಳು ರಚನೆಯಾದವು. ಮೈಸೂರು ಸೀಮೆಯಲ್ಲಿ ಇವು ನೇರವಾಗಿ ಮತ್ತು ಪರೋಕ್ಷವಾಗಿ ಮೈಸೂರು ಒಡೆಯರನ್ನೂ, ದಿವಾನರನ್ನೂ ಕಥಾನಾಯಕರನ್ನಾಗಿ ಮಾಡಿಕೊಂಡು ಹುಟ್ಟಿದವು. ಇವುಗಳಲ್ಲಿ ಮುಖ್ಯವಾದವು – ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೩); ದೇವಚಂದ್ರನ 'ರಾಜಾವಳಿ ಕಥಾಸಾರ' (೧೮೩೫); ಎಂ. ಶಿಂಗ್ರಯ್ಯನವರ 'ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ' (೧೯೦೫) ಹಾಗೂ 'ನಾಲ್ವಡಿ ಶ್ರೀಕೃಷ್ಣರಾಜ ಒಡೆಯರವರು' (೧೯೪೧); ಎಂ. ಎಸ್. ಪುಟ್ಟಣ್ಣನವರ 'ಕುಣಿಗಲು ರಾಮಶಾಸ್ತ್ರಿಗಳ ಚರಿತ್ರೆ' (೧೯೧೦) ಹಾಗೂ 'ಮಾಡಿದ್ದುಣ್ಣೋ ಮಹಾರಾಯ' (೧೯೧೫); ಡಿ.ವಿ.ಜಿ.ಯವರ 'ದಿವಾನ್ ರಂಗಾಚಾರ್ಲು' (೧೯೧೦) ಹಾಗೂ ಮೈಸೂರಿನ ದಿವಾನರು; ಯಂ. ರಾಮರಾಯರ 'ಪೂರ್ಣಯ್ಯನವರು' (೧೯೩೧), ಓ. ಎಲ್. ಲಿಂಗಣ್ಣಯ್ಯನವರ 'ಶ್ರೀ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರು' (೧೯೪೦) ಹಾಗೂ ಸಿ. ಕೆ. ವೆಂಕಟರಾಮಪ್ಪನವರ 'ಆಳಿದ ಮಹಾಸ್ವಾಮಿಯವರು' (೧೯೪೧). ಬ್ರಿಟಿಶರನ್ನು ಹಾಗೂ ಸ್ಥಳೀಯ ದೊರೆಗಳನ್ನು ಚಿತ್ರಿಸುವಲ್ಲಿ ಇವು ಪ್ರಕಟಿಸುವ ವಸಾಹತುಪ್ರಜ್ಞೆಯ ಸ್ವರೂಪವನ್ನು ಪರಿಶೀಲಿಸುವುದು ಈ ಲೇಖನದ ಉದ್ದೇಶ.

೨

ಈ ಪರಿಶೀಲನೆಯನ್ನು ಮುಮ್ಮಡಿಯವರು ಬ್ರಿಟಿಶರಿಗೆ ಬರೆದ ಪತ್ರವೊಂದರಿಂದ ಶುರು ಮಾಡಬಹುದು. ಗಂಡುಸಂತಾನವಿಲ್ಲದ ದೊರೆ, ಉತ್ತರಾಧಿಕಾರಿಯಾಗಿ ಅರಸು ಮನೆತನದ ಮಗುವನ್ನು ದತ್ತಕ ತೆಗೆದುಕೊಳ್ಳಬೇಕೆಂದು ನಿರ್ಧರಿಸಿ, ಅದಕ್ಕೆ ಬ್ರಿಟಿಶರ ಅನುಮತಿ ಕೋರಿ ಬರೆದ (೧೮೬೫) ಪತ್ರವಿದು. "ಇಂಡಿಯಾ ವೈಸ್ರಾಯಿ ಮತ್ತು ಗವರ್‍ನರ್ ಜನರಲ್ ಸರ್ ಜಾನ್ ಲಾರೆನ್ಸ್ ಜಿಸಿಬಿ ಮತ್ತು ಕೆಎಸ್ಐಯವರ ಸನ್ನಿಧಾನಕ್ಕೆ ಆದಾಬ್" ಎಂದು ಪತ್ರ ಶುರುವಾಗುತ್ತದೆ. "೧೭೯೯ನೆಯ ಇಸವಿಯಲ್ಲಿ ನಮ್ಮಖ್ ಹರಾಮನಾದ ಟೀಪೂಸುಲ್ತಾನನನ್ನು ಜಯಿಸಿ ನಮ್ಮ ಪುರಾತನ ಹಕ್ಕನ್ನು ವಿಚಾರಿಸಿ ಬ್ರಿಟಿಷ್‌ನವರು ಯಾವ ಹಸ್ತಗಳಿಂದ ನಮ್ಮ ಪುನಃಸ್ಥಾಪನೆ ಮಾಡಿ ಸಮಸ್ತ ಮರ್‌ತಬೆಯನ್ನು ಉಂಟುಮಾಡಿ ಪರ್‌ವರ್ಷ್ ಮಾಡಿಕೊಂಡು ಬರುತ್ತಾರೋ ಅದೇ ಹಸ್ತಗಳಿಂದ ನಮ್ಮಿಂದ ಸ್ವೀಕೃತರಾದ ಕುಮಾರರನ್ನು ಸಮಸ್ತ ಮಾನದಿಂದಲೂ ಘನತೆಯಿಂದಲೂ ಕೂಡ ಕಾಪಾಡಿಕೊಂಡು ಬರಬೇಕು. ೧೭೯೯ನೆಯ ಇಸವಿಯಲ್ಲಿ ನಮಗೂ ಈಸ್ಟ್ ಇಂಡಿಯಾ ಕಂಪನಿಯವರಿಗೂ ಹುಟ್ಟಿರುವ ತಹನಾಮೆಯಲ್ಲಿ ಕಂಡ ಕರಾರುಗಳೂ ಸಹ ಉಭಯ ಪಕ್ಷದಲ್ಲೂ ಕೂಡ ಆಚಂದ್ರಾರ್ಕ ಸ್ಥಾಯಿಯಾಗಿರಬೇಕೆಂದು ಮೊರೆಯಿಡುತ್ತಿದೆಯಾಗಿ ಸೂರ್ಯಚಂದ್ರ ಗತಿಯುಳ್ಳವರೆಗೂ ಮತ್ತು ಬ್ರಿಟಿಷ್‌ನವರ ಬಾಹುಟ ಇರುವವರೆಗೂ ನಮ್ಮನ್ನೂ ನಮ್ಮ ವಂಶಸ್ಥರನ್ನೂ ಕೂಡ ಚ್ಯುತಿಯಲ್ಲದೆ ಇವತ್ತಿನಿಂದಲೂ ಘನತೆಯಿಂದಲೂ ಸಂರಕ್ಷಿಸಿ ಬರತಕ್ಕದ್ದು ಬ್ರಿಟಿಷ್‌ನವರ ನ್ಯಾಯಕ್ಕೆ ಉಚಿತವಾಗಿಯೂ ಧರ್ಮಕ್ಕೆ ಹಿತವಾಗಿಯೂ ಇರುತ್ತೆ. ಆದ್ದರಿಂದ ನಮ್ಮ ಅನಂತರದಲ್ಲಿ ಇಂಡಿಯಾ ವೈಸ್ರಾಯಿ ಮತ್ತು ಗವರ್‍ನರ್ ಜನರಲ್ ಸಾಹೇಬ್ ಬಹದ್ದೂರ್‌ರವರು ನಮ್ಮ ಅಪೇಕ್ಷೆಯ ಮೇರೆಗೆ ನಮ್ಮ ಸಂತತಿಯವರನ್ನು ಕಾಪಾಡಿಕೊಂಡು ಬರಬೇಕೆಂದು ಬೇಡಿಕೊಳ್ಳುತ್ತೇವೆ. ರುಜು ಶ್ರೀಕೃಷ್ಣ" (ಎಂ. ಶಿಂಗ್ರಯ್ಯ : ೧೯೦೫ : ೩೯–೪೦) ಎಂದು ಕೊನೆಗೊಳ್ಳುತ್ತದೆ.

ಈ ಪತ್ರದಲ್ಲಿರುವ ಮುಖ್ಯ ಅಂಶಗಳೆಂದರೆ – ಅಧಿಕಾರವಂಚಿತ ದೊರೆಗೆ ತನ್ನ ಹಕ್ಕುಸ್ಥಾಪನೆಯಿಂದ ಹುಟ್ಟಿರುವ ಆರ್ತತೆ; ಅದಕ್ಕಾಗಿ ಬ್ರಿಟಿಶರನ್ನು ಮನವೊಲಿಸುವ ವಿಧೇಯತಮ ಒಕ್ಕಣೆ ಹಾಗೂ ರಾಜಕೀಯವಾಗಿ ದ್ವೇಷಿಸುತ್ತಿದ್ದ ಟಿಪ್ಪು ಕುರಿತ ಕಟುನುಡಿ. ಪತ್ರದ ಭಾಷೆ ಮತ್ತು ಒಕ್ಕಣೆಗಳು, ವಸಾಹತುಶಾಹಿ ಆಳಿಕೆ ಹುಟ್ಟಿಸಿರುವ ಅಸಹಾಯಕತೆ ಮತ್ತು ಹೊಸಸಾಧ್ಯತೆ ಎರಡನ್ನೂ ಒಳಗೊಂಡಿವೆ. ಟಿಪ್ಪುವಿಗೆ 'ವಿಶ್ವಾಸದ್ರೋಹಿ' ಎಂಬರ್ಥವುಳ್ಳ ನಿಂದಾಶಬ್ದವನ್ನು ಅವನ ಮನೆಮಾತಾದ ಉರ್ದುವಿನಿಂದಲೇ ಎತ್ತಿಕೊಂಡಿರುವುದು ಮಾರ್ಮಿಕ. ಆದರೆ ಈ ಪತ್ರದಲ್ಲಿ ಬ್ರಿಟಿಶರು ಮುಮ್ಮಡಿಯಿಂದ ಅಧಿಕಾರ ಕಿತ್ತುಕೊಂಡ (೧೮೩೧) ಪ್ರಕರಣವನ್ನು ಜಾಣತನದಿಂದ ಅಡಗಿಸಲಾಗಿದೆ. ಒಡೆಯರ ಪತ್ರಗಳಲ್ಲಿ ಬ್ರಿಟಿಶರನ್ನು ಸೃಷ್ಟಿಸ್ಥಿತಿಲಯಕರ್ತ ದೇವತೆಗಳನ್ನಾಗಿ ಪರಿಭಾವಿಸಿರುವ ಭಾವ ಸಾಮಾನ್ಯವಾಗಿದೆ. ರಮಾವಿಲಾಸ ಅಮ್ಮಣ್ಣಿಯವರು ಹತ್ತನೇ ಚಾಮರಾಜೇಂದ್ರರಿಗೆ ಪ್ರವಾಸದಲ್ಲಿದ್ದಾಗ ಬರೆದ ಪತ್ರದಲ್ಲಿ 'ಬ್ರಿಟಿಷ್ ಗವರ್ನಮೆಂಟಿನವರನ್ನು ತಂತೆತಾಯಿಗಳಂತೆ ಭಾವಿಸಿಕೊಂಡು ಇದೇವೆಂದೂ" ಗವರ್ನರ್ ಜನರಲ್ ಅವರಿಗೆ ತಿಳಿಸಬೇಕೆಂದು ಕೋರುವ (ಶಿಂಗ್ರಯ್ಯ : ೧೯೦೫ : ೮೭) ಸಾಲುಗಳಿವೆ. ಈ ಪತ್ರದ ಧಾಟಿಯನ್ನು ನಿಯಂತ್ರಿಸಿರುವುದು ಟಿಪ್ಪು ಮರಣಾನಂತರ ಬ್ರಿಟಿಶರ ಜತೆ ಮಾಡಿಕೊಂಡ ಕರಾರುನಾಮೆಯ (೧೭೯೯) ಬಿಗಿ ನಿರ್ಬಂಧಗಳು. ಚಾಮರಾಜ ಒಡೆಯರ್‌ಗೆ



ಶ್ರೀ ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರು

ಅಧಿಕಾರ ವಹಿಸಿಕೊಡುವ ೧೮೮೧ರ ತಹನಾಮೆಯ ೨೪ ಕರಾರುಗಳೂ ಇಷ್ಟೇ ಕಠಿಣವೂ ಏಕಪಕ್ಷೀಯವೂ ಆಗಿವೆ. "ಗ್ರೇಟ್ ಬ್ರಿಟನ್ ಮತ್ತು ಐರ್ಲೆಂಡ್ ರಾಜ್ಯಗಳಿಗೆ ರಾಣಿಯವರಾಗಿಯೂ ಹಿಂದೂಸ್ಥಾನದ ಚಕ್ರವರ್ತಿನಿಯವರಾಗಿಯೂ ಇರುವ ಮಹಾರಾಜ್ಞಿಯವರಿಗೂ ಅವರ ಹಕ್ಕುದಾರರಿಗೂ ಸಹ ಯಾವಾಗಲೂ ವಿಧೇಯರಾಗಿಯೂ ನಂಬಿಕೆಗೆ ಪಾತ್ರರಾಗಿಯೂ ಇರತಕ್ಕದು ಮತ್ತು ಅಂತಹ ವಿಧೇಯತೆಯ ಸಂಬಂಧದಿಂದ ಅವರು ಕೇಳಿದ ಸಹಾಯವನ್ನೆಲ್ಲ ಮಾಡುತ್ತಿರಬೇಕು" ಎಂಬುದು ಅವುಗಳಲ್ಲಿ ಒಂದು. ಇದಕ್ಕೆ ತಕ್ಕಂತೆ ಮೈಸೂರಿನ ದೊರೆ ಅಥವಾ ದಿವಾನರಾಗುವವರ ಚರ್ಚೆಯು ಬ್ರಿಟಿಶ್ ಪಾರ್ಲಿಮೆಂಟಿನಲ್ಲಿ ಅಖೈರುಗೊಳ್ಳುತ್ತಿತ್ತು. ಈ ಕರಾರುನಾಮೆ ಹಾಗೂ ಒಡೆಯರ ಪತ್ರಗಳ ಭಾಷೆ ಮತ್ತು ಮನೋಭಾವವು ಮೈಸೂರು ಆಸ್ಥಾನದ ಚರಿತ್ರಕಾರರ ಭಾಷೆ, ಧಾಟಿ ಹಾಗೂ ರಾಜಕೀಯ ಧೋರಣೆಯನ್ನು ಗಾಢವಾಗಿ ಪ್ರಭಾವಿಸಿತು. ಅದು ವಸಾಹತುಶಾಹಿ ಆಳ್ವಿಕೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡಿರುವ ಮತ್ತು ಅದರಿಂದ ಸಂಸ್ಥಾನಕ್ಕೆ ಒಳಿತಾಗುತ್ತದೆ ಎಂಬ ಧೋರಣೆಯಾಗಿ ಬದಲಾಯಿತು.

ವಸಾಹತುಶಾಹಿ ಆಳಿಕೆಯ ಭಾಗವಾಗಿ ಸಮಾಜದಲ್ಲಿ ಪ್ರವೇಶ ಪಡೆದ ಪಾಶ್ಚಿಮಾತ್ಯ ಆಧುನಿಕತೆಯು, ದೊರೆಗಳ ಹಾಗೂ ಅವರನ್ನು ಬೆಂಬಲಿಸುವ ವರ್ಗದ ವರ್ತನೆ ಮತ್ತು ಆಲೋಚನ ಕ್ರಮದಲ್ಲಿ ನಿರ್ಣಾಯಕ ಪಲ್ಲಟಗಳನ್ನು ತಂದಿತು. ಚಾಮರಾಜೇಂದ್ರ, ನಾಲ್ವಡಿ ಹಾಗೂ ಜಯಚಾಮರಾಜ – ಮೂವರೂ ದೊರೆಗಳು ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡ ಉದಾರವಾದಿ ಚಿಂತನೆಯವರಾಗಿದ್ದರು. ಕೆಲವರು ಯೂರೋಪು ಪ್ರವಾಸ ಮಾಡಿದರು. ಸಂಸ್ಥಾನದ ಆಳಿಕೆ, ಆಲೋಚನಕ್ರಮ, ಅಭಿವೃದ್ಧಿಯ ಕಲ್ಪನೆಗಳಲ್ಲಿ ಯೂರೋಪೀಕರಣವು ಆಚ್ಛಾದಿತವಾಗಿತ್ತು. ಮೈಸೂರು ಆಸ್ಥಾನ ಕಲಾವಿದರು ಕಂಡರಿಸಿರುವ ಮುಮ್ಮಡಿ ರಚಿತ 'ಶ್ರೀತತ್ವನಿಧಿ'ಯಲ್ಲಿರುವ ಚಿತ್ರಪಟಗಳನ್ನು ನೋಡಿದರೆ, ಜಮಾದಾರ ಸುಬೇದಾರರ ವೇಷಭೂಷಣಗಳು ಬಹುತೇಕ ಬ್ರಿಟಿಶ್ ಸೇನಾಧಿಕಾರಿಗಳ ಮಾದರಿಯಲ್ಲಿರುವುದು ತಿಳಿಯುತ್ತದೆ. ಇಂಗ್ಲೆಂಡಿನ ಚಕ್ರವರ್ತಿಗಳಂತೆ ಮಿಲಿಟರಿ ಪೋಷಾಕು ಧರಿಸುವ ಪದ್ಧತಿ ಬಹುಶಃ ಚಾಮರಾಜ ಒಡೆಯರಿಂದ ಚಾಲ್ತಿಗೆ ಬಂದಿತು. ಸಂಸ್ಥಾನದ ದೊರೆ–ದಿವಾನರು ಬ್ರಿಟಿಶ್ ಸರ್ಕಾರವು ಚಕ್ರಾಧಿಪತ್ಯಕ್ಕೆ ನಿಷ್ಠರಾದವರಿಗೆ ನೀಡುತ್ತಿದ್ದ ಜೆಸಿಎಸ್ಐ (ಗ್ರಾಂಡ್ ಕಮಾಂಡರ್ ಆಫ್ ದಿ ಸ್ಟಾರ್ ಆಫ್ ಇಂಡಿಯಾ), ಸಿಐಇ (ಕಂಪ್ಯಾನಿಯನ್ ಆಫ್ ದಿ ಆರ್ಡರ್ ಆಫ್ ದಿ ಇಂಡಿಯನ್ ಎಂಪೈರ್), ರಾವ್‌ಬಹಾದ್ದೂರ್, ನೈಟ್‌ಹುಡ್ ಬಿರುದುಗಳನ್ನು ಹೆಮ್ಮೆಯಿಂದ ಧರಿಸುತ್ತಿದ್ದರು. ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್, ಪುಟ್ಟಣ್ಣಚೆಟ್ಟಿ ಸೇರಿದಂತೆ ಬಹುತೇಕ ದಿವಾನರು ಮತ್ತು ಅಧಿಕಾರಿಗಳು ಸರ್ ಹಾಗೂ ಸಿಐಇ ಬಿರುದಾಂಕಿತರು. ಆಸ್ಥಾನ ಚರಿತ್ರಕಾರರು ದೊರೆ–ದಿವಾನರ ಹೆಸರಿನ



ಟಿಪ್ಪು ಸುಲ್ತಾನ್

ಉಲ್ಲೇಖ ಬಂದೆಡೆಯಲ್ಲೆಲ್ಲ ಈ ಬಿರುದುಗಳನ್ನು ತಪ್ಪದೆ ಲಗತ್ತಿಸುವುದನ್ನು ನೋಡಬಹುದು. ಡಿ.ವಿ.ಜಿ.ಯವರ ಕೃತಿಶೀರ್ಷಿಕೆಯಲ್ಲೇ 'ದಿವಾನ್ ಶೆಟ್ಟಿಪುಣ್ಯಂ ವೀರವಳ್ಳಿ ದಿವಾನ್ ರಂಗಾಚಾರ್ಲು ಸಿ.ಐ.ಇ.' ಎಂದಿದೆ. ಶಿಂಗ್ರಯ್ಯನವರು "ಶೇಷಾದ್ರಯರ್‌ರವರ ಅದ್ಭುತವಾದ ಜಗದ್ವಿಸ್ಮಯಕರವಾದ ಕಾರ್ಯಕಲಾಪಗಳನ್ನು ನೋಡಿ ವಿಕ್ಟೋರಿಯಾ ಗವರ್ನಮೆಂಟಿನವರು ಇವರಿಗೆ ನೈಟ್ ಎಂಬ ಪದವಿಯನ್ನೂ ಕೆಸಿಎಸ್ಐ ಎಂಬ ಕಿತ್ತಾಬನ್ನೂ ದಯಪಾಲಿಸಿದರು" (ಪರಿಶಿಷ್ಟ – ೨ : ೬) ಎಂದು ಸಂಭ್ರಮದಿಂದ ದಾಖಲಿಸುವರು. ಮೈಸೂರಿನ ದೊರೆ ಹಾಗೂ ದಿವಾನರ ದಕ್ಷತೆಯ ಬಗ್ಗೆ ಬ್ರಿಟಿಶ್ ಅಧಿಕಾರಿಗಳು ಮಾಡಿರುವ ಪ್ರಶಂಸೆಗಳನ್ನು ಎಲ್ಲ ಚರಿತ್ರಕಾರರು ಅಭಿಮಾನದಿಂದ ಉಲ್ಲೇಖಿಸುವರು; ತಮ್ಮ ಕಥಾನಾಯಕರ ರಾಜಕೀಯ ತಜ್ಞತೆ ಹಾಗೂ ಆಡಳಿತ ದಕ್ಷತೆಗಳನ್ನು ಯೂರೋಪಿನ ರಾಜಕೀಯ ಚಿಂತಕರಿಗೂ ಆಡಳಿತಗಾರರಿಗೆ ಹೋಲಿಸುವರು. ಈ



ರಾವ್ ಬಹಾದ್ದೂರ್

ಹೋಲಿಕೆಯ ವಿಸ್ತರಣೆಯಾಗಿ ಬಸವಪ್ಪಶಾಸ್ತ್ರಿಗಳನ್ನು ಶೇಕ್ಸ್‌ಪಿಯರಿಗೂ ಉದ್ಯಮನಗರ ಭದ್ರಾವತಿಯನ್ನು ಬರ್ಮಿಂಗ್‌ಹ್ಯಾಮಿಗೂ ಹೋಲಿಸುವ ವರ್ಣನೆಗಳಿವೆ. ಇದಕ್ಕೆ ಪೂರಕವಾಗಿ ಇಂಗ್ಲೆಂಡಿನ ಮ್ಯಾನೊರ್ ಹೌಸ್ ಶೈಲಿಯಲ್ಲಿ ಲಲಿತಮಹಲ್ (೧೯೨೧), ವಿಂಡ್ಸರ್ ಮ್ಯಾನರ್ ಮಾದರಿಯಲ್ಲಿ ಬೆಂಗಳೂರು ಅರಮನೆ ಕಟ್ಟುಗೊಂಡವು. ಮೈಸೂರಿನ ಅರಮನೆ (೧೮೯೭) ಗಾಥಿಕ್ ಮತ್ತು ಸಾರ್ಸೆನಿಕ್ ಎರಡೂ ವಾಸ್ತುಶೈಲಿಗಳನ್ನು ಒಳಗೊಂಡಿತು. ತಮ್ಮ ದಿವಾನರ ನೆನಪಿಗೆ ಚಾಮರಾಜ ಒಡೆಯರ್ ಕಟ್ಟಿಸಿದ ರಂಗಾಚಾರ್ಲು ಮೆಮೊರಿಯಲ್ ಹಾಲಂತೂ ಪಕ್ಕಾ ರೋಮನ್ ಶೈಲಿಯ ಕಟ್ಟಡ. ಹೀಗೆ ಪತ್ರಶೈಲಿ, ಪೋಷಾಕು, ಬಿರುದು, ಕಟ್ಟಡ ಎಲ್ಲವೂ ಇಂಗ್ಲೆಂಡಿನ ಮಾದರಿಯಲ್ಲಿ ಮೈಸೂರು ರಾಜ್ಯವನ್ನು ಕಟ್ಟುವ ಪ್ರಭುತ್ವದ ಆಶೋತ್ತರವನ್ನು ಸಾಬೀತುಪಡಿಸುತ್ತವೆ.

ಇವುಗಳ ಜತೆಯಲ್ಲಿ, ಮೈಸೂರು ಸಂಸ್ಥಾನವು ವಸಾಹತುಶಾಹಿ ಆಳ್ವಿಕೆಗೆ ಬೇಕಾದ ಬುನಾದಿಪ್ರಾಯದ ಕೆಲಸಗಳನ್ನು ನಿಷ್ಠೆಯಿಂದಲೊ ಅನಿವಾರ್ಯತೆಯಿಂದಲೊ ಮಾಡಿತು. ಅವುಗಳಲ್ಲಿ ಬೆಂಗಳೂರಿನಲ್ಲಿ ಬ್ರಿಟಿಶ್ ಸೈನಿಕ ನೆಲೆಗಳಿಗಾಗಿ ದಂಡುಪ್ರದೇಶದ ಸ್ಥಾಪನೆ; ನಾಲ್ಕನೇ ಮೈಸೂರು ಯುದ್ಧದಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಲಾರ್ಡ್ ವೆಲ್ಲೆಸ್ಲಿ ಹೆಸರಿನಲ್ಲಿ ದೊರೆ ಮತ್ತು ದಿವಾನರು ಸೇರಿ ಕಾವೇರಿಗೆ ಕಟ್ಟಿದ ಸೇತುವೆ; ಬ್ರಿಟಿಶರ ಯುದ್ಧದಲ್ಲಿ ಮಡಿದ ಬ್ರಿಟಿಶ್ ಸೈನಿಕರ ಸ್ಮರಣೆಗಾಗಿ ಯುದ್ಧಸ್ಮಾರಕ; ಫ್ರೇಜರ್ ವಿಕ್ಟೋರಿಯಾ ಕಬ್ಬನ್ ಕ್ಲೋಸ್ ಕೋಲ್ ಹೆಸರಲ್ಲಿ ಪಟ್ಟಣ ಉದ್ಯಾನ ದವಾಖಾನೆ ಬಡಾವಣೆಗಳ ನಿರ್ಮಾಣ; ಬ್ರಿಟಿಶರು ಬರೆಯುವ ಇತಿಹಾಸಕ್ಕೆ ಬೇಕಾದ ಮಾಹಿತಿ ಸಂಗ್ರಹ ಮಾಡಿಕೊಡುವ ಕೆಲಸಗಳೆಲ್ಲ ಸೇರಿವೆ. ಇವು ರಾಜಕೀಯವಾಗಿ ವಸಾಹತುಶಾಹಿಯನ್ನು ಒಪ್ಪಿಕೊಳ್ಳುವ ಮತ್ತು ಅದಕ್ಕೆ ಬೇಕಾದ ಭಾಷೆಯನ್ನು ಸೃಷ್ಟಿಸಿಕೊಳ್ಳುವ ಒತ್ತಡವನ್ನು ಸಹಜವಾಗಿಯೆ ಸಮಕಾಲೀನ ಚರಿತ್ರಕಾರರ ಮೇಲೆ ಹೇರಿದವು.

೩

ವಸಾಹತೀಕೃತ ಕಥನಶೈಲಿಗಾಗಿ ಕೆಲವು ಮಾದರಿಗಳನ್ನು ಗಮನಿಸಬಹುದು :

ಅ. ಶಿಂಗ್ರಯ್ಯನವರ ಪ್ರಕಾರ ರಂಗಾಚಾರ್ಲು "ಅರಮನೆಯಲ್ಲಿ ನಡೆಯುತ್ತಿದ್ದ ಅಕ್ರಮಗಳನ್ನೆಲ್ಲ ಅಡಗಿಸಲುಪಕ್ರಮಿಸಿ ಯಾವ ಉದ್ಯೋಗವೂ ಇಲ್ಲದೆ ಉದರಪರಾಯಣೈಕ ಧುರೀಣರಾಗಿದ್ದವರನೇಕರನ್ನು ತೊಲಗಿಸಿ, ಆಗ ಮಹಾರಾಜರವರ ವಿದ್ಯಾಗುರುಗಳೂ ರಕ್ಷಕರೂ ಆಗಿದ್ದ ಕರ್ನಲ್ ಮ್ಯಾಲಿಸನ್‌ರವರ ಸ್ತೋತ್ರಕ್ಕೆ ಪಾತ್ರರಾದರು" (೧೯೧೦ : ಪರಿಶಿಷ್ಟ–೧); ಮೊದಲ ಮಹಾಯುದ್ಧಕ್ಕೆ ಬ್ರಿಟಿಶರಿಗೆ ಸಂಸ್ಥಾನವು ೫೦ ಲಕ್ಷ ಹಣವನ್ನೂ ಸೈನಿಕರನ್ನೂ ಕೊಟ್ಟಿದ್ದನ್ನು "ಇದರಿಂದ ನಮ್ಮ ದೇಶಕ್ಕೆ ಹೆಚ್ಚು ಗೌರವವೂ ಕೀರ್ತಿಯೂ ಲಭಿಸಿತು" ಎಂದು ಅವರು (೧೯೪೧ : ೩೭) ವ್ಯಾಖ್ಯಾನಿಸುವರು. ಇಲ್ಲಿರುವ ಗುರು ರಕ್ಷಕ ಸ್ತೋತ್ರ ಗೌರವ ಕೀರ್ತಿಗಳಲ್ಲಿ ತುಂಬಿರುವ ಕೃತಜ್ಞತಾಭಾವ ಗಮನಾರ್ಹ.

ಆ. ಮುಮ್ಮಡಿಯವರ ಜೀವನ ಚರಿತ್ರೆ ರಚಿಸಿದ ಓ. ಎಲ್. ಲಿಂಗಣ್ಣಯ್ಯ "ಜನರಲ್ ಹ್ಯಾರಿಸ್ ವಂಶಪಾರಂಪರ್ಯವಾಗಿ ಬಂದಿದ್ದ ಶಿಖಾಸರವನ್ನೂ ಪಟ್ಟದ ಕತ್ತಿಯನ್ನೂ ಒಪ್ಪಿಸಿ, ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರ್ ಎಂಬುದಾಗಿ ಪಟ್ಟಾಭಿಷೇಕ ಸಮಯದಲ್ಲಿ ನೂತನ ನಾಮಧೇಯವನ್ನು ಮಾಡಿದರು" (೧೯೪೦:೧೮) ಎಂದು ಬರೆಯುತ್ತಾರೆ; ಇಲ್ಲಿ ಶಿಖಾಸರ ಪಟ್ಟದ ಕತ್ತಿ ಒಪ್ಪಿಸುವ 'ಧಾರ್ಮಿಕ' ಆಚರಣೆಯಲ್ಲಿ ಬ್ರಿಟಿಶರು ಭಾಗವಹಿಸುತ್ತಿರುವುದು ಗಮನಾರ್ಹ. ಸಂಸ್ಥಾನದ ಆರ್ಥಿಕ ಸ್ಥಿತಿ ಹದಗೆಟ್ಟಿದೆಯೆಂದೂ ಸೈನಿಕರಿಗೆ ಸಂಬಳ ಕೊಡಲು ಹಣವಿಲ್ಲವೆಂದೂ ರೆಸಿಡೆಂಟ್ ಕೋಲ್ ಕೊಟ್ಟ ವರದಿಯನ್ನು ಆಧರಿಸಿ ಮದರಾಸಿನ ಗವರ್ನರ್ ಥಾಮಸ್ ಮನ್ರೋ ಬಂದು ಪರಿಶೀಲನೆ ಮಾಡಿ ೧೭೯೯ರ ತಹನಾಮೆಯ ೪ನೇ ನಿಯಮ ದಂತೆ ರಾಜ್ಯವನ್ನು ವಶಪಡಿಸಿಕೊಳ್ಳುವ ಆಜ್ಞೆ ಹೊರಡಿಸಿದ್ದನ್ನು ಲೇಖಕರು "ಮನ್ರೋರವರು ಬಹಳ ಉದಾರ ಹೃದಯವರು" "ದೂರದೃಷ್ಟಿ ಯುಳ್ಳವರು, ರಾಜನೀತಿಜ್ಞರು" (೧೯೪೦ : ೬೫) ಎಂದು ಬಣ್ಣಿಸುವರು. ಬ್ರಿಟಿಶರ ಈ ಕ್ರಮದಿಂದ ಅರಸನಿಗೆ ಅನ್ಯಾಯವಾದರೂ, ಸಂಸ್ಥಾನ ಹಿತದೃಷ್ಟಿಯಿಂದ ಅಗತ್ಯವಾಗಿತ್ತು ಎಂಬುದು ಈ ಪರಿಭಾಷೆಯ ಒಳದನಿಯಾಗಿದೆ.

ಮೇಲ್ಕಾಣಿಸಿದ ವಸಾಹತೀಕರಣ ಮಾದರಿಗಳಿಗೆ ಪ್ರತಿಯಾಗಿ ಇನ್ನೊಂದು ಮಾದರಿಯಿದೆ. ಅದು ಟಿಪ್ಪುವಿನ ಹಾಗೂ ಬ್ರಿಟಿಶರ ಆಳ್ವಿಕೆಯನ್ನು ರಾಜಕೀಯ ದಾಸ್ಯವೆಂದು ಭಾವಿಸುವ; ಆದರೆ ಅದೇ ಹೊತ್ತಲ್ಲಿ ತನ್ನ 'ನಾಯಕ'ರು ಬ್ರಿಟಿಶರಿಗೂ ಟಿಪ್ಪುವಿಗೂ ಸಲ್ಲಿಸಿದ ಸೇವೆಯನ್ನು ಸಮರ್ಥಿಸುವ ಯತ್ನ ಮಾಡುತ್ತದೆ. ಪೂರ್ಣಯ್ಯ ಬ್ರಿಟಿಶರಿಗೆ ಶರಣಾಗಿ, ಅವರ ಆದೇಶದಂತೆ ದಿವಾನಗಿರಿ ಒಪ್ಪಿಕೊಂಡಿದ್ದನ್ನು ರಾಮರಾವ್ ಹೀಗೆ ವ್ಯಾಖ್ಯಾನಿಸುತ್ತಾರೆ : "ಪೂರ್ಣಯ್ಯನವರು ಆವರೆಗೆ ನಡೆದ ಎಲ್ಲಾ ವಿಚಾರಗಳನ್ನೂ ತಾವು ಬ್ರಿಟಿಷರ ಅಧಿಕಾರಕ್ಕೆ ಶರಣಾಗತರಾಗದೆ ಶತ್ರುತ್ವವನ್ನೇ ಸಾಧಿಸಿ ನಿಲ್ಲುವುದರಿಂದ ಉಂಟಾಗುವ ಸಾಧಕಬಾಧಕಗಳನ್ನೂ ದೀರ್ಘವಾಗಿ ಪರ್ಯಾಲೋಚಿಸಿ ಮುಂದೆ ಆಗುವ ಅನಾವಶ್ಯಕವಾದ ಜನಹತ್ಯೆಯನ್ನೂ, ರಕ್ತಪ್ರವಾಹವನ್ನೂ ತಪ್ಪಿಸುವುದಕ್ಕಾಗಿ, ಆಗ ಅವರ ಅಧಿಕಾರವನ್ನು ಒಪ್ಪಿಕೊಂಡು, ತಾಳ್ಮೆವಹಿಸಿ ನಡೆಯತಕ್ಕುದೇ ಯುಕ್ತವೆಂದು ನಿರ್ಧರಿಸಿ, ಅದೇ ಮೇರೆ ಆಚರಿಸಿದರು"; "ಆರ್ಷೇಯ ಕಾಲದಿಂದ ಬಂದ ಹಿಂದೂ ಸಾಮ್ರಾಜ್ಯದ ಸೇವೆಯಲ್ಲಿ ತಮ್ಮ ಸ್ವದೇಶ ಸ್ವಧರ್ಮಗಳ ಪನುರುದ್ಧಾರಕ್ಕಾಗಿ ಶ್ರಮಿಸುವುದೊಂದು; ಹಾಗಲ್ಲದೆ ಲೋಕದ ದೃಕ್ಪಥದಿಂದ ಮರೆಯಾಗಿ ಆಮರಣಾಂತವಾಗಿ ಒಂದು ಅಭುಕ್ತ ಮೂಲೆಯಲ್ಲಿ ಅನಾಮಧೇಯರಾಗಿ ತಮ್ಮ ಜೀವಿತವನ್ನು ಕಳೆಯುವುದೊಂದು. ಈ ಎರಡು ಮಾರ್ಗಗಳು ತೋರಿಸಲ್ಪಟ್ಟವು. ಮಹಾಪ್ರಾಜ್ಞರಾದ ಅವರು ಈ ಎರಡರಲ್ಲಿ ಯಾವ ಮಾರ್ಗವನ್ನು ಪರಿಗ್ರಹಿಸುವರು?"; "ಗವರ್ನರ್ ಜನರಲ್ ಮುಂತಾದ ಅಧಿಕಾರಿಗಳನ್ನೂ ಮೆಚ್ಚಿಸಿ ಇನ್ನಿವರ ಸಮಾನರಿಲ್ಲ ಎಂದು ಹೊಗಳಿಸಿಕೊಂಡರಾದರೂ ಅವರಿಗೆ ಇಂಗ್ಲಿಷು ಭಾಷೆಯ ಪರಿಚಯವಿರಲಿಲ್ಲವಂತೆ. ಬ್ರಿಟಿಷ್ ಜನಗಳ ಸ್ವಾಭಾವಿಕ ಗುಣ ನಡತೆಗಳು ಎಂಥವೆಂಬುದನ್ನು ತಿಳಿದುಕೊಂಡು ಅವುಗಳಿಗೆ ಅನುಗುಣವಾಗಿ ತಮ್ಮ ಮನಸ್ಸಾಕ್ಷಿಗೆ ವಿರೋಧವಿಲ್ಲದಂತೆ ನಡೆದು ಅದ್ವೀತಿಯರೆನ್ನಿಸಿಕೊಂಡ ಮಹಾಮತಿಗಳಿವರು–ಭಾವದಾಸ್ಯಕ್ಕೆ ಬಲಿಬಿದ್ದು ಅವರ ಸಂಸ್ಕೃತಿಯ ಗುಲಾಮರಾದವರಲ್ಲ!" (೧೯೩೧ : ೨೨, ೨೬, ೪೫). ಇಲ್ಲಿ ಪೂರ್ಣಯ್ಯ ಲೌಕಿಕ ನೆಲೆಯಲ್ಲಿ ಅಧಿಕಾರಿಯಾಗಿ ಅಡಿಯಾಳಾಗಿದ್ದರೂ, ಹಿಂದೂ ಸಂಸ್ಕೃತಿಯ ಅಭಿಮಾನಕ್ಕೆ ಧಕ್ಕೆ ತರಲಿಲ್ಲ ಎಂಬ ವ್ಯಾಖ್ಯಾನ ಗಮನಾರ್ಹ. ದಿವಾನರು ರಾಜಧರ್ಮದ ಭಾಗವಾಗಿ ಸೇವೆ ಸಲ್ಲಿಸಿದರೂ, ಅವರ ವೈಯಕ್ತಿಕ ವ್ಯಕ್ತಿತ್ವ ಮತ್ತು ಸನಾತನ ಧರ್ಮವು ಪವಿತ್ರವಾಗಿಯೇ ಉಳಿದಿತ್ತು ಎಂದು ಪ್ರತಿಪಾದಿಸುವುದು ಈ ವ್ಯಾಖ್ಯಾನದ ಇರಾದೆ. ವಸಾಹತು ಪ್ರಜ್ಞೆಯು, ಕೇವಲ ಮುಸ್ಲಿಂ ಕ್ರೈಸ್ತಧರ್ಮದ ಬಗ್ಗೆ ಪ್ರತಿರೋಧವನ್ನು ಮಾತ್ರವಲ್ಲ, ಆಳದಲ್ಲಿ ಬ್ರಾಹ್ಮಣವಾದಿ ಹಿಂದೂಧರ್ಮದ ಒಲವನ್ನೂ ಹೊಂದಿತ್ತು ಎಂಬುದನ್ನು ಈ ವ್ಯಾಖ್ಯಾನಗಳು ಸೂಚಿಸುತ್ತಿವೆ.

ವಸಾಹತುಶಾಹಿ ಕಾಲಘಟ್ಟದ ಪಠ್ಯಗಳ ನಾಯಕರಾದ ಮುಮ್ಮಡಿ ಕೃಷ್ಣರಾಜ, ಚಾಮರಾಜ ಹಾಗೂ ನಾಲ್ವಡಿ ಕೃಷ್ಣರಾಜ; ಪೂರ್ಣಯ್ಯ, ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ – ಎಲ್ಲರೂ ಬ್ರಿಟಿಶ್ ಆಳಿಕೆ ಒಪ್ಪಿಕೊಂಡವರು; ಮಾತ್ರವಲ್ಲ, ಸ್ವಾತಂತ್ರ್ಯ ಚಳುವಳಿಯನ್ನು ಹತ್ತಿಕ್ಕಿದವರು. ಪ್ರಭುನಿಷ್ಠೆಯನ್ನು ತಮ್ಮ ರಾಜಕೀಯ ಮೌಲ್ಯವಾಗಿಸಿಕೊಂಡ ಈ ಪಠ್ಯಗಳಿಗೆ ಪ್ರಭುತ್ವ ವಿರೋಧಿಗಳು ರಾಜದ್ರೋಹಿಗಳಾಗಿ ಕಾಣುವುದು ಸಹಜ. ಹೀಗಾಗಿ ವಸಾಹತುಶಾಹಿ ಆಳಿಕೆಗೆ ಪ್ರತಿರೋಧವಾಗಿ, ತಮ್ಮ ಸಂಸ್ಥಾನವನ್ನು ರಕ್ಷಿಸಿಕೊಳ್ಳಲು ಪ್ರತಿರೋಧ ಒಡ್ಡಿದ ಸಂಸ್ಥಾನಿಕರನ್ನು, ಪಾಳೇಗಾರರನ್ನು ಹಾಗೂ ಬ್ರಿಟಿಶರ ತೆರಿಗೆ ನೀತಿ ಒಪ್ಪದ ರೈತರನ್ನು ಇವು ಪುಂಡರು ಎಂದು ದುರುಳೀಕರಿಸುತ್ತವೆ. ಟಿಪ್ಪು, ಹೈದರ್, ಧೋಂಡಿಯಾ ವಾಘ್, ಸರ್ಜಾ ರಂಗಪ್ಪನಾಯಕ, ಸರ್ಜಾ ಹನುಮಪ್ಪನಾಯಕ, ಸ್ವಾಮಿ ಅಪರಂಪಾರ, ನಗರದ ಬೂದಿಬಸವಪ್ಪ ಮುಂತಾದ ವಸಾಹತುಶಾಹಿ ವಿರೋಧಿ ವೀರರೆಲ್ಲ, ಇಲ್ಲಿ ಖಳರಾಗಿದ್ದಾರೆ. ಇವರ ದಂಗೆಯಿಂದ ಸೃಷ್ಟಿಯಾದ ಅರಾಜಕತೆಗೆ ದೇವಚಂದ್ರನು ಅಸಮರ್ಥ ಅಧಿಕಾರಿಗಳನ್ನು ಹೊಣೆಗಾರವಾಗಿಸುವನು : "ಸರಜನಾಯಕನೆಂಬ ನಿರ್ಬುದ್ಧಿಗಂ ಅಲ್ಪ ಕುದುರೆಮಂದಿಗೂಡಿ ತುಂಟ ಭಂಟಕೆಯಂ ಮಾಡುತ್ತ ದೊಡ್ಡ ನಗರದ ಗಿಡದೊಳಡಗಿ ಆ ರಾಜ್ಯಮಂ ಸೂರೆಗೊಂಡು ಕೆಡಿಸುತ್ತಿರಲ್ಲಿಲ್ಲ. ಕೆಲವು ಪ್ರಜೆಗಳು ವಶಮಾಗಿರಲು, ರಾಜಬಲದಧಿಕಾರಿಗಳು ವಿಚಾರವಿಲ್ಲದೆ ಕೆಲರಂ ಘಾತಪಾತಗಳಂ ಮಾಡುತ್ತಿರಲ್, ಕುಂಪಣಿ ಸರದಾರರ್ ಬಂದು ಸರಜನಾಯಕನಂ ಪರಿಭವಿಸಿ ಕಳೆದರ್" ಎಂದು ವ್ಯಾಖ್ಯಾನಿಸುವನು. ಬ್ರಿಟಿಶರು

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ಪಾವತಿಸಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಸರ್ಜಪ್ಪನಾಯಕನನ್ನು ಬಂಧಿಸಿ ಹಿಂಸಿಸಿ ಗಲ್ಲಿಗೇರಿಸಿದ್ದನ್ನು 'ಪರಿಭವಿಸಿ ಕಳೆದು' ಎಂಬ ಎರಡೇ ಶಬ್ದಗಳಲ್ಲಿ ತಣ್ಣಗೆ ಮುಗಿಸುವನು. ಮುಮ್ಮಡಿ ಆಳ್ವಿಕೆಯಲ್ಲೂ ಕಮಿಶನರ ಆಡಳಿತದಲ್ಲೂ ಮೈಸೂರು ಭಾಗದಲ್ಲಿ ಬ್ರಿಟಿಶರ ವಿರುದ್ಧದ ಅನೇಕ ಹೋರಾಟಗಳನ್ನು ಕ್ರೂರವಾಗಿ ಹತ್ತಿಕ್ಕಲಾಯಿತು. ಅವುಗಳಲ್ಲಿ ನಗರದ ರೈತರು ತೆರಿಗೆ ಪದ್ಧತಿಯ ವಿರುದ್ಧ ಮಾಡಿದ ಪ್ರತಿಭಟನೆಯೂ (೧೮೩೧) ಸೇರಿದೆ. ಈ ಹತ್ತಿಕ್ಕುವಿಕೆಯನ್ನು ಬ್ರಿಟಿಶರ ಶೌರ್ಯವೆಂದು ಈ ಚರಿತ್ರಕಾರರು ಚಿತ್ರಿಸುತ್ತಾರೆ. ಬ್ರಿಟಿಶ್ ವಿರೋಧಿ ಬಂಡಾಯಗಳನ್ನು ದಮನಿಸಿದ ಪೂರ್ಣಯ್ಯನವರ ರಾಜಕೀಯ ಚಾಣಾಕ್ಷತೆಯನ್ನು ಕೆಲವರು ಹೊಗಳುವರು.

ಲಿಂಗಣ್ಣಯ್ಯನವರ ಪ್ರಕಾರ "ಪೂರ್ಣಯ್ಯನವರು ರೆಸಿಡೆಂಟರಾದ ಕ್ಲೋಸ್ ಮತ್ತು ಬ್ರಿಟಿಷ್ ದಂಡನಾಯಕರಾದ ಕರ್ನಲ್ ವೆಲ್ಲೆಸ್ಲಿ ಇವರ ಸಹಾಯದಿಂದ ಪುಂಟರನ್ನೂ ತುಂಟರನ್ನೂ ಅಡಗಿಸಿ ಪ್ರಜಾಪೀಡೆಯನ್ನು ತಪ್ಪಿಸಿದರು."; "ಧೋಂಡಿಯಾನ ಸೊಕ್ಕನ್ನು ಮುರಿಯಲು ನಿರ್ಧರಿಸಿದ ಕರ್ನಲ್ ವೆಲ್ಲೆಸ್ಲಿಯವರ ಸಹಾಯದಿಂದ ಆ ತುಂಟನನ್ನು ಹಿಡಿದು ನಿಗ್ರಹಿಸಿದರು"; ಮುಂದುವರಿದು "ಇಂಡಿಯಾ ದೇಶದಲ್ಲಿ ಸಿಪಾಯಿ ದಂಗೆಯು ಶಾಂತವಾದ ಮೇಲೆ ವಿಕ್ಟೋರಿಯಾ ಮಹಾರಾಜ್ಞಿಯವರು ಭರತಖಂಡದ ದೌಲತ್ತನ್ನು ತಾವೇ ನೇರವಾಗಿ ವಹಿಸಿಕೊಂಡ ಸಂದರ್ಭದಲ್ಲಿ ಮಹಾರಾಜರು ಆ ಚಕ್ರವರ್ತಿನಿಯವರ ಗೌರವಸೂಚಕವಾಗಿ ರಾಜಾಧಾನಿಯಲ್ಲಿ ಕುಶಾಲು ತೋಪುಗಳನ್ನು ಹಾರಿಸಿ, ಪಟ್ಟಣದಲ್ಲೆಲ್ಲಾ ಸಕ್ಕರೆಯನ್ನು ಹಂಚಿಸಿದರು. ಮಹರಾಜರಿಗೆ ಬ್ರಿಟಿಶ್ ಸರ್ಕಾರದಲ್ಲಿ ಅವ್ಯಾಜ ಪ್ರೇಮವಿದ್ದಿತು. ಬ್ರಿಟಿಶರ ಜಯವೇ ತಮ್ಮ ಜಯವೆಂದು ಭಾವಿಸಿದ್ದರು. ಬ್ರಿಟಿಶ್ ಜನಾಂಗದ ಅಭ್ಯುದಯದಲ್ಲಿ ಅವರಿಗೆ ಅಪಾರವಾದ ಪ್ರೇಮಾದರಗಳಿದ್ದವು" (೧೯೪೦ : ೧೨೧) ಎಂದು ಬರೆಯುತ್ತಾರೆ. ದೊಡ್ಡ ಸಾಮ್ರಾಜ್ಯದ ನಿರ್ಮಾಣಕ್ಕಾಗಿ ಸಣ್ಣಪುಟ್ಟ ಬಂಡುಕೋರರ ಅಳಿವು ಅನಿವಾರ್ಯ ಎಂಬ ರಾಜನೀತಿಯನ್ನು ಈ ಚರಿತ್ರಕಾರರು ಒಪ್ಪಿಕೊಂಡಿದ್ದರು.




ಚಂದ್ರಗುಪ್ತ–ಚಾಣಕ್ಯರ ಕಥೆಯಾದ ಕೆಂಪುನಾರಾಯಣನ 'ಮುದ್ರಾಮಂಜೂಷ'ವೂ (೧೮೨೩) ಬಂಡುಕೋರರನ್ನು ದುಷ್ಟರನ್ನಾಗಿ ಕಾಣಿಸುತ್ತದೆ. ಅಧಿಕಾರದಲ್ಲಿದ್ದ ನಂದರು ಯುದ್ಧದಲ್ಲಿ ಸತ್ತು, ಅವರಿಗೂ ಅವರ ವಿರೋಧಿಗಳಾದ ಮೌರ್ಯರಿಗೂ ನಿಷ್ಠರಾಗಿದ್ದು ಪರಸ್ಪರ ಹಗೆತನವುಳ್ಳ ಅಧಿಕಾರಿಗಳೂ ಸೈನಿಕರೂ ಪ್ರಜೆಗಳೂ ತುಂಬಿರುವ ಅರಾಜಕ ರಾಜ್ಯದ ಅಧಿಕಾರವನ್ನು ಚಂದ್ರಗುಪ್ತ ಗ್ರಹಣ ಮಾಡಿದ್ದಾನೆ. ತನ್ನ ಯಾವುದೇ ನಿರ್ಣಯವು ನಿರ್ದಿಷ್ಟ ಬಣವನ್ನು ದಂಗೆಯೇಳುವ ಇಲ್ಲವೇ ಅಸಹಕಾರ ನೀಡುವ ಸಂಭವನೀಯತೆಯನ್ನು ಅವನು ಎಚ್ಚರಿಕೆಯಿಂದ ಸಂಭಾಳಿಸಬೇಕಿದೆ. ಇಂತಹ ಸನ್ನಿವೇಶದಲ್ಲಿ ಚಾಣಕ್ಯ ಬಂಡುಕೋರರ ಬಗ್ಗೆ ಮತ್ತೆಮತ್ತೆ ದೊರೆಯನ್ನು ಎಚ್ಚರಿಸುತ್ತಾನೆ. ಈ ಚಿತ್ರಣವು ಟಿಪ್ಪು–ಹೈದರ್ ಅವರಿಗೆ ನಿಷ್ಠರಾದವರು ಇನ್ನೂ ಜೀವಂತವಾಗಿರುವ ರಾಜ್ಯವನ್ನು ವಹಿಸಿಕೊಂಡ ಮುಮ್ಮಡಿಯವರನ್ನು ಪರೋಕ್ಷವಾಗಿ 'ಮಂಜೂಷ'ವು ಎಚ್ಚರಿಸುತ್ತಿರುವಂತೆ ಭಾಸವಾಗುತ್ತದೆ. ಎಂತಲೇ ಇಲ್ಲಿ ರಾಜಕೀಯ ಭಿನ್ನಮತ ತೋರುವ ಪ್ರಾಂತ್ಯಾಧಿಕಾರಿಗಳು ರಾಜದ್ರೋಹಿಗಳಾಗಿ ಚಿತ್ರಣಗೊಳ್ಳುವರು. ಹಾಗೆ ನೋಡಿದರೆ ಚಂದ್ರಗುಪ್ತ ಮತ್ತು ಚಾಣಕ್ಯರು ರಾಜ್ಯಾಧಿಕಾರ ಹಿಡಿಯುವುದಕ್ಕೆ ಮುನ್ನ ಸ್ವತಃ ಬಂಡುಕೋರರಾಗಿದ್ದವರು. ಆದರೆ ಬಂಡುಕೋರರು ಅಧಿಕಾರಸ್ಥರಾದ ತರುವಾಯ ಇತರರ ಬಂಡಾಯವನ್ನು ಸಹಿಸುವುದಿಲ್ಲ. ಬ್ರಿಟಿಶರು ತಮಗೆದುರಾದ ಎಲ್ಲರನ್ನೂ ಯುದ್ಧ ಮತ್ತು ತಂತ್ರಗಾರಿಕೆ ಮೂಲಕ ಸೋಲಿಸುತ್ತ ಚಕ್ರಾಧಿಪತ್ಯ ವಿಸ್ತರಿಸುತ್ತಿದ್ದ ಕಾಲದಲ್ಲಿ, 'ಮಂಜೂಷ'ವು ಚಕ್ರಾಧಿಪತ್ಯದ ಪರವಾದ ನಿಲುವನ್ನು ಪ್ರಕಟಿಸುತ್ತಿರುವುದು ಗಮನಾರ್ಹ. ವ್ಯಂಗ್ಯವೆಂದರೆ, ಈ ಕೃತಿ ಪ್ರಕಟವಾದ ಕೆಲವೇ ವರ್ಷಗಳಲ್ಲಿ, ಮುಮ್ಮಡಿಯವರನ್ನು ಅಸಮರ್ಥತೆಯ ಕಾರಣಕೊಟ್ಟು ದೊರೆಯಿಂದ ಅಧಿಕಾರ ಕಿತ್ತುಕೊಂಡಿದ್ದು.

ಮೇಲ್ಕಾಣಿಸಿದ ವಸಾಹತುಶಾಹಿ ಪರವಾದ ಪಠ್ಯಗಳ ಮಾದರಿಗಿಂತ ಭಿನ್ನವಾದುದನ್ನು ಜನಪದವು ಸೃಷ್ಟಿಸಿತು. ಬ್ರಿಟಿಶರ ಹಾಗೂ ಮೈಸೂರು ಒಡೆಯರ ಬಲಿಷ್ಠ ಪ್ರಭುತ್ವದ ವಿರುದ್ಧ ಸೆಣಸಿದ ಹುತಾತ್ಮರಾದ ಬಂಡುಕೋರರನ್ನು ಕಥಾನಾಯಕರಾಗಿ ಮಾಡಿಕೊಂಡು ಬೀದಿಯ ಜನ ಲಾವಣಿ ಕಟ್ಟಿದರು. ಅದರಲ್ಲಿ ಬ್ರಿಟಿಶರನ್ನು ದುಷ್ಟರಾಗಿಯೂ ಅವರಿಗೆ ನೆರವಾದ ಪೂರ್ಣಯ್ಯ ಹಾಗೂ ಮೀರ್ ಸಾದಿಕ್, ಮಲ್ಲಪ್ಪ ಶೆಟ್ಟಿ ಮುಂತಾದವರನ್ನು ವಿಶ್ವಾಸದ್ರೋಹಿಗಳಾಗಿಯೂ ಚಿತ್ರಿಸಿದರು. ಈ ಪ್ರತಿನಾಯಕ ಪರಂಪರೆಯು ಆಧುನಿಕ ಸಾಹಿತ್ಯದಲ್ಲಿ ಮುಂದುವರೆಯಿತು. ವಸಾಹತುಶಾಹಿ ಮತ್ತು ಭೂಮಾಲೀಕ ಆಳ್ವಿಕೆಯ ವಿರುದ್ಧ ಹೋರಾಡಿದ ಕಯ್ಯೂರಿನ ವೀರರನ್ನು ಹಾಗೂ ಕೊಡಗಿನ ಅಪರಂಪಾರನನ್ನು ಕುರಿತು ನಿರಂಜನ 'ಚಿರಸ್ಮರಣೆ' 'ಸ್ವಾಮಿ ಅಪರಂಪಾರ' ಬರೆದರು. ಈ ಮಾದರಿಯ ಕೃತಿಗಳು ವಸಾಹತುಪ್ರಜ್ಞೆಯ ಆಸ್ಥಾನ ಚರಿತ್ರಕಾರರ ಪರಿಮಿತಿಗಳಿಗೆ ಕನ್ನಡಿ ಹಿಡಿದು ತೋರಿಸಿದವು. ಇಲ್ಲಿ ನಮ್ಮಖ್ ಹರಾಮರ ಹಾಗೂ ನಾಯಕರ ಕಲ್ಪನೆಯೇ ಬೇರೆ; ಇಲ್ಲಿ ವಂಶದ ಸಂತತಿಯ ಅಧಿಕಾರದ ಪ್ರಶ್ನೆಗಿಂತ, ದೇಶದ ಜನರ ಅಸ್ತಿತ್ವದ ಪ್ರಶ್ನೆ ಮುಖ್ಯ. ಬ್ರಿಟಿಶರನ್ನು ಅನ್ಯಾಯ ಮತ್ತು ಅಧರ್ಮದ ಪ್ರತೀಕವಾಗಿಸಿದ ಈ ಪಠ್ಯಗಳು, ಹೊಸ ಸಮಾಜದ ದೇಶದ ಪರಿಕಲ್ಪನೆಯನ್ನೂ ಮಂಡಿಸಿದವು.

**ಡಾ॥ ರಹಮತ್ ತರೀಕೆರೆ**
ಎಂ. ಪಿ. ಪ್ರಕಾಶ್ ನಗರ, ಹೊಸಪೇಟೆ – ೫೮೩ ೨೦೧
ಬಳ್ಳಾರಿ ಜಿಲ್ಲೆ

# ಬೇಂದ್ರೆ ಅಂದ್ರೆ...



**ಶ್ರಾ**ವಣ ಮಾಸಕೆ ಮಣಿದು
ಶ್ರಾವಣ ಶ್ರಾವಣವೆಂದು ಕುಣಿದು
ನಾದಲೀಲೆಯ ಹಾಡಿಹಾಡಿ ಜೀವನ ಗೆದ್ದಾಂವ ॥
ಅರ್ಥವಿಲ್ಲದೆ ಸ್ವಾರ್ಥವಿಲ್ಲದೆ ನಡೆದು
ನವನೀತದಂಥ ಭಾವಗೀತೆಯ ಬರೆದು
ಹಿಗ್ಗದೆ ಕುಗ್ಗದೆ ರಸದಾ ಕಾರಂಜಿಯ ಹಾಡಾಂವ ॥
ಮುಗಿಲಲಿ ಹಕ್ಕಿ ಹಾರಿ ಸಾಲುಸಾಲಾಗಿ
ಶಬ್ದಶೃತಿ ಗರಿಗರಿಯಾಗಿ ಹಾಡಾಗಿ
ಗುಣ ಕೌಶಲಾಮೃತ ರಸಧಾರೆಯಾಗಿ ಮಿಂದಾಂವ ॥
ಸಾಧನಕೇರಿಯ ಹೆಜ್ಜೆಯಲಿ ಗೆಜ್ಜೆಯಮೋದ
ಕವಿತಾಲಯದಲಿ ನಾದದ ಸವಿನಿನಾದ
ನಾಕುತಂತಿಯೊಲವಿನಲಿ ಜ್ಞಾನಪೀಠವ ಪಡೆದಾಂವ ॥
ಲಾಲಿತ್ಯದಲಿ ಭಾವವನರಳಿಸಿದ ಕವಿತೆ
ತಾಯ್ನುಡಿಯಲಿ ಜೀವಾನುರಣಿಸಿದ ಸಖಿಗೀತ
ಕೂಡಿದ ಇಡಿಗಾಳಿನಲಿ ಒಲುಮೆಯ ಬಾಳಸಂಹಿತೆ ಕಂಡರಿಸಿದಾಂವ ॥
ಹೋಗಿ ಬರ್ತೇವಿನ್ನ ತಾಯಿ ನಮ್ಮ ನಮಸ್ಕಾರ ನಿಮಗ
ಒಳಗಿನ ದೇವ ಸಾಕುತ ಬೆಳೆಸಿದ ಕಾವ್ಯರಸಯೋಗ
ಸಾಯೋ ಆಟದಲಿ ಲೇಸುಲೇಸಾಗಿರಲಿ ಸಮಜೀವರಾಗ
ದರ್ಶಿಸಿದಾಂವ ॥

**ಶಿ. ಕುಮಾರಸ್ವಾಮಿ**
ನಿವೃತ್ತ ಪ್ರಾಚಾರ್ಯರು, ನಂ. ೩೨೩, ೮ನೇ ಮುಖ್ಯರಸ್ತೆ
೩ನೇ ಅಡ್ಡರಸ್ತೆ, ನೇತಾಜಿನಗರ, ಮೈಸೂರು – ೨೮

# ಸಿದ್ಧರಾಮನ ವಚನಗಳಲ್ಲಿ ಕುಲ ವಿವೇಚನೆ





ಪ್ರೊ॥ ಲಿಂಗಪ್ಪ ಗೋನಾಲ


**'ಕುಲ'** ಮತ್ತು 'ಜಾತಿ' ಈ ಎರಡು ಪದಗಳು ಭಾರತೀಯ ವರ್ಣ ವ್ಯವಸ್ಥೆಯಲ್ಲಿ ಮೇಲಿಂದ ಮೇಲೆ ಕೇಳಿ ಬರುತ್ತಲಿವೆ. ವರ್ಣಾಶ್ರಮ ಧರ್ಮದಲ್ಲಿ ವೃತ್ತಿಯನ್ನಾಧರಿಸಿ ಕಾಲಾನುಕ್ರಮದಲ್ಲಿ ಕುಲಗಳು ನಿರ್ಮಾಣವಾದವು. ವೃತ್ತಿಯ ಸ್ವರೂಪವನ್ನು ಆಧರಿಸಿ, ಕುಲದ ಶ್ರೇಷ್ಠತೆ ಮತ್ತು ಕನಿಷ್ಠತೆಯನ್ನು ನಿರ್ಧರಿಸಲಾಯಿತು. ಅದುವೆ ಮುಂದೆ ಅಸ್ಪೃಶ್ಯತೆಗೆ ದಾರಿಯಾಯಿತು. ಮಡಿ, ಮೈಲಿಗೆ, ಹೆಸರಿನಲ್ಲಿ ಕನಿಷ್ಠ ಕುಲದವರೆಂದು ಸಮಾಜದ ಕೆಲವು ಜನಾಂಗಗಳನ್ನು ದೂರಿಡುವುದನ್ನು ರೂಢಿಸಿಕೊಂಡು ಬರಲಾಯಿತು. ಇದು ನಾಗರಿಕ ಸಮಾಜದಲ್ಲಿ ಬದುಕುವ ಮನುಷ್ಯನ ಮಧ್ಯೆ ಇರುವ ಬಹು ದೊಡ್ಡ ಕಂದಕವನ್ನು ಸೃಷ್ಟಿಸಿತು. ಕುಲ, ಜಾತಿಯ ಹೆಸರಿನಲ್ಲಿ ಅಮಾನವೀಯವಾಗಿ ನಡೆದುಕೊಳ್ಳುವುದು, ಸಾಮಾಜಿಕ, ಧಾರ್ಮಿಕ, ಆರ್ಥಿಕವಾಗಿ ಅವರನ್ನು ಶೋಷಿಸುವುದು ಸಾಗುತ್ತ ಬಂದಿದೆ. ವೈದಿಕ ಧರ್ಮ, ವೈದಿಕ ಪಥ್ಯಗಳು, ವೈದಿಕ ಧರ್ಮಾನುಯಾಯಿಗಳು ಕುಲ ವ್ಯವಸ್ಥೆಯನ್ನು ಸಮರ್ಥಿಸುತ್ತ ಬಂದಿವೆ. ಹೀಗೆ ಕಾಲ ಕಾಲಕ್ಕೆ ಸಮಾಜದಲ್ಲಿ ಉಂಟಾದ ಈ ತೆರನಾದ ಸಾಮಾಜಿಕ ಅಸಮತೋಲನವನ್ನು ಸರಿಪಡಿಸಲು ಸಮಾಜಸುಧಾರಕರು ಹುಟ್ಟಿ ಬಂದಿದ್ದಾರೆ. ಬುದ್ಧ, ಬಸವ, ಫುಲೆ, ಅಂಬೇಡ್ಕರ್, ಗಾಂಧಿ ಈ ಮುಂತಾದವರನ್ನು ಹೆಸರಿಸಬಹುದು. ಇವರು ಮಾಡಿದ ಮಾನವೀಯ ಅಂತಃಕರಣದ ಕೆಲಸಗಳು ಸದಾ ಸ್ಮರಣೀಯ. ಈ ಹಿನ್ನೆಲೆಯಲ್ಲಿ ಹನ್ನೆರಡನೆಯ ಶತಮಾನದ ಶರಣ ಶಿವಯೋಗಿ ಸಿದ್ಧರಾಮನು ಮಾಡಿದ ಸಮಾಜೋದ್ಧಾರ ಕಾರ್ಯಗಳು ಅನೇಕ. ಆದರೆ ಈತನು ಕುಲದ ಕುರಿತು ಚಿಂತಿಸಿದ ಬಗೆ ವಿಶೇಷವಾಗಿದೆ.

ಧರ್ಮದ ನೆಲೆಯಲ್ಲಿ ಸಾಗುವ ಚಿಂತನೆಯಲ್ಲಿ ಪರಿಶುದ್ಧತೆ, ಪಾವಿತ್ರ್ಯತೆಗಳೇ ಕುಲದ ಬೆಲೆ ಮತ್ತು ನೆಲೆಯನ್ನು ನಿರ್ಧರಿಸುವ ಮಾನದಂಡಗಳಾಗುತ್ತವೆ.

*ಕುಲಜ ಅಕ್ಕುಲಜರು ಜಾತ್ಯಜಾತರು ಬಂದು*
*ಕರಂಗಳ ಮುಗಿಯಲೊಡನೆಕರಗಳ ಮುಗಿವುತಿಪ್ಪಡೆ*
*ಮನವಿಚ್ಛಂದವಾಗದೊಂದೆಯಂದದಲ್ಲಿಪ್ಪಂತಪ್ಪ*
*ನಿಮ್ಮದೊಂದು ಸಮತಾಗುಣ ಎನ್ನನೆಂದು ಬಂದು ಪೊದ್ದಿಪ್ಪುದು ಹೇಳಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ.*

ಕುಲಜ, ಜಾತ್ಯ ಮತ್ತು ಅಕ್ಕುಲಜರು, ಅಜಾತರು ಎಂಬ ಶಬ್ದಗಳನ್ನು ಸಿದ್ಧರಾಮನು ಬಳಸಿರುವನು. ಇವರೆಲ್ಲ ಬಂದು ಕೈ ಮುಗಿಯುವಾಗ ಒಡನೆ ಕೈ ಮುಗಿಯುವಂತೆ, ಮನ ಕದಲದಂತೆ ಮಾಡುವ ನಿಮ್ಮಲ್ಲಿಯ 'ಸಮತಾಗುಣ' ನನಗೆ ಎಂದು ಬರುವುದೆಂದೆನ್ನುವನು. ಕುಲಜ, ಜಾತ್ಯ ಇವರು ಶ್ರೇಷ್ಠವೆಂಬುದಾಗಿ; ಅಕ್ಕುಲಜ, ಅಜಾತರು ಕನಿಷ್ಠವೆಂದು ಗ್ರಹಿಸಬೇಕಾಗುತ್ತದೆ. ಇವರಲ್ಲಿ ಯಾವುದೇ ಭೇದವನ್ನು ಎಣಿಸದ ಗುಣ ದೇವನಲ್ಲಿದೆ. ಇದು ಭಕ್ತಿಯ ನೆಲೆಯಲ್ಲಿ ಹೇಳಿದ ಮಾತು. ಇಲ್ಲಿ ಕುಲಜ ಮತ್ತು ಜಾತ್ಯ ಅನ್ನುವುದು ಪರಿಶುದ್ಧತೆ, ಪಾವಿತ್ರ್ಯತೆ ಎಂಬ ಅರ್ಥದಲ್ಲಿ ತೆಗೆದುಕೊಳ್ಳಬೇಕು. ಮುಂದುವರಿದು ಸಿದ್ಧರಾಮ ಹೇಳುವ ಮಾತು ಹೀಗಿದೆ :

*ಕುಲಜನಾಗಿ ನಾನೇವೆನಯ್ಯಾ?*
*ಕುಲದ ಬಳಿಯ ದೇವನಲ್ಲ, ಮನದ ಬಳಿಯ ದೇವನೈಸೆ.*
*ಆವ ಯೋನಿಜನಾದಡೇನು?*
*ನೀನೊಲಿದವನೆ ಕುಲಜನಯ್ಯಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ*

ಇಲ್ಲಿಯೂ ಮತ್ತೆ 'ಕುಲಜ' ಎಂಬ ಪದವನ್ನು ಪ್ರಯೋಗಿಸಿರುವನು. ಕುಲಜನಾಗಿ ನಾನು ಏನಾಗಿರುವೆ? ಕುಲದ ಬಳಿಯ ದೇವನಲ್ಲ, ಮನದ ಬಳಿಯ ದೇವನಿದ್ದಾನೆ. ಆವಯೋನಿಜನಾದಡೇನು? – ಅನ್ನುವ ಮಾತು ಬಹಳ ಮಹತ್ವದ್ದಾಗಿದೆ. ಯೋನಿಜ ಅನ್ನುವುದು ಮನುಷ್ಯನ ಹುಟ್ಟಿನ ಸಾಮಾಜಿಕ ಸ್ತರವಿನ್ಯಾಸವನ್ನು ಸೂಚಿಸುತ್ತದೆ. ಹೀಗಾಗಿ ಹುಟ್ಟಿನಿಂದ ಕುಲದ ಶ್ರೇಷ್ಠತೆಯನ್ನು ನಿರ್ಧರಿಸಲಾಗದು. ನೀನೊಲಿದವನೆ ಕುಲಜನಯ್ಯಾ, ಎಂದರೆ ದೈವಕೃಪೆಗೆ ಪಾತ್ರನಾಗುವಂತೆ ಬದುಕುವವನು ಮಾತ್ರ ಕುಲಜನಾಗಲು ಸಾಧ್ಯವೆನ್ನುವುದು ಮೇಲಿನ ಸಾಲುಗಳಲ್ಲಿದೆ. ಸಂಪ್ರದಾಯಬದ್ಧವಾದ ಕುಲ ವ್ಯವಸ್ಥೆಯನ್ನು ಸಿದ್ಧರಾಮನು ನಿರಾಕರಿಸಿ; ಅದಕ್ಕೆ ಹೊಸ ವ್ಯಾಖ್ಯಾನ ಮಾಡಿರುವುದು ಪ್ರಜಾಸತ್ತಾತ್ಮಕವಾಗಿದೆ. ಅಕ್ಕುಲ, ಅಜಾತಿ ಇವಲ್ಲದೆ ಮುಂದುವರಿದು ಸತ್ಕುಲ ಮತ್ತು ದುಷ್ಕುಲಗಳನ್ನು ಪ್ರಸ್ತಾಪಿಸುವನು.

*ಸತ್ಕುಲ ದುಷ್ಕುಲವೆಂಬುದದು ಜಗತ್ಪ್ರಸಿದ್ಧವಯ್ಯಾ*
*ಕುಲಸತ್ಕುಲ ನಡೆ ವಿಪರೀತವಾದಡೆ ದುಷ್ಕುಲ ನೋಡಯ್ಯಾ*
*ಮಧುಮಕ್ಷಿಕ ಎಂಜಲು ಕುಲರುಚಿಯಾದ(ಲ್ಲಯೆ),*
*ಚಂದ್ರಧರಕಪಿಲಸಿದ್ಧಮಲ್ಲಿಕಾರ್ಜುನ*
*ತನ್ನ ಪೂಜೆಗೆಂದು ನೇಮಿಸಿದ ಬೊಮ್ಮಣ್ಣ.*

– 'ಸತ್ಕುಲ' ಮತ್ತು 'ದುಷ್ಕುಲ' ಎನ್ನುವ ಲೋಕ ಪ್ರಸಿದ್ಧಿಯಾದ ಕುಲದ ಎರಡು ಪ್ರಕಾರಗಳನ್ನು ಹೇಳುತ್ತ, ಅವುಗಳ ಅಂತಃಸ್ವರೂಪವನ್ನು ವಿವರಿಸುವನು. ಕುಲ, ಸತ್ಕುಲಗಳ ನಡೆ ವಿಪರೀತವಾದಾಗ ಅದುವೆ ದುಷ್ಕುಲವೆನಿಸುವುದು. ಕುಲದ ಹೆಸರಿನಲ್ಲಿ ನಡೆಯುತ್ತಿದ್ದ ಜಗಳವನ್ನು ಸಿದ್ಧರಾಮ ನೆನಪಿಗೆ ತಂದಿರುವನು. ಎಲ್ಲಾ ಕಾಲದಲ್ಲಿ ಕುಲದ ಮದ ಕೆಲಸ ಮಾಡುತ್ತಲೇ ಬಂದಿದೆ. ಕುಲದ ಶ್ರೇಷ್ಠತೆಯು ಕುಲದ ಕನಿಷ್ಠತೆಯನ್ನು ಶೋಷಿಸುತ್ತ ಬಂದಿದೆ. ಆ ಕಾರಣಕ್ಕಾಗಿ ಸಂಘರ್ಷ ನಡೆಯುತ್ತಲೇ ಇದೆ. ಅದನ್ನು ಕಂಡ ಸಿದ್ಧರಾಮ ಹೀಗೆ ಕಿವಿಮಾತು ಹೇಳಿರುವನು :

*ಕುಲವೆಂದು ಹೋರಾಡುವ ಅಣ್ಣಗಳಿರಾ, ಕೇಳಿರೋ :*
*ಕುಲವೇ ಡೋಹರನ? ಕುಲವೇ ಮಾದಾರನ?*
*ಕುಲವೇ ದುರ್ವಾಸನ?*
*ಕುಲವೇ ವ್ಯಾಸನ? ಕುಲವೇ ವಾಲ್ಮೀಕನ? ಕುಲವೇ ಕೌಂಡಿಲ್ಯನ?*
*ಕುಲವನ್ನೋಳ್ಪಡೆ ಹುರುಳಿಲ್ಲ;*
*ಅವರ ನಡೆಯನೋಳ್ಪಡೆ ನಡೆಯುವರು ತ್ರಿಲೋಕದಲ್ಲಿಲ್ಲ ನೋಡಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ.*

– ಡೋಹರ ಕಕ್ಕಯ್ಯ, ಮಾದಾರ ಚೆನ್ನಯ್ಯ, ದುರ್ವಾಸ ಋಷಿ, ವಾಲ್ಮೀಕಿ, ಕೌಂಡಿಲ್ಯ ಇವರೆಲ್ಲರೂ ಯಾರೂ ಕುಲದಿಂದ ಶ್ರೇಷ್ಠರಲ್ಲ. ಅವರ ಕುಲ ನೋಡದೆ, ಅವರ ನಡೆಯನ್ನು ನೋಡಿ ಮೂರೂ ಲೋಕದವರು ಒಪ್ಪಿಕೊಂಡಿದ್ದಾರೆ. ಹೀಗಿರುವಾಗ, ಕುಲದ ಹೆಸರಿನಲ್ಲಿ ಕಚ್ಚಾಡುವುದು ಸರಿಯಲ್ಲ. ಕುಲವನೋಳ್ಪಡೆ ಹುರುಳಿಲ್ಲ ಎಂದಿರುವನು. ಅವರ ನಡೆಯನೋಳ್ಪಡೆ ನಡೆಯುವರು ತ್ರಿಲೋಕದಲ್ಲಿಲ್ಲ. ಅಂದರೆ ನಡೆಯಲ್ಲಿ ಅವರಿಗೆ ಸಮನಾಗುವವರು ಮೂರು ಲೋಕದಲ್ಲಿ ಯಾರೂ ಇಲ್ಲ; ಎಂದು ಇರುವಿಕೆಯ ಮೇಲೆ ಅವರವರ ಕುಲ ನಿರ್ಧರಿತವಾಗುವುದು ಎಂದಿರುವನು.

*ಕುಲಾಕುಲ ಅನುಭವಕ್ಕಲ್ಲದೆ ಸಮರಸಕ್ಕೇನೋ ಅಯ್ಯಾ?*
*ವಾದವಿವಾದವೆಂಬುದು ಶಾಸ್ತ್ರದಲ್ಲಲ್ಲದೆ ಸಭೆಯಲ್ಲೇನೋ ಅಯ್ಯಾ?*
*ಹಾಸ್ಯ ಹಾಸ್ಯ ನುಡಿಗಡಣದಲ್ಲಲ್ಲದೆ*
*ನುಡಿಯುವ ಕಾಯದಲ್ಲೇನೋ ಅಯ್ಯಾ?*
*ಕಪಿಲಸಿದ್ಧಮಲ್ಲಿಕಾರ್ಜುನಾ.*

ಕುಲ, ಅಕುಲ ಅನ್ನುವುದು ಅನುಭವಕ್ಕೆ, ಸಮರಸಕ್ಕೆ ಅಲ್ಲ. ವಾದ–ವಿವಾದ ಅನ್ನುವುದು ಶಾಸ್ತ್ರಕ್ಕೆ, ಸಭೆಗೆ ಅಲ್ಲ. ಹಾಸ್ಯ, ಅಪಹಾಸ್ಯ ಅನ್ನುವುದು ಮಾತಿಗೆ, ಕಾಯಕ್ಕಲ್ಲ. ಇವೆಲ್ಲ ನಮ್ಮ ಅನುಕೂಲಕ್ಕೆ ಮಾಡಿಕೊಂಡವು. ಸಮರಸವನ್ನೇ ಬಯಸುವ ಶರಣರು ಕುಲವನ್ನು ನಿರಾಕರಿಸಿದರು. ತರ್ಕಕ್ಕಾಗಿ ತರ್ಕವೇ ವಿನಾ ನಿಜದಲ್ಲಿ ಏನೂ ಇಲ್ಲ. ನಾವು ಮಾಡಿಕೊಂಡ ಭೇದಗಳಿವು. ಇವುಗಳಿಂದ ಸಾಮರಸ್ಯ ಸಾಧ್ಯವಿಲ್ಲ. ಅದಕ್ಕೆ ಮನದ ಮೈಲಿಗೆಯನ್ನು ಶುಚಿಗೊಳಿಸುವ ಕಡೆ ಹೆಚ್ಚು ಗಮನ ಹರಿಸಲು ಸೂಚಿಸಿರುವನು. ಹೊರ ಮೈ ನೋಡಲು ಶುಚಿಯಾಗಿದ್ದರೆ, ನೋಡುವುದಕ್ಕೆ ಸುಂದರ; ಆದರೆ ಅಮೂರ್ತ ರೂಪದ ಮನಸ್ಸನ್ನು ಶುಚಿಯೆಂದು ತೋರಿಸುವುದು ಹೇಗೆ? ಅದನ್ನೇ ಶರಣರು ನಡೆ, ನುಡಿಗಳಿಂದ ಅದನ್ನು ವ್ಯಕ್ತಗೊಳಿಸಲು ಸಾಧ್ಯವಿದೆ. ಎಂಥ ನುಡಿ, ಎಂಥ ನಡೆ ಎನ್ನುವುದರ ಮೇಲೆ ಮನುಷ್ಯನ ಮನಸ್ಸು ಎಂಥದ್ದು ಎನ್ನುವುದನ್ನು ಅರಿಯಲು ಸಾಧ್ಯವಾಗುತ್ತದೆ. ಕುಲ ನೋಡದೆ, ನಡೆ, ನುಡಿ ನೋಡಿ; ಗುಣ ನಿರ್ಧರಿಸಲು ಸಿದ್ಧರಾಮ ಕರೆ ಕೊಟ್ಟಿರುವನು.

*ಕುಲದಲ್ಲಿ ಶೂದ್ರನಾದಡೇನು*
*ಮನದಲ್ಲಿ ಮಹಾದೇವ ನೆಲೆಗೊಂಡವನೆ ವೀರಶೈವ ನೋಡಾ.*
*"ಕಾಂಚನಂರಜತಂತಾಮ್ರಂರಸಯೋಗಾತ್ತು ವರ್ಣತಾಂ ।*
*ತಥಾಶಿವಜ್ಞಾನ ರಸಾಚ್ಛೂದ್ರಃಸದ್ಯಃಶಿವತಾಂವ್ರಜೇತ್ ॥"*
*ಎಂಬುದು ಸಟೆಯೇನಯ್ಯಾ, ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವೆ.*

ಮನದಲ್ಲಿ ಮಹಾದೇವ ನೆಲೆಗೊಳ್ಳಬೇಕಾದರೆ, ಅವನು ಮಾಡುವ ಸಾಧನೆ ಎಂತಹದು ಎಂದು ಕಲ್ಪಿಸಿಕೊಳ್ಳಬೇಕು. ಮಹಾದೇವನಿಗೆ ದೇಹವನ್ನು ದೇವಾಲಯ ವಾಗಿಸಿಕೊಂಡವನನ್ನು ವೀರಶೈವ ಎಂದಿರುವನು.

*ತಟ್ಟುವ–ಮುಟ್ಟುವ ಭೇದವನೊಲ್ಲ; ಅದೇನು ಕಾರಣ?*
*ಐದಾರು ಪ್ರಸಾದದಲ್ಲಿ ಈರೈದು ಪಾದೋದಕದಲ್ಲಿ ಸಂಪನ್ನನಾಗಿ*
*ಅವನ ಲಿಂಗತನುವೆನ್ನದಿರಿ ಕಂದಿರೆ, ಅದು ಪ್ರಸಾದತನು.*
*ಆತನ ಮಸ್ತಕದಲ್ಲಿ ಒಪ್ಪಿಪ್ಪ ಲಿಂಗದ ಗುಣದಿಂದ,*
*ಆತನು ಲಿಂಗತನುವಾದನೈಸಲ್ಲದೆ*
*ಆತನು ಸಾಕ್ಷಾತ್ ಪ್ರಸಾದತನು ಕಾಣಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ.*

– ಜಾತಿವ್ಯವಸ್ಥೆಯಲ್ಲಿ ತಟ್ಟುವ–ಮುಟ್ಟುವ ಭೇದವಿದೆ. ಶರಣನಿಗೆ ಈ ಭೇದ ಒಲ್ಲದ ಸಂಗತಿ. ಐದಾರು ಪ್ರಸಾದ, ಈರೈದು ಪಾದೋದಕಗಳಲ್ಲಿ ಸಂಪನ್ನನಾದವನನ್ನು ಎದುರು ಕಂಡರೆ 'ಲಿಂಗತನು' ಎನ್ನಬೇಕು. ಅವನದು 'ಪ್ರಸಾದ ತನು', ಅವನ ಮಸ್ತಕದಲ್ಲಿ ಒಪ್ಪವಾಗಿರುವ ಲಿಂಗ ಗುಣದಿಂದ, ತನುವು ಲಿಂಗಮಯವಾಗಿದೆ. ಸಾಕ್ಷಾತ್ ಪ್ರಸಾದ ತನುವಿನವನೆ ಆತನಾಗಿರುವಾಗ ಮುಟ್ಟು ತಟ್ಟಿನ ಭೇದದ ಎಣಿಕೆ ಸಲ್ಲದು. ವ್ಯಕ್ತಿ ಪ್ರಸಾದ, ಪಾದೋದಕ, ಲಿಂಗಗಳಿಂದ ಶಾರೀರಿಕ ಮತ್ತು ಮಾನಸಿಕ ಸಂಸ್ಕಾರಕ್ಕೊಳಗಾದಾಗ ಅವನಲ್ಲಿ ಕನಿಷ್ಠತ್ವವಳಿದು, ಲಿಂಗತ್ವವು ನೆಲೆಯಾಗುವುದು. ಆಗ ಅಸ್ಪೃಶ್ಯತಾ ಭಾವ ಸಲ್ಲದೆಂಬುದೇ ಸಿದ್ಧರಾಮನ ದೃಢ ನಿಲುವು.

*ಬಿಳಿಯ ತತ್ತಿಯೊಳಗೆ ಹಲವು ಬ್ರಹ್ಮಾಂಡವೈ,*
*ಒಲವಿಂದಲಿಪ್ಪವವು ಸಮತೆ*
*ತಾಯ ಹಲವು ತತ್ತಿಯನಿಟ್ಟು*
*ಮರಳಿ ಆಡುತ್ತಿಪ್ಪುದದು ಕರುಣ ಸಮತೆಯ ಸಾಕ್ಷಿಯೆನಿಪ ಭಕ್ತಿ,*
*ಕರುಣಾಕರನು ಕಪಿಲಸಿದ್ಧಮಲ್ಲೇಶ್ವರನು*
*ಇಂಥ ಸಕಲವನು ಧರಿಸಿ ಶರಣರ ಕರದಲಿ.*

ಅಂಡ–ಪಿಂಡಗಳಿಂದಲೇ ಬ್ರಹ್ಮಾಂಡ. ಅಂಡಾಣುಗಳೆ ಸಕಲ ಜೀವಸಂಕುಲಗಳ ಸೃಷ್ಟಿಗೆ ನೆಲೆ. ಒಲವುವುಳ್ಳದ್ದೇ ಸಮತೆ, ತಾಯಿ ಹಲವು ತತ್ತಿಗಳನ್ನಿಟ್ಟರೂ, ಎಲ್ಲವುಗಳನ್ನು ಸಮನಾಗಿಯೇ ನೋಡಿಕೊಳ್ಳುತ್ತದೆ. ಸೃಷ್ಟಿಕರ್ತನು ಕರುಣಾವಂತ. ಅವನು ಸಕಲವನ್ನು ಧರಿಸುವ ಶರಣರ ಕರದಲ್ಲಿ ಲಿಂಗರೂಪಿಯಾಗಿರುವನು. ಒಲವು, ಸಮತೆ, ಕರುಣೆ, ಭಕ್ತಿಯುಳ್ಳ ಎಲ್ಲ ಜೀವಿಗಳು ದೇವನಲ್ಲಿ ಸರ್ವಸಮಾನರು ಎಂಬ ಭಾವ ವ್ಯಕ್ತವಾಗಿದೆ.

ಮನುಷ್ಯನಲ್ಲಿಯ ಅಜ್ಞಾನವೆ ಅಂಧಕಾರ. ಅರಿವೆಂಬ ಬೆಳಕು ಕತ್ತಲೆಂಬ ಅಜ್ಞಾನವನ್ನು ಹೊಡೆದೋಡಿಸುತ್ತದೆ. ಜ್ಯೋತಿಯನ್ನು ತಿಳಿದು ನೋಡಿದವನೇ ಸರ್ವಜ್ಞನೆನಿಸಿಕೊಳ್ಳುತ್ತಾನೆ.

*..................................*
*ಲೋಕಾಲೋಕವ ಏಕವ ಮಾಡಲಿಕಾತ*
*ಆಕಾರ ಚತುಷ್ಟಯವ ಮೀರಿದಾತ*
*ವರ್ಣಾಶ್ರಮವ ಕಳೆದು ನಿರ್ಮಲಾನಂದದೊಳು*
*ಸೊಮ್ಮುಗೆಟ್ಟಾತ ಪರಶಿವ ಕಪಿಲಸಿದ್ಧಮಲ್ಲಿಕಾರ್ಜುನಾ*

– ಲೋಕಗಳ ಭೇದವನ್ನೇ ಕಳೆದು ಏಕ ಮಾಡಬೇಕು. ಆಕಾರಗಳನ್ನು ಮೀರಿ, ವರ್ಣಾಶ್ರಮಗಳನ್ನು ಕಳೆದು ನಿರ್ಮಲಾನಂದದಿಂದ ಇರುವುದಕ್ಕೆ ಸೂಚಿಸಿರುವುದು ಅರ್ಥಪೂರ್ಣವಾಗಿದೆ.

*..................................*
*ಕುಲವೆಂದಡೆ ಮಲತ್ರಯವು ಬಿಡುವು ನೋಡಾ,*
*ಕಪಿಲಸಿದ್ಧಮಲ್ಲಿಕಾರ್ಜುನಾ.*

ನಮ್ಮನ್ನು ಮಲತ್ರಯಗಳು ಆವರಿಸಿಕೊಂಡಾಗ, ನಾವು ಕುಲದ ಬಲಿಯೊಳಗಾಗುತ್ತೇವೆ. ಮಲತ್ರಯಗಳನ್ನು ಬಿಡುವುದರಿಂದ ಕುಲವನ್ನು ಮೀರಲು ಸಾಧ್ಯವಾಗುತ್ತದೆ. ತೋರಿಕೆಗೆ ಲಿಂಗವನ್ನು ಕಟ್ಟಿಕೊಂಡು ಮೊಟ್ಟೆ, ಮೊಟೆತಾವರೆ, ಹೂ–ಪುಷ್ಪಗಳನ್ನು ಧರಿಸಿಕೊಂಡು ಶೋಭಿತನಾಗುವವನು ನಿಜವಾದ ಶರಣನಲ್ಲ, ಭಕ್ತನಲ್ಲ, ಅವರ ಇರವು ಚಂಡಾಲ ಸ್ಥಿತಿಯದು. ಆದುದರಿಂದ ಅಂಥವನ ಸಹವಾಸವೂ ಮಾದಿಗರ ಸಹವಾಸದಂತೆ ಎಂದಿರುವನು. ಕುಲ, ಜಾತಿ, ಕುಲಜ, ಅಕುಲ, ಜಾತ್ಯ, ಅಜಾತ, ಸತ್ಕುಲ, ದುಷ್ಕುಲ, ವರ್ಣಾಶ್ರಮ, ಚಂಡಾಲ ವರ್ತನೆ, ಚಂಡಾಲರ ಸಂಗ – ಇವುಗಳ ಕುರಿತು ಚರ್ಚಿಸಿ ಮನಪರಿಶುದ್ಧತೆ, ಮಹಾದೇವ, ಸಮತಾಗುಣ, ಕರುಣಾಸಮತೆ ಇವುಗಳ ಮೂಲಕ ಕುಲದ ಕನಿಷ್ಠತೆಯನ್ನು ದೂರಮಾಡುವುದು ಹೇಗೆಂಬುದನ್ನು ತಿಳಿಸಿರುವುದು ಔಚಿತ್ಯಪೂರ್ಣವಾಗಿದೆ. "ತಟ್ಟುವ ಮುಟ್ಟುವ ಭೇದ, ತಟ್ಟುವ ಮುಟ್ಟುವ ಭೇದವನೊಲ್ಲ. ಕುಲವೆಂದು ಹೋರಾಡುವ ಅಣ್ಣಗಳಿರ, ಕೇಳಿರೋ ಕುಲನೋಡದೆ, ನಡೆಯ ನೋಡಿ" ನಡೆಯಬೇಕೆಂದು ಹೇಳುವ ಮೂಲಕ ಸಕಲಜೀವಿಗಳಲ್ಲಿ ಸಮತಾಭಾವದ ನಿಲುವು ತಳೆದಿರುವನು.

**ಪ್ರೊ॥ ಲಿಂಗಪ್ಪ ಗೋನಾಲ**
ಮುಖ್ಯಸ್ಥರು, ಕನ್ನಡ ವಿಭಾಗ, ಉಸ್ಮಾನಿಯಾ ವಿಶ್ವವಿದ್ಯಾಲಯ
ಹೈದರಾಬಾದ್ – ೫೦೦ ೦೦೭

# ಆರೋಗ್ಯ ವಿಮೆ ರಕ್ಷಣೆ ಬೇಕಾ?

**ಈ ವರ್ಷದ ಬಜೆಟ್‌ನಲ್ಲಿ ಭಾರೀ ಸಡಗರದಿಂದ ಘೋಷಿಸಲಾದ 'ಆಯುಶ್ಮಾನ್ ಭವ ಆರೋಗ್ಯ ರಕ್ಷಣೆ' ಅಥವಾ ಮಾಧ್ಯಮ ಭಟ್ಟಂಗಿಗಳು ಹೆಸರಿಸಿದ 'ಮೋದಿ ಕೇರ್' ಈ ಆಗಸ್ಟ್‌ನಲ್ಲಿ ಆರಂಭವಾಗಲಿದೆ ಎಂದು ಹೇಳಲಾಗಿತ್ತು. ಪ್ರತಿಯೊಂದನ್ನೂ ಚುನಾವಣಾ ಪ್ರಚಾರದ ದೃಷ್ಟಿಯಿಂದ ನೋಡುವ ಮೋದಿ ಸರ್ಕಾರ ಈ ಬಗ್ಗೆ ಇನ್ನೊಂದು ಸುತ್ತಿನ ಅಬ್ಬರದ ಪ್ರಚಾರ ನಡೆಸುವ ಸಾಧ್ಯತೆಯಿದೆ. ಈ ಹಿನ್ನೆಲೆಯಲ್ಲಿ ಆ ಯೋಜನೆಯ ಕಾರ್ಯಸಾಧ್ಯತೆ ಮತ್ತು ಅಪ್ರಯೋಜಕತೆಯ ಬಗ್ಗೆ ಒಂದು ಲೇಖನ.**




**ಈ**ಗಿನ ದಿನಗಳಲ್ಲಿ ಆಸ್ಪತ್ರೆಗೆ ಆಪರೇಶನ್ ಮಾಡಿಸಿಕೊಳ್ಳಲು ಹೋದರೆ, ನಿಮ್ಮ ಸಮಸ್ಯೆ, ನಿಮ್ಮ ಹೆಸರು, ವಿಳಾಸ ಮುಂತಾದವುಗಳನ್ನು ಕೇಳುವುದಕ್ಕಿಂತ ಮೊದಲು "ನೀವು ವಿಮಾ (ಇನ್ಶೂರೆನ್ಸ್) ಹೊಂದಿದ್ದೀರೆ? ನಿಮ್ಮ ಹತ್ತಿರ ಆರೋಗ್ಯದ ಇನ್ಶೂರೆನ್ಸ್ ಪಾಲಿಸಿ ಇದೆಯೇ?" ಎಂದು ಕೇಳುತ್ತಾರೆ. ಇದು ಖಾಸಗಿ ಆಸ್ಪತ್ರೆಗಳಲ್ಲಿ ಸಾಮಾನ್ಯ. ಸರ್ಕಾರಿ ಆಸ್ಪತ್ರೆಗಳಲ್ಲಿ ಈ ರೀತಿ ಕೇಳುವುದಿಲ್ಲ. ಈಗಿನ ದಿನಗಳಲ್ಲಿ ಖಾಸಗಿ ಆಸ್ಪತ್ರೆ ಚಿಕಿತ್ಸೆಗಳು ವಿಪರೀತ ದುಬಾರಿಯಾಗಿವೆ. ಜನಸಾಮಾನ್ಯರಿಗೆ ಈ ಚಿಕಿತ್ಸಾ ವೆಚ್ಚವನ್ನು ಭರಿಸಲು ಕಷ್ಟವಾಗುತ್ತದೆ. ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸಾ ವೆಚ್ಚವೇ ಇರುವುದಿಲ್ಲವಾದರೂ ಅಲ್ಲಿ ಜನಜಂಗುಳಿ ಇರುವುದರಿಂದ, ಮಧ್ಯಮ ವರ್ಗದವರು ಖಾಸಗಿ ಆಸ್ಪತ್ರೆಗಳಿಗೆ ಹೋಗುವುದು ಸಾಮಾನ್ಯವಾಗಿದೆ. ಈ ಖಾಸಗಿ ಆಸ್ಪತ್ರೆಗಳ ಚಿಕಿತ್ಸಾ ವೆಚ್ಚವನ್ನು ಒಂದೇ ಸಲ ಭರಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಬಹಳ ಜನ ಈ ಆರೋಗ್ಯ ವಿಮೆ ತೆಗೆದುಕೊಳ್ಳಲು ಮುಂದಾಗುತ್ತಾರೆ.

ಖಾಸಗಿ ವಿಮಾ ಕಂಪನಿಗಳು ಆರೋಗ್ಯ ವಿಮೆಯನ್ನು ನೀಡುತ್ತ ಬಂದಿವೆ. ಈ ವಿಮೆ ತೆಗೆದುಕೊಂಡಾಗ ಕಟ್ಟಬೇಕಾದ ಕಂತು ಸಾಮಾನ್ಯವಾಗಿ ಎಲ್ಲರಿಗೂ ಎಟುಕುವಂತಿರುತ್ತದೆ. ಆದ್ದರಿಂದ ವಿಮಾ ವಿಧಾನವನ್ನು ಹೆಚ್ಚು ಜನರು ಬಳಸುತ್ತಿದ್ದಾರೆ. ಈ ಖಾಸಗಿ ವಿಮೆಯಲ್ಲಿ ಕಂತನ್ನು ಕಟ್ಟಬೇಕು ಹಾಗೂ ಅದರಲ್ಲಿ ಇನ್ನೂ ಅನೇಕ ತೊಂದರೆಗಳಿವೆ. ಈ ಖಾಸಗಿ ವಿಮಾ ಪಾಲಿಸಿಯನ್ನು ನಿಗದಿತ ಆದಾಯ ಇಲ್ಲದವರಿಗೆ, ಬಡಜನರಿಗೆ ಕೊಂಡುಕೊಳ್ಳಲು ಸಾಧ್ಯವಾಗುವುದಿಲ್ಲ.

ಬಡಜನರಿಗೆ ಸರ್ಕಾರಿ ಆಸ್ಪತ್ರೆ ಉಚಿತ ಚಿಕಿತ್ಸೆ ನೀಡುತ್ತೆ. ಆದರೂ ಅನೇಕ ಬಾರಿ ಅವರಿಗೆ ಅಲ್ಲಿ ಚಿಕಿತ್ಸೆ ಪಡೆಯಲು ಸಾಧ್ಯವಾಗುವುದಿಲ್ಲ. ಅನೇಕ ಜನರು ಖಾಸಗಿ ಆಸ್ಪತ್ರೆಗಳಿಗೆ ಹೋಗಲು ಸಾಧ್ಯವಾಗದೆ ಇರುವುದರಿಂದ ಕಾಯಿಲೆಯಿಂದ ಬಳಲುತ್ತಾರೆ, ಹಾಗೂ ಅನೇಕ ಬಾರಿ ಸಾವನ್ನಪ್ಪುತ್ತಾರೆ. ಕೆಲವೇ ಕೆಲವರು ಖಾಸಗಿ ಆಸ್ಪತ್ರೆಗೆ ಹೋಗಲು ತಮ್ಮ ಆಸ್ತಿ ಮಾರಿ, ಚಿಕಿತ್ಸೆ ವೆಚ್ಚ ಭರಿಸಲು ಮುಂದಾಗುತ್ತಾರೆ. ಆಸ್ಪತ್ರೆ ವೆಚ್ಚ ಹೆಚ್ಚಾಗಲು ಕಾರಣ, ಸರ್ಕಾರದ ನವ–ಉದಾರವಾದಿ ಆರ್ಥಿಕ ನೀತಿ. ಅದನ್ನು ಮುಂದೆ ವಿವರಿಸಿದೆ.

೨೦೦೭ರಲ್ಲಿ ಆಂಧ್ರಪ್ರದೇಶದಲ್ಲಿ ಬಡಜನರಿಗೆ ಉಪಯೋಗವಾಗುವ ಜೀವ್ ಆರೋಗ್ಯ ಶ್ರೀ ಯೋಜನೆಯನ್ನು ಪ್ರಾರಂಭಿಸಲಾಯಿತು. ಈ ಯೋಜನೆಯಲ್ಲಿ ಸರ್ಕಾರವೇ ವಿಮಾ ಕಂತುಗಳನ್ನು ಕಟ್ಟುವ ವ್ಯವಸ್ಥೆ ಬಂದಿತು. ನಂತರದ ವರ್ಷಗಳಲ್ಲಿ ಈ ಆರೋಗ್ಯ ವಿಮೆ ಬಹಳ ಜನಪ್ರಿಯವಾಯಿತು.

೨೦೦೯ರಲ್ಲಿ ಭಾರತ ಸರ್ಕಾರ, ಆಂಧ್ರದ ವಿಮಾ ಯೋಜನೆಯ ಯಶಸ್ಸಿನ ಆಧಾರದ ಮೇಲೆ ರಾಷ್ಟ್ರೀಯ ಸ್ವಾಸ್ಥ್ಯ ಬಿಮಾ ಯೋಜನೆಯನ್ನು ಜಾರಿಗೊಳಿಸಿತು. ಇದರಲ್ಲಿಯೂ ಸರ್ಕಾರವೇ ವಿಮಾ ಕಂತುಗಳನ್ನು ಕಟ್ಟುವ ಯೋಜನೆ ಇತ್ತು. ಇದೂ ಕೂಡ ಯಶಸ್ವಿ ಕಾರ್ಯಕ್ರಮವಾಯಿತು.

ಈಗ ಮೋದಿ ಸರ್ಕಾರ, ವಿಮಾ ಯೋಜನೆಯನ್ನೂ ಮುಂದುವರಿಸಿಕೊಂಡು ಹೋಗಲು ಆಯುಶ್ಮಾನ್ ಭಾರತ ಎಂಬ ವಿಮಾ ಯೋಜನೆಯನ್ನು ಜಾರಿಗೊಳಿಸಿದೆ. ಈಗ ಆ ಯೋಜನೆಯ ವಿಷಯದ ಬಗ್ಗೆ ತಿಳಿದುಕೊಳ್ಳೋಣ.

**ಡಾ॥ ಪ್ರಕಾಶ್ ಸಿ. ರಾವ್**

**ಆಯುಶ್ಮಾನ್ ಭಾರತ–ವಿಮಾ ಯೋಜನೆ (AB-NHPS)**

೨೦೧೮ರಲ್ಲಿ ಮೋದಿ ಸರ್ಕಾರ ಆಯುಶ್ಮಾನ್ ಭಾರತ ಎಂಬ ರಾಷ್ಟ್ರೀಯ ಆರೋಗ್ಯ ರಕ್ಷಣಾ ಯೋಜನೆ (AB-NHPS)ಯನ್ನು ಜಾರಿಗೊಳಿಸಲು ಮುಂದಾಗಿದೆ. ಈ ಯೋಜನೆಯನ್ನು ಕರ್ನಾಟಕ ಸರ್ಕಾರದ ಸಹಯೋಗದೊಂದಿಗೆ ಪ್ರಾರಂಭಿಸಲಿದೆ. ಇದನ್ನು ಇತರೇ ರಾಜ್ಯಗಳಲ್ಲೂ ಪ್ರಾರಂಭಿಸುವ ಯೋಜನೆ ಹಾಕಿಕೊಂಡಿದೆ. ಇದನ್ನು ಸಂಸತ್ತಿನ ೨೦೧೮–೧೯ರ ಮುಂಗಡ ಪತ್ರದ ಮಂಡನೆಯ ಸಮಯದಲ್ಲಿ ಶ್ರೀ ಅರುಣ್ ಜೇಟ್ಲಿಯವರು ಘೋಷಣೆ ಮಾಡುತ್ತ ಇದೊಂದು ರಾಷ್ಟ್ರೀಯ ವಿಮಾ ಯೋಜನೆ. ಇದು ೧೦ ಕೋಟಿ ಬಡ ಕುಟುಂಬಗಳಿಗೆ ಸಹಾಯಕವಾಗಲಿದೆ ಹಾಗೂ ಪ್ರತಿ ಕುಟುಂಬಕ್ಕೆ ವರ್ಷಕ್ಕೆ ೫ ಲಕ್ಷ ರೂ.ವರೆಗೆ ಚಿಕಿತ್ಸೆಗೆ ವಿಮಾ ಹಣ ದೊರಕುವ ಯೋಜನೆ ಮಾಡಲಾಗುವುದು ಎಂದು ಹೇಳಿದರು. ಈ ವಿಮಾ ಯೋಜನೆ ಸರ್ಕಾರಿ ಹಾಗೂ ಖಾಸಗಿ ಆಸ್ಪತ್ರೆಗಳಲ್ಲಿ ಜಾರಿಗೆ ಬರುತ್ತದೆ. ಹಾಗೂ ಆ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುವವರಿಗೆ ವಿಮಾ ಹಣವನ್ನು ನೀಡಲಾಗುವುದು ಎಂದು ಹೇಳಿದರು.

**ಈ ಯೋಜನೆಯ ವಿವರಗಳು**

ಈ ಯೋಜನೆ ದೇಶದಲ್ಲಿನ ೭೦% ಆಸ್ಪತ್ರೆಗಳನ್ನು ತಲುಪುತ್ತದೆ ಹಾಗೂ ೪೦% ಜನಸಂಖ್ಯೆಗೆ ಪ್ರಯೋಜನವಾಗಲಿದೆ. ಈ ಯೋಜನೆಗೆ ನೋಂದಣಿಯಾದ ಸಣ್ಣ ಹಾಗೂ ಮಧ್ಯಮ ಗಾತ್ರದ ಆಸ್ಪತ್ರೆಗಳನ್ನು ಗುರುತಿಸಲಾಗುವುದು. ಈ ಆಸ್ಪತ್ರೆಗಳಲ್ಲಿ ೧೦ ಅಥವಾ ಹೆಚ್ಚು ರೋಗಿಗಳ ಹಾಸಿಗೆಗಳಿರಬೇಕಾಗುತ್ತದೆ.




ಈ ಆಸ್ಪತ್ರೆಗಳಿಗೆ ನ್ಯಾಷನಲ್ ಅಕ್ರೆಡಿಟೇಷನ್ ಬೋರ್ಡ್ ಹಾಸ್ಪಿಟಲ್‌ನ ಪ್ರಮಾಣ ಪತ್ರ ಅಗತ್ಯವಿಲ್ಲ, ಅವರಲ್ಲಿ ಆ ಪ್ರಮಾಣ ಪತ್ರವಿದ್ದರೆ ಅವರು ಪ್ರತಿಶತ ೧೦ರಿಂದ ೧೫ಕ್ಕಿಂತ ಹೆಚ್ಚು ಹಣವನ್ನು ವಿಧಿಸಬಹುದು. ಆಸ್ಪತ್ರೆಗಳು ಎನ್‌ಎಬಿಹೆಚ್/ ನ್ಯಾಷನಲ್ ಕ್ವಾಲಿಟಿ ಅಶೂರೆನ್ಸ್ ಸ್ಟ್ಯಾಂಡರ್ಡ್ ಪ್ರಮಾಣ ಪತ್ರಗಳನ್ನು ಹೊಂದಿದ್ದರೆ ಹೆಚ್ಚಿಗೆ ಹಣವನ್ನು ವಿಧಿಸಬಹುದು. ಆ ಆಸ್ಪತ್ರೆಗಳು ಡಿ.ಎನ್.ಎ. ತರಬೇತಿ ಕೇಂದ್ರಗಳಾಗಿದ್ದರೆ (ವೈದ್ಯಕೀಯ ಸ್ನಾತಕೋತ್ತರ ಪರೀಕ್ಷೆ) ಅವರೂ ಪ್ರತಿಶತ ೧೦ರಿಂದ ೧೫ರಷ್ಟು ಹೆಚ್ಚು ಶುಲ್ಕ ವಿಧಿಸಬಹುದು. ಕೇಂದ್ರ ಸರ್ಕಾರ ದೆಹಲಿಯಲ್ಲಿ ೨೪x೭ ಕೆಲಸ ಮಾಡುವ ಕೇಂದ್ರವನ್ನೂ ಸ್ಥಾಪಿಸಿ ಅಲ್ಲಿ ವಿಮಾ ಯೋಜನೆ ಬಗ್ಗೆ ಜನರಲ್ಲಿ ದೂರುಗಳನ್ನು ಸ್ವೀಕರಿಸಿ ಅದಕ್ಕೆ ಉತ್ತರ ನೀಡುವ ವ್ಯವಸ್ಥೆಯನ್ನು ಮಾಡಲಿದೆ. ಈ ವಿಮಾ ಯೋಜನೆ ಸುಮಾರು ೧೧ ಕೋಟಿ ಕುಟುಂಬದ ಕಾರ್ಡ್‌ಗಳನ್ನು ಹಳ್ಳಿಗಳಲ್ಲಿ ಹಂಚುವ ವ್ಯವಸ್ಥೆ ಮಾಡಲಾಗುವುದು. ಈ ಎಲ್ಲ ತಯಾರಿಯನ್ನು ಆಗಸ್ಟ್ ೧೫, ೨೦೧೮ರೊಳಗೆ ಮಾಡಲಾಗುವುದು. ಆದರೆ ಈ ಕಾರ್ಯಕ್ರಮ ಎಂದು ಅನಾವರಣಗೊಳ್ಳುತ್ತದೆ ಎಂಬುದು ಇನ್ನೂ ತಿಳಿದುಬಂದಿಲ್ಲ.

ಈ ಕುಟುಂಬದ ಕಾರ್ಡ್‌ನಲ್ಲಿ ಯಾರು ಅದನ್ನು ಬಳಸಬಹುದು ಎಂಬುದನ್ನು ಮತ್ತು ಅವರ ಹೆಸರನ್ನು ನಮೂದಿಸಲಾಗಿರುತ್ತದೆ. ಈಗಾಗಲೇ ಸರ್ಕಾರ ೮೦% ಗ್ರಾಮೀಣ ಫಲಾನುಭವಿಗಳನ್ನು ಹಾಗೂ ೬೦% ಪಟ್ಟಣದ ಫಲಾನುಭವಿಗಳನ್ನು ಗುರುತಿಸಿದೆ. ಈ ಯೋಜನೆ ೧೦ ಕೋಟಿ ಬಡ ದುರ್ಬಲ ವರ್ಗದವರಿಗೆ ಹಾಗೂ ೫೦ ಕೋಟಿ ಕಾರ್ಡುಗಳನ್ನು ಆಶಾಕಾರ್ಯಕರ್ತೆಯರು ಮನೆ ಮನೆಗೆ ಹೋಗಿ ಫಲಾನುಭವಿ ಕುಟುಂಬಗಳಿಗೆ ನೀಡಲಿದ್ದಾರೆ ಎಂದು ಹೇಳಲಾಗಿದೆ.

ಇದಕ್ಕಾಗಿ ೧೧ ಕೋಟಿ ಮಾಹಿತಿ ಪತ್ರ ಹಾಗೂ ಕಾರ್ಡ್‌ಗಳನ್ನು ಅಚ್ಚು ಹಾಕಿಸಿ ಫಲಾನುಭವಿ ಕುಟುಂಬಗಳಿಗೆ ನೀಡುವ ವ್ಯವಸ್ಥೆ ಮಾಡಲಾಗಿದೆ ಹಾಗೂ ಇದು ಸುಮಾರು ಎರಡು ವರ್ಷದಲ್ಲಿ ಪೂರ್ತಿಗೊಳ್ಳಲಿದೆ. ಇದರ ಫಲಾನುಭವಿಗಳ ಮಾಹಿತಿಯನ್ನು ರಾಷ್ಟ್ರೀಯ ಆರೋಗ್ಯ ಏಜೆನ್ಸಿ ಈ ಸಂಸ್ಥೆಗೆ ನೀಡಲಿದೆ. ಈ ಕಾರ್ಯಕ್ರಮ ಪರಿಣಾಮಕಾರಿಯಾಗಿ ಕೆಲಸವನ್ನು ನಿರ್ವಹಿಸಲಿದೆ, ಎಂದು ಹೇಳಲಾಗಿದೆ.

**ಆಯುಶ್ಮಾನ್ ಮಿತ್ರ**

ಆಯುಶ್ಮಾನ್ ಭಾರತ ಪಟ್ಟಿಯಲ್ಲಿರುವ ಎಲ್ಲ ಆಸ್ಪತ್ರೆಗಳಲ್ಲಿ ಸಾರ್ವತ್ರಿಕ ಆರೋಗ್ಯ ವ್ಯಾಪ್ತಿ ವ್ಯವಸ್ಥೆಯನ್ನೂ ಮಾಡಲಾಗುವುದು. ಈ ಯೋಜನೆಯ ಫಲಾನುಭವಿಗಳನ್ನು ಆರ್ಥಿಕ ಹಾಗೂ ಸಾಮಾಜಿಕ ಮಾಹಿತಿಯ ಆಧಾರದ ಮೇಲೆ ಗುರುತಿಸಲಾಗುವುದು. ಪ್ರತಿಯೊಂದೂ, ನೋಂದಣಿಯಾಗಿ ಆಯುಶ್ಮಾನ್ ಭವ ಒಪ್ಪಿಕೊಂಡ ಆಸ್ಪತ್ರೆಯಲ್ಲಿ ಒಬ್ಬ ಆಯುಶ್ಮಾನ್ ಮಿತ್ರ ಇರುತ್ತಾರೆ. ಇವರ ಕೆಲಸ ರೋಗಿಗಳು (ಈ ಕಾರ್ಯಕ್ರಮದ ಫಲಾನುಭವಿಗಳು) ಹಾಗೂ ಆಸ್ಪತ್ರೆ ನಡುವೆ ಸಂಪರ್ಕ ಏರ್ಪಡಿಸಿ ಸಹಾಯ ಮಾಡುವುದು, ಅವರು ಸಹಾಯ ಕೇಂದ್ರದಲ್ಲಿ ಫಲಾನುಭವಿಗಳ ಕಾಗದ ಪತ್ರಗಳನ್ನು ಪರಿಶೀಲಿಸಿ ಆಸ್ಪತ್ರೆಯವರೊಂದಿಗೆ ಸ್ಪಂದಿಸುತ್ತಾರೆ, ಎನ್ನಲಾಗಿದೆ.

ಪ್ರತಿಯೊಬ್ಬ ಫಲಾನುಭವಿಗೆ ಒಂದು ಪತ್ರವನ್ನು ನೀಡಿರುತ್ತಾರೆ ಹಾಗೂ ಅದರಲ್ಲಿ ಕ್ಯೂಆರ್ ಕೋಡ್ ಇರುತ್ತದೆ. ಅದನ್ನು ಆ ಮಿತ್ರ ಸ್ಕ್ಯಾನ್ ಮಾಡಿ ಆ ವ್ಯಕ್ತಿಯ ವಿವರಗಳನ್ನು ಪಡೆದು ಆಸ್ಪತ್ರೆಗೆ ಚಿಕಿತ್ಸೆ ನೀಡಲು ಸಹಾಯ ಮಾಡುತ್ತಾನೆ. ಇಲ್ಲಿಯವರೆಗೆ ೨೫ ರಾಜ್ಯಗಳು ಹಾಗೂ ಕೇಂದ್ರಾಡಳಿತ ಪ್ರದೇಶಗಳು ಈ ಕಾರ್ಯಕ್ರಮವನ್ನು ಜಾರಿಗೊಳಿಸುವುದಾಗಿ ಒಪ್ಪಿಗೆ ಪತ್ರಕ್ಕೆ (MoU) ಸಹಿ ಮಾಡಿವೆ. ಈ ಕಾರ್ಯಕ್ರಮದಲ್ಲಿ ಪಟ್ಟಣ ಪ್ರದೇಶದ ೨೩.೩ ಕೋಟಿ ಜನ ಹಾಗೂ ಗ್ರಾಮೀಣ ಪ್ರದೇಶದ ೮.೦೩ ಕೋಟಿ ಜನ ಭಾಗವಹಿಸುವ ಸಾಧ್ಯತೆ ಇದೆ.

**ವಿಮಾ ಯೋಜನೆಗೆ ಹಣಕಾಸು**

ಈ ವಿಮಾ ಯೋಜನೆಗೆ ಹಣ ಎಷ್ಟು ಮತ್ತು ಎಲ್ಲಿಂದ ಬರುತ್ತದೆ ಎಂಬುದು ಸ್ಪಷ್ಟವಿಲ್ಲ. ಇಲ್ಲಿಯವರೆಗೆ ಆರೋಗ್ಯ ಮುಂಗಡ ಪತ್ರದಲ್ಲಿ ವಿಮೆಗೆ ಮೀಸಲಾಗಿಟ್ಟಿರುವ ಹಣ (೨೦೦೦ ಕೋಟಿ ರೂಪಾಯಿ, ೫೦ ಕೋಟಿ ಜನರ ವಿಮೆಗಾಗಿ) ಸಾಲದು. ಇತ್ತೀಚೆಗೆ ಆರ್ಥಿಕ ಖಾತೆ ಕಾರ್ಯದರ್ಶಿ ಹಸ್‌ಮುಖ್ ಆದಿಯಾ ಅವರು ಒಂದು ಸಂದರ್ಶನದಲ್ಲಿ "ಈ ಯೋಜನೆಯನ್ನು ಇನ್ನೂ ಕಾರ್ಯರೂಪಕ್ಕೆ ತರಬೇಕಾಗಿದೆ. ಆ ಯೋಜನೆಯ ವಿವಿಧ ಹಂತಗಳನ್ನು ತೀರ್ಮಾನಿಸಬೇಕಿದೆ ಹಾಗೂ ಈ ಕಾರ್ಯಕ್ರಮ ೨೦೧೯-೨೦ರಲ್ಲಿ ಪ್ರಾರಂಭವಾಗುವ ಸಾಧ್ಯತೆ ಇದೆ" ಎನ್ನುತ್ತಾರೆ. ಅಂದರೆ ನೀವೇ ಊಹಿಸಬಹುದು, ಇದು ಮೋದಿ ಸಮಯದಲ್ಲಿ ಆಗದೇ ಇರಬಹುದು ಹಾಗೂ ಈ ಯೋಜನೆ ಪ್ರಾರಂಭದಲ್ಲೇ ಕುಸಿದುಹೋಗುವ ಸಾಧ್ಯತೆ ಇರಬಹುದಲ್ಲ! ಈ ಕಾರ್ಯಕ್ರಮ ಜಾರಿಗೆ ಬರಲು ಪ್ರತಿವರ್ಷ ೫೦,೦೦೦ದಿಂದ ೧.೨ ಲಕ್ಷ ಕೋಟಿ ಹಣ ಹೂಡಬೇಕಾಗುತ್ತದೆ. ಅದರರ್ಥ ಆರೋಗ್ಯದ ಬಜೆಟ್‌ನಲ್ಲಿ ಕಡಿಮೆ ಹಣ ಇಟ್ಟಿರುವಾಗ ಈ ಯೋಜನೆ ಒಂದು ಕಣ್ಣಾಮುಚ್ಚಾಲೆ ಆಟವೇ.

**ಈ ವಿಮಾ ಯೋಜನೆ ಜನರಿಗೆ ಪ್ರಯೋಜನವಾಗಬಲ್ಲದೇ?**

ಈ ಯೋಜನೆಗೆ ಸರಕಾರಗಳು ಎಲ್ಲಿಂದ ಹಣ ಹೂಡುತ್ತವೆ? ಹೇಗೋ ಹಣ ಹೂಡಿದರು ಎಂದುಕೊಳ್ಳಿ, ಆಗಲೂ ಆರೋಗ್ಯ ವ್ಯವಸ್ಥೆ ಸುಧಾರಿಸಲಾರದು. ಆರೋಗ್ಯ ವಿಮೆ ಪ್ರಯೋಜನವಾಗುವುದು ಅನುಮಾನವೇ. ಆರೋಗ್ಯ ವಿಮೆ ಬಗ್ಗೆ ನಮ್ಮ ಹಿಂದಿನ ಅನುಭವ ಇದನ್ನು ಸೂಚಿಸುತ್ತದೆ.

ಈಗ ವಿಮಾ ಯೋಜನೆ ಕೇವಲ ೧೨-೧೩% ಭಾಗದಷ್ಟು ಜನರಿಗೆ ತಲುಪಿದೆ. ಅದಲ್ಲದೆ, ಈ ವಿಮಾ ಯೋಜನೆ ಕೇವಲ ಆಸ್ಪತ್ರೆ ಚಿಕಿತ್ಸೆಗೆ ಮಾತ್ರ ಹಾಗೂ ಅದರಲ್ಲಿಯೂ ಕೆಲವು ಆಪರೇಶನ್‌ಗಳಿಗೆ ಮಾತ್ರ ಸೀಮಿತವಾಗಿದೆ. ಜನಸಾಮಾನ್ಯರಿಗೆ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯ ಅಗತ್ಯತೆ ಇದೆ. ಆದರೆ ಅದಕ್ಕೆ ಯಾವ ವಿಮೆಯೂ ಸಹಾಯಕವಾಗಲಾರದು. ಈ ಯೋಜನೆಯನ್ನು ಖಾಸಗಿ ಹಾಗೂ ಕೆಲವು ಸಾರ್ವಜನಿಕ ಆಸ್ಪತ್ರೆಗಳಲ್ಲಿ ಜಾರಿಗೆ ತರಲಾಗುತ್ತಿದೆ.

ಹಿಂದೆ ಆರೋಗ್ಯ ಶ್ರೀ ಎಂಬ ವಿಮಾ ಯೋಜನೆಯಲ್ಲಿ (೨೦೦೭-೨೦೧೩) ೧೦.೭೧ ಶತಕೋಟಿ ರೂಪಾಯಿಗಳನ್ನು ಸಾರ್ವಜನಿಕ ಆಸ್ಪತ್ರೆಗೆ ನೀಡಲಾಗಿತ್ತು. ಆದರೆ ಖಾಸಗಿ ಆಸ್ಪತ್ರೆಗೆ ನೀಡಿದ ಹಣ ೩೬.೫೨ ಶತಕೋಟಿ. ಖಾಸಗಿ ಆಸ್ಪತ್ರೆಗಳು ಚಿಕಿತ್ಸೆ ದ್ವಿತೀಯ ಹಾಗೂ ತೃತೀಯ ಹಂತದ ಆರೋಗ್ಯ



ಸೇವೆಗೆ ಮೀಸಲಿರುತ್ತವೆ. ಆದರೆ ಈ ಯೋಜನೆಯಲ್ಲಿ ಸಾಂಕ್ರಾಮಿಕ ರೋಗಗಳಿಗೆ ಉದಾಹರಣೆಗೆ ಕ್ಷಯ ಹಾಗೂ ದೀರ್ಘಕಾಲದ ರೋಗಗಳಿಗೆ, ಉದಾಹರಣೆಗೆ ಸಕ್ಕರೆ ಕಾಯಿಲೆ, ರಕ್ತದ ಒತ್ತಡ, ಹೃದಯ ರೋಗ, ಕ್ಯಾನ್ಸರ್ ರೋಗಗಳಿಗೆ, ಆಸ್ಪತ್ರೆ ಚಿಕಿತ್ಸೆ ನೀಡಲಾಗುವುದಿಲ್ಲ ಹೀಗಾಗಿ ವಿಮಾ ಯೋಜನೆ ದಿನನಿತ್ಯದ ಸಮಸ್ಯೆಗಳಿಗೆ ಪ್ರಯೋಜನಕರವಾಗುವುದಿಲ್ಲ. ಆರೋಗ್ಯ ಶ್ರೀ ಯೋಜನೆಯಲ್ಲಿ ೨೫% ಹಣವನ್ನು ರಾಜ್ಯ ಆರೋಗ್ಯ ಯೋಜನೆಯ ಹಣಕಾಸಿನಿಂದ ಪಡೆಯಲಾಗಿತ್ತು. ಆದರೆ ಅದನ್ನು ಕೇವಲ ೨% ರೋಗಿಗಳಿಗೆ ವಿಮೆಗೆ ಬಳಸಲಾಗಿತ್ತು. ಇದರಿಂದಾಗಿ ಸರಕಾರಕ್ಕೆ ಅನಗತ್ಯ ವೆಚ್ಚವಾಗುವುದಲ್ಲದೆ ಆರೋಗ್ಯ ಕ್ಷೇತ್ರ ಸುಧಾರಿಸುವ ಬದಲು ಖಾಸಗಿ ಆಸ್ಪತ್ರೆಗಳನ್ನು ಉದ್ಧಾರ ಮಾಡಿದಂತಾಗುತ್ತದೆ.

**ಯಾಕೆ ವಿಮಾ ಯೋಜನೆ**

ನವ-ಉದಾರವಾದಿ ಆರ್ಥಿಕತೆ ೧೯೯೧ರಿಂದ ಭಾರತದಲ್ಲಿ ಜಾರಿಯಲ್ಲಿದೆ. ಈ ಆರ್ಥಿಕತೆ ವಿಮಾ ಯೋಜನೆಗೆ ಮಹತ್ವ ನೀಡುತ್ತದೆ. ಸರ್ಕಾರಿ ಹಾಗೂ ಖಾಸಗಿ ಕ್ಷೇತ್ರವನ್ನು ತೊಡಗಿಸಿಕೊಂಡು ಹೋಗುವುದು ಉತ್ತಮ ಎಂಬ ನಂಬಿಕೆ ಈ ಧೋರಣೆಯಲ್ಲಿದೆ. ಆದರೆ ಇದು ಜನರಿಗೆ ಪ್ರಯೋಜನಕಾರಿಯಲ್ಲ, ಖಾಸಗಿಯವರಿಗೆ ಲಾಭಕಾರಿಯಷ್ಟೇ. ಈ ಆರ್ಥಿಕತೆಯನ್ನು ಜಾರಿಮಾಡಲು ಸರ್ಕಾರಿ ಹಣವನ್ನು ಖಾಸಗಿ ಕ್ಷೇತ್ರದ ಉನ್ನತೀಕರಿಸಲು ಬಳಸಲಾಗುತ್ತದೆ. ಆದರೆ ಅದರಿಂದ ಸರ್ಕಾರಿ ಕ್ಷೇತ್ರ ಕ್ಷೀಣಿಸುವುದನ್ನು ಕಡೆಗಣಿಸಲಾಗುತ್ತದೆ. ಅದರ ಬದಲು ಸರ್ಕಾರಿ ಹಣವನ್ನು ಬಳಸಿ, ಸರ್ಕಾರಿ ಕ್ಷೇತ್ರವನ್ನು ಉನ್ನತ ಮಟ್ಟಕ್ಕೆ ತೆಗೆದುಕೊಂಡು ಹೋಗಬಹುದು ಎಂಬ ತರ್ಕವನ್ನು ತಿರಸ್ಕರಿಸುವುದು ಅರ್ಥಹೀನ. ಈ ನವ-ಉದಾರವಾದಿ ಆರ್ಥಿಕತೆಯಲ್ಲಿ ಖಾಸಗಿ ಕ್ಷೇತ್ರಕ್ಕೆ ನಿರಂತರವಾಗಿ ರೋಗಿಗಳನ್ನು ನೀಡಿದಂತಾಗುತ್ತದೆ. ಆದರೆ ಖಾಸಗೀ ಚಿಕಿತ್ಸಾ ಗುಣಮಟ್ಟ ಹಾಗೂ ಚಿಕಿತ್ಸಾ ವೆಚ್ಚದ ಮೇಲೆ ನಿಯಂತ್ರಣ ಸಾಧಿಸುವುದು ಸಾಧ್ಯವಾಗದಿರುವ ನಮ್ಮಂತಹ ಬಡದೇಶದಲ್ಲಿ ಈ ನವ-ಉದಾರವಾದಿ ಆರ್ಥಿಕತೆ ಜನರಿಗೆ ಒಳ್ಳೆಯದನ್ನು ಮಾಡದು.

ಈ ನವ-ಉದಾರವಾದಿ ಆರ್ಥಿಕತೆ ಬದಲು ಸರ್ಕಾರಿ ಕ್ಷೇತ್ರಕ್ಕೆ ಹೆಚ್ಚಿನ ಹಣ ನೀಡಿ ಸರ್ಕಾರೀ ಆಸ್ಪತ್ರೆಗಳ ಪರಿಸ್ಥಿತಿಯನ್ನು ಸುಧಾರಿಸಬೇಕಾಗಿದೆ. ಇಲ್ಲದಿದ್ದರೆ ಗೋರಕಪುರದಂತಹ ಪರಿಸ್ಥಿತಿ ಉಂಟಾಗಿ ನೂರಾರು ಮಕ್ಕಳ ಸಾವು ಸಂಭವಿಸುವುದು ಸಾಮಾನ್ಯವಾಗುತ್ತಾ ಹೋಗುತ್ತದೆ. ಈ ನವ-ಉದಾರವಾದಿ ನೀತಿ ಜಾರಿಗೊಳಿಸಿ ಸರ್ಕಾರವೇ ಸಾರ್ವಜನಿಕ ಆರೋಗ್ಯ ವ್ಯವಸ್ಥೆಯನ್ನು ಕ್ಷೀಣಿಸಹೊರಟಿದೆ.

ಆದರೆ ಜಗತ್ತಿನಾದ್ಯಂತ ಉತ್ತಮ ಆರೋಗ್ಯ ಸೇವೆಗಳಿಗೆ ಖಾಸಗಿ ಆಸ್ಪತ್ರೆ ಬದಲು ಸರ್ಕಾರಿ ಆಸ್ಪತ್ರೆಗಳೇ ಕಾರಣವಾಗಿವೆ ಎಂದು ಅನೇಕ ಉದಾಹರಣೆಗಳು ತಿಳಿಸುತ್ತವೆ. ಉದಾಹರಣೆಗೆ ಬ್ರಿಟನ್, ಶ್ರೀಲಂಕಾ, ಥೈಲ್ಯಾಂಡ್, ಫ್ರಾನ್ಸ್, ಕ್ಯೂಬಾ. ನಮ್ಮ ದೇಶದಲ್ಲಿ ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಕಡೆಗಣಿಸಲಾಗಿದೆ. ಆರೋಗ್ಯ ಸುಧಾರಿಸಲು ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಅತ್ಯಗತ್ಯ. ಈ ಖಾಸಗಿ ಆಸ್ಪತ್ರೆಗಳು ಗ್ರಾಮೀಣ ಪ್ರದೇಶದಲ್ಲಿ ಇರದಿರುವುದರಿಂದ ಹೇಗೆ ವಿಮಾ ಯೋಜನೆ ಎಲ್ಲರಿಗೂ ತಲುಪಿ ಯಶಸ್ವಿಯಾಗಲು ಸಾಧ್ಯ?

**ಈ ವಿಮಾ ಯೋಜನೆಯಿಂದ ಪ್ರಯೋಜನ ಯಾರಿಗೆ?**

ಈಗ ದೊಡ್ಡ ದೊಡ್ಡ ಶ್ರೀಮಂತರು ಈ ಖಾಸಗಿ ಆಸ್ಪತ್ರೆಗಳನ್ನು ನಡೆಸುತ್ತಾರೆ. ಅವರು ಈ ನವ-ಉದಾರವಾದಿ ನೀತಿಯಿಂದ ಜಾರಿಗೆ ಬರುವ ವಿಮಾ ಯೋಜನೆಯಿಂದ ಸಂತೋಷಪಡುತ್ತಾರೆ. ಈ ಯೋಜನೆ ಬಡವರಿಗೆ ಸಹಾಯಕವೇ ಎಂದು ಕೇಳಿದರೆ, ಸರ್ಕಾರ ಇದು ಎಲ್ಲರಿಗೂ ಲಾಭದಾಯಕ ಎಂಬ ಉಡಾಫೆ ಉತ್ತರ ನೀಡುತ್ತದೆ. ಈ ಯೋಜನೆಯನ್ನು ಇನ್ನೂ ಪ್ರಾರಂಭಿಸಿಯೇ ಇಲ್ಲ. ಆದರೂ ಈ ಬಿಜೆಪಿ ಸರ್ಕಾರ ಈ ಯೋಜನೆಯನ್ನು ಜಾರಿಗೊಳಿಸಿ ಯಶಸ್ವಿಯಾಗಿದೆ ಎಂದು ಹೇಳಿಕೊಳ್ಳುತ್ತಿದೆ. ಇತ್ತೀಚೆಗೆ ನೀತಿ ಆಯೋಗದ ರಾಜೀವ್ ಕುಮಾರ್ ಅವರು ಪ್ರೊ॥ ಅಮರ್ತ್ಯ ಸೇನ್ ಅವರೊಂದಿಗೆ ಚರ್ಚೆಯಲ್ಲಿದ್ದ ವಿಡಿಯೋ ನೋಡಿದರೆ ನಿಮಗೆ ಗೊತ್ತಾಗುತ್ತದೆ.

**ಈ ಯೋಜನೆಗೆ ಯಾವುದಾದರೂ ಆಧಾರವಿದೆಯೇ?**

ಈ ಯೋಜನೆಯ ಆರ್ಥಿಕತೆ ಬಗ್ಗೆ ಕರ್ನಾಟಕದ ಬಗ್ಗೆ ಒಂದು ಅಧ್ಯಯನವನ್ನು ಮಾಡಲಾಗಿತ್ತು. ಅದನ್ನು "ಕರ್ನಾಟಕ ಗೌವರ್ನಮೆಂಟ್ ಕಾಸ್ಟಿಂಗ್ ಸ್ಟಡಿ" ಎಂದು ಕರೆಯಲಾಗಿದೆ. ಈ ಯೋಜನೆಯಲ್ಲಿ ಕರ್ನಾಟಕದ ೪ ಆಸ್ಪತ್ರೆಗಳಲ್ಲಿ ಈ ವಿಮಾ ಯೋಜನೆಗೆ ಪ್ರಮುಖ ೨೦ ಚಿಕಿತ್ಸಾ ಕ್ರಮದ ಬಗ್ಗೆ ಅಧ್ಯಯನ ಮಾಡಲಾಯಿತು.

# ಕಣವಾಗುವ ಕನಸಿನತ್ತ

ಹಸುವನ್ನು ದೇವರೆನ್ನುತ್ತೀರಿ
ಸಗಣಿಯನ್ನು, ಗಂಜಲವನ್ನು ಪವಿತ್ರ ಎನ್ನುತ್ತೀರಿ
ಸತ್ತ ದೇವರನ್ನು ತಿಂದವರನ್ನು ಹೊರಗೆ
ಸಾಯಿಸಿದವರನ್ನು ಒಳಗೆ ಇಟ್ಟು
ನಾವು ಶ್ರೇಷ್ಠ ಎಂದು ಬೀಗುತ್ತೀರಿ
ನಿಮ್ಮನ್ನು ನೋಡಿ ನಗು ಬರುತ್ತದೆ

ಭಾರತ ಮಾತೆ ಎನ್ನುತ್ತೀರಿ
ಎಂಜಲು, ಮಲ, ಮೂತ್ರ, ಕೊಳಕನ್ನು
ಭೂಮಿಗೆ ಬಿಡುತ್ತೀರಿ
ಪವಿತ್ರವಾದ ಜಾಗವೆಲ್ಲಾದರೂ ಇದೆಯೇ ಹುಡುಕಿ
ಅನ್ನಬ್ರಹ್ಮ ಎನ್ನುತ್ತೀರಿ
ಹಸಿದವನು ಅನ್ನ ಕದ್ದಿದ್ದಕ್ಕೆ ಒದ್ದು ಸಾಯಿಸುತ್ತೀರಿ
ಮನುಷ್ಯರೆನ್ನುವ ಪದಕ್ಕೆ ಅರ್ಥ
ಹುಡುಕಬೇಕಿದೆ

ನಾನು ಹಸಿದವರ, ನೊಂದವರ ಪರ ಮಾತನಾಡಿದರೆ
ನೀವು ಎಡಪಂಥೀಯ ಎನ್ನುತ್ತೀರಿ
ಸಕಲವನ್ನೂ ನೀಡಿದ ಪ್ರಕೃತಿಗೆ
ನಮಸ್ಕರಿಸಿದರೆ ಅವರು ಬಲಪಂಥೀಯ ಎನ್ನುತ್ತಾರೆ

ಎಡಭುಜ ಬಲಭುಜಗಳಿಲ್ಲದ ಕೂಡಿಲ್ಲದ
ದೇಹ ವಿಕೃತಿಯ ಮಾಂಸ ಮಾತ್ರವಲ್ಲವೆ
ಜೀವವಿರದ ಕಲ್ಲಿಗೆ ದೇವರೆನ್ನುವ ನಿಮಗೆ
ಜೀವವಿರುವವರ ಕುರಿತು ದಯೆ ಬರಲಿ
ಅವರು ಸರಿ ಇಲ್ಲ ಎನ್ನುವ ನಿಮಗೂ
ಪ್ರಕೃತಿಯ ನೋಡುವ ಸಮಗ್ರತೆಯ ಕಣ್ಣು
ಒಡಮೂಡಲಿ

ಬದುಕು ಪ್ರಾಣಿಗಳಿಗಿಂತ ಕಡುಕಷ್ಟ ಮಾಡುವುದು
ಸರಳತೆಯ ಭಾವೈಕ್ಯದ ಬದುಕು ಕಟ್ಟುವುದು
ನಮ್ಮಲ್ಲೇ ಇದೆ
ನಾನು ಅದನ್ನೇ ಮಾಡಬೇಕೆಂಬ ಹಂಬಲದ
ಒಂದು ಕಣ.

**ಸತ್ಯಮಂಗಲ ಮಹಾದೇವ**
ಸಹಪ್ರಾಧ್ಯಾಪಕರು, ಕನ್ನಡ ವಿಭಾಗ, ಬಿ.ಎನ್.ಇ.ಎಸ್. ಪದವಿ ಕಾಲೇಜು
ಮಹಾಲಕ್ಷ್ಮಿ ಲೇಔಟ್, ಬೆಂಗಳೂರು – ೫೬೦ ೦೮೬

ಈ ಅಧ್ಯಯನದಲ್ಲಿ ಈ ಚಿಕಿತ್ಸಾ ಕ್ರಮಗಳಿಗೆ (ಪ್ರೊಸೀಜರ್ಸ್) ಎಷ್ಟು ವೆಚ್ಚ ತಗುಲಬಹುದು ಎಂದು ತೀರ್ಮಾನಿಸಲಾಗಿತ್ತು. ಈ ಅಧ್ಯಯನದ ಬಗ್ಗೆ ಆಗಲೇ ಅಪಸ್ವರಗಳೆದ್ದಿವೆ. ಕರ್ನಾಟಕದ ಆರೋಗ್ಯ ಕಾರ್ಯದರ್ಶಿಗಳು "ಈ ಯೋಜನೆ ರಾಜ್ಯ ಸರ್ಕಾರದ ಯೋಜನೆ ಅಲ್ಲ" ಎನ್ನುತ್ತಾರೆ. ಈ ಅಧ್ಯಯನದ ಬಗ್ಗೆ ಎದ್ದ ಅಪಸ್ವರಗಳು ಹೀಗಿವೆ : ಈ ಅಧ್ಯಯನದಲ್ಲಿ ಕೇವಲ ಬೆಂಗಳೂರಿನಲ್ಲಿದ್ದ ೪ ಆಸ್ಪತ್ರೆಗಳನ್ನು ಗುರುತಿಸಲಾಗಿದೆ. ಈ ಆಸ್ಪತ್ರೆಗಳು ಇಡೀ ಭಾರತದ ಆಸ್ಪತ್ರೆಗಳನ್ನು ಪ್ರತಿನಿಧಿಸುವುದಿಲ್ಲ ಹಾಗೂ ಆ ಆಸ್ಪತ್ರೆಗಳಲ್ಲಿ ಈ ಯೋಜನೆಗೆ ನೇರಸಂಬಂಧವಿರುವ ವ್ಯಕ್ತಿಗಳಿದ್ದಾರೆ. ಇದು ಸ್ವತಂತ್ರವಲ್ಲ. ಖಾಸಗಿ ಆಸ್ಪತ್ರೆಯವರ (ಅಸೋಸಿಯೇಶನ್ ಆಫ್ ಹೆಲ್ತ್ ಪ್ರೊಫೆಶನಲ್ಸ್ ಆಫ್ ಇಂಡಿಯಾ) ಗುಂಪು ಸರ್ಕಾರದ ಈ ಯೋಜನೆಯಲ್ಲಿ ಬೆಲೆ ನಿಗದಿಪಡಿಸಿದ್ದಕ್ಕೆ ಅಸಂತೋಷ ವ್ಯಕ್ತಪಡಿಸಿದ್ದಾರೆ. ಕೇಂದ್ರ ಸರ್ಕಾರದ ಮೇಲೆ ಒತ್ತಡ ತಂದು ಹೆಚ್ಚು ಬೆಲೆ ನಿಗದಿ ಮಾಡಲು ಕೇಳಿಕೊಂಡಿದ್ದಾರೆ. ಈ ಖಾಸಗಿ ಆಸ್ಪತ್ರೆಗಳ ಒತ್ತಡಕ್ಕೆ ಮಣಿದ ಸರ್ಕಾರ ಬೆಲೆಗಳಲ್ಲಿ ಹೆಚ್ಚಳ ತಂದಿದೆ.

ಕರ್ನಾಟಕ ಗೌರ್ನಮೆಂಟ್ ಕಾಸ್ಟಿಂಗ್ ಸ್ಟಡಿ ಎಂಬ ಒಂದು ಅಧ್ಯಾಯವನ್ನು ಕರ್ನಾಟಕ ಸಾರ್ವಜನಿಕ ಆರೋಗ್ಯ ನೀತಿಯಲ್ಲಿ ಸೇರಿಸಲಾಗಿದೆ. ಇದನ್ನು ೨೦೧೬ರ ನವೆಂಬರ್‌ನಲ್ಲಿಯೇ ಕರ್ನಾಟಕ ಜ್ಞಾನ ಆಯೋಗ ಪ್ರಕಟಿಸಿತ್ತು. ಆ ಅಧ್ಯಯನದಲ್ಲಿ ಸುಮಾರು ೨೦ ಚಿಕಿತ್ಸಾ ಪದ್ಧತಿಗಳಿಗೆ ಬೆಲೆ ನಿಗದಿಮಾಡುವ ಅಧ್ಯಯನ ನಡೆಸಿದೆ. ಆದರೆ ಖಾಸಗಿ ಆಸ್ಪತ್ರೆಗಳ ಪ್ರಕಾರ ಈ ಚಿಕಿತ್ಸಾ ಕ್ರಮಗಳಿಗೆ ಹೆಚ್ಚು ಖರ್ಚಾಗುವುದರಿಂದ, ಆ ಆಯೋಗದ ಬೆಲೆಗಳನ್ನು ಹೆಚ್ಚಿಸಬೇಕು ಎಂದಿವೆ.

ಈಗ ಕರ್ನಾಟಕ ಸರ್ಕಾರ ಎ.ಬಿ.ಎನ್.ಹೆಚ್.ಸಿ.ಎನ್. ಜೊತೆಗೆ ಒಪ್ಪಂದ ಮಾಡಿಕೊಳ್ಳಲು ಹೊರಟಿದೆ. ಇದರರ್ಥ ಸರ್ಕಾರದ ನಿಲುವು ಆರೋಗ್ಯ ಕ್ಷೇತ್ರದ ಖಾಸಗೀಕರಣದತ್ತ ಎಂಬುದು ಸ್ಪಷ್ಟವಾಗುತ್ತದೆ. ಜೂನ್ ೨೨, ೨೦೧೮ರಂದು ಭಾರತೀಯ ವೈದ್ಯಕೀಯ ಸಂಘದ ಪ್ರತಿನಿಧಿಗಳು ಕೇಂದ್ರ ಸರ್ಕಾರದೊಂದಿಗೆ ಈ ಯೋಜನೆಗೆ ಸಮ್ಮತಿ ನೀಡಲು ಭೇಟಿಯಾಗಿದ್ದರೆಂದು ಸರ್ಕಾರ ಪತ್ರಿಕೆಗಳಿಗೆ ಮಾಹಿತಿ ನೀಡಿದೆ. ಆದರೆ ಐಎಮ್ಎ ಈ ಯೋಜನೆಯ ಹಣಕಾಸಿನ ವಿಷಯದ ಬಗ್ಗೆ ಒಪ್ಪಿಗೆ ನೀಡಿಲ್ಲ. ಸರ್ಕಾರ ಈ ಹಣಕಾಸಿನ ವೆಚ್ಚದಲ್ಲಿ ಬದಲಾವಣೆ ಮಾಡುವುದಾಗಿ ಹೆಚ್ಚಳ ನೀಡುವುದಾಗಿ ತಿಳಿಸಿದೆ. ಆಯುಶ್ಮಾನ್ ಭವ ಕಾರ್ಯಕ್ರಮದ ನಿರ್ದೇಶಕ ಡಾ॥ ದಿನೇಶ್ ಅರೋರಾ, ಈ ಯೋಜನೆಯ ಹಣಕಾಸಿನ ವಿಷಯವನ್ನು ಭಾರತೀಯ ವೈದ್ಯಕೀಯ ಸಂಶೋಧನೆಯ ವಿಭಾಗದೊಂದಿಗೆ ಒಂದು ಚರ್ಚೆ ಏರ್ಪಡಿಸಿ ತೀರ್ಮಾನಕ್ಕೆ ಬರುವುದಾಗಿ ತಿಳಿಸಿದ್ದಾರೆ.

## ಅರ್ಧ ಚಂದ್ರ

ಬಡ ಪ್ರಜೆಗೆ
ಇಂದು
ತೋರಿಸುತ್ತಾರೆ
ಆಕಾಶದ ಚಂದ್ರ
ಅಧಿಕಾರ
ಬಂದಾಗ
ತೋರಿಸುತ್ತಾರೆ
ಬಡ ಪ್ರಜೆಗೆ ಅರ್ಧ ಚಂದ್ರ

**ಶಿವಮೊಗ್ಗ ಗೀತಾಶಾಸ್ತ್ರಿ**
ಬೆಂಗಳೂರು – ೫೬೦ ೦೨೮

ಈ ವಿಮಾ ಯೋಜನೆ ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, ಈಗಾಗಲೇ ಇರುವ ಖಾಸಗಿ ವಿಮೆ ತೆಗೆದುಕೊಂಡವರಿಗೆ ಇದನ್ನು ಸೇರಲು ಸಾಧ್ಯವಿಲ್ಲ. ಈ ಯೋಜನೆ ಪ್ರತಿ ವರ್ಷ ೩೦,೦೦೦ ರೂ. ದ್ವಿತೀಯ ಹಂತದ ಆರೋಗ್ಯ ಸೇವೆ ಪಡೆಯಲು ನೀಡಲಾಗುವುದು ಹಾಗೂ ಅಂಥ ವ್ಯಕ್ತಿಗಳಿಗೆ ಅಗತ್ಯವಿದ್ದರೆ ತೃತೀಯ ಹಂತದ ಆರೋಗ್ಯ ಸೇವೆ ಪಡೆಯಲು ೫ ಲಕ್ಷ ರೂ. (ಮೂಲ ೧.೫ ಲಕ್ಷ) ನೀಡಲು ಸರ್ಕಾರ ತಯಾರಾಗಿದೆ.

**ಸಾಂಸ್ಥಿಕ ಭ್ರಷ್ಟಾಚಾರ**

ಆರೋಗ್ಯದ ವಿಷಯಗಳು ಪೂರ್ತಿ ತೀರ್ಮಾನವಾಗದಿದ್ದಾಗ ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಜನರಿಗೆ ದೊರಕದಿದ್ದಾಗ ಆರೋಗ್ಯ ಕಾಪಾಡಲು ಸರ್ಕಾರ ಹಣ ಕೊಡುತ್ತದೆ ಎಂಬ ಮಾಹಿತಿ ಅನೇಕರಲ್ಲಿ ಆಶ್ಚರ್ಯ ಹಾಗೂ ಸಂತೋಷವನ್ನು ಉಂಟುಮಾಡುತ್ತದೆ. ಜನರಿಗೆ ಈ ವಿಮಾ ಯೋಜನೆಯ ಒಂದು ಆಕರ್ಷಕ ವಿಷಯವೆಂದರೆ ಅವರು ವಿಮಾ ಕಂತು ಕಟ್ಟುವಂತಿಲ್ಲ. ಆದರೆ ಯಾವುದೇ ವಿಮಾ ಯೋಜನೆಯ ಉದ್ದೇಶ ಏನಿರಬೇಕೆಂದು ಜನರಿಗೆ ತಿಳಿಸಲಾಗಿಲ್ಲ ಹಾಗೂ ಹಾಗೆಯೇ ತರ್ಕವಿಲ್ಲದೇ ಈ ವಿಮಾ ಯೋಜನೆಯನ್ನು ಜಾರಿಗೆ ತರಲಾಗುತ್ತಿದೆ. ಈ ವಿಮಾ ಯೋಜನೆಯಿಂದ ಜನರ ಬದಲು, ವಿಮಾ ಕಂಪನಿಗಳಿಗೆ ಲಾಭವಾಗಲಿದೆ. ಇದು ಉದಾರವಾದಿ ನೀತಿಯ ಒಂದು ಉಪನೀತಿಯೇ ಆಗಿದೆ. ಆದರೆ ಆರೋಗ್ಯ ವ್ಯವಸ್ಥೆ ಸುಧಾರಿಸಲು ಖಾಸಗಿ ಆರೋಗ್ಯ ವ್ಯವಸ್ಥೆಯೇ ಅತ್ಯಗತ್ಯ ಎಂಬ ತೀರ್ಮಾನಕ್ಕೆ ಸರ್ಕಾರ ಬಂದಂತಾಗಿದೆ ಹಾಗೂ ಖಾಸಗಿ ಸಂಸ್ಥೆಗಳಿಗೆ ಪ್ರಾಮುಖ್ಯತೆ ಬಂದಿದೆ.

ಈ ಸಮಸ್ಯೆ ಜಗತ್ತಿನಾದ್ಯಂತ ಅನೇಕ ದೇಶಗಳಲ್ಲಿ ಕಂಡುಬಂದಿದೆ. ಇಲ್ಲಿಯವರೆಗೆ ಕಾರ್ಯದಲ್ಲಿ ತೊಡಗಿದ್ದ ವಿಶ್ವ ಆರೋಗ್ಯ ವ್ಯವಸ್ಥೆಯನ್ನು ಈ ಖಾಸಗಿ ಸಂಸ್ಥೆಗಳೇ ಬಲಹೀನಗೊಳಿಸಿವೆ ಎಂದರೆ ತಪ್ಪಾಗಲಾರದು. (ಉದಾಹರಣೆಗೆ : ಅಮೇರಿಕಾದ ಮೆಕೆನ್ಸೀ, ಬಿಲ್‌ಗೇಟ್ ಸಂಸ್ಥೆಗಳು) ಈಗ ನಮ್ಮ ದೇಶದಲ್ಲಿ ಖಾಸಗಿ ಆಸ್ಪತ್ರೆ ನೀತಿಗಳು ಬರಲು ಈ ಮೆಕೆನ್ಸೀ ಸಂಸ್ಥೆಯೇ ಕಾರಣ ಎಂಬುದು ಬಹಳ ಜನರಿಗೆ ತಿಳಿದಿರಲಾರದು. ಭಾರತದ ಸರ್ಕಾರಿ ನೀತಿಗಳನ್ನು ಈ ಖಾಸಗಿ ಸಂಸ್ಥೆಗಳೇ ನಿರ್ಧರಿಸುತ್ತವೆ ಎಂದರೆ ಆಶ್ಚರ್ಯವಾಗಬಹುದಲ್ಲವೇ. ಇದು ಕೇವಲ ನೀತಿಯ ವಿಷಯವಲ್ಲ, ಸಾಂಸ್ಥಿಕ ಭ್ರಷ್ಟಾಚಾರ.

ನವ – ಉದಾರವಾದಿ ನೀತಿಯಲ್ಲಿ ಸಾರ್ವಜನಿಕ ವ್ಯವಸ್ಥೆಗಳ ಬದಲು ಖಾಸಗಿ ಸಂಸ್ಥೆಗಳಿಗೆ ಪ್ರಾಮುಖ್ಯತೆ ನೀಡಲಾಗುವುದು. ಇಂದು ಭ್ರಷ್ಟಾಚಾರ ಎಂದರೆ ಸಾರ್ವಜನಿಕ ಸರ್ಕಾರಿ ವ್ಯವಸ್ಥೆಯನ್ನೂ ಖಾಸಗಿ ಲಾಭಕ್ಕೆ ಉಪಯೋಗಿಸುವ ಪದ್ಧತಿ ಎನ್ನಬಹುದು. ೧೯೯೧ರಿಂದ ಸತತವಾಗಿ ಸರ್ಕಾರಿ ಸೇವೆಗಳನ್ನು ಕ್ಷೀಣಿಸುವಂತೆ ಮಾಡಲು ಸರ್ಕಾರವೇ ಎಲ್ಲ ಪ್ರಯತ್ನ ಮಾಡಿದೆ. ಸರ್ಕಾರವೇ ದೂರ ನಿಂತು ಖಾಸಗಿ ಕ್ಷೇತ್ರವನ್ನು ಪ್ರೋತ್ಸಾಹಿಸಿತು. ಆದ್ದರಿಂದ ಕೆಲಸ ತೆಗೆದುಕೊಂಡು, ಅಪಾರ ಹಣ ಕೊಟ್ಟು, ತಾನು ದೂರನಿಂತು ನೋಡುತ್ತಾ ತನ್ನ ಕರ್ತವ್ಯದಿಂದ ವಿಮುಖವಾಗುತ್ತ ಹೊರಟಿದೆ.




**ಮೋದಿ ಕೇರ್‌ನಲ್ಲಿ ಬುಡಮೇಲಾದ ಪಿರಮಿಡ್**

ಆಯುಶ್ಮಾನ್ ಭಾರತ ಅಥವಾ ವಿಮಾ ಯೋಜನೆಯನ್ನು ಮೋದಿ ಕೇರ್ ಎಂತಲೂ ಕರೆಯಲಾಗುತ್ತಿದೆ. ಇದು ಜಾಗತಿಕ ನವ–ಉದಾರವಾದಿ ಆರೋಗ್ಯದ ಮಾದರಿ ಜಾರಿಯಲ್ಲಿದೆ. ಸರ್ಕಾರಿ ಹಾಗೂ ಖಾಸಗಿ ಕ್ಷೇತ್ರದ ಕಾರ್ಯವೈಖರಿಯನ್ನೂ ಬದಲಿಸುವ ತಂತ್ರವಿದು. ಈ ವ್ಯವಸ್ಥೆಯಲ್ಲಿ ಸರ್ಕಾರಿ ಕ್ಷೇತ್ರ ಕ್ಷೀಣಿಸುತ್ತದೆ. ಖಾಸಗಿ ಕ್ಷೇತ್ರ ಬಲಗೊಳ್ಳುತ್ತದೆ. ಆರೋಗ್ಯ ಚಿಕಿತ್ಸೆ ದುಬಾರಿಯಾಗುತ್ತದೆ. ರೋಗ ತಡೆಗಟ್ಟುವಿಕೆ ಇಲ್ಲವಾಗುತ್ತದೆ.

ನವ–ಉದಾರವಾದಿ ವ್ಯವಸ್ಥೆ ೧೯೯೧ರಿಂದ ಪ್ರಾರಂಭವಾಗಿದೆ. ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಹಾಗೂ ವಿಶ್ವಬ್ಯಾಂಕ್ ಇವರ

ಆದೇಶದ ಮೇಲೆ ರಾಷ್ಟ್ರೀಯ ಆರೋಗ್ಯ ನೀತಿಗಳು ರೂಪುಗೊಂಡಿವೆ. ಖಾಸಗಿ ಕ್ಷೇತ್ರದಲ್ಲಿನ ಕೆಲವು ಪ್ರಭಾವಶಾಲಿ ವೈದ್ಯರು, ಉದಾಹರಣೆಗೆ ಡಾ॥ ದೇವಿ ಶೆಟ್ಟಿ ಹಾಗೂ ಡಾ॥ ನರೇಶ್ ಟ್ರೆಹಾನ್ ಅವರು ಈಗ ಈ ಸರ್ಕಾರದ ನೀತಿಯನ್ನು ರೂಪಿಸಲು ಮುಂದಾಗಿದ್ದಾರೆ. ಅದಲ್ಲದೆ, ಸರ್ಕಾರದಲ್ಲಿ ಮುಖ್ಯ ಹುದ್ದೆಯಲ್ಲಿದ್ದ ಅಧಿಕಾರಿಗಳು ನಿವೃತ್ತಿ ನಂತರ ಖಾಸಗಿ ಕಂಪನಿಗಳಿಗೆ ಸೇರಿಕೊಂಡು, ಖಾಸಗಿ ಕ್ಷೇತ್ರಕ್ಕೆ ಪ್ರೋತ್ಸಾಹ ನೀಡುತ್ತಿದ್ದಾರೆ.

೭೦ರ ದಶಕದ ಆರೋಗ್ಯ ವ್ಯವಸ್ಥೆ ಪಿರಮಿಡ್‌ಗಳಂತೆ ಇದ್ದವು. ಪಿರಮಿಡ್ ಬುಡದಲ್ಲಿರುವ ಕೋಟ್ಯಂತರ ಜನರ ಪ್ರಾಥಮಿಕ ಆರೋಗ್ಯ ಸಮಸ್ಯೆಯನ್ನು ಸುಧಾರಿಸುವ ವ್ಯವಸ್ಥೆ, ಮೇಲ್ತುದಿಯಲ್ಲಿರುವ ಕೆಲವರಿಗೆ ತೃತೀಯ ಹಂತದ ಸೇವೆಯ ಅಗತ್ಯತೆ ಇದೆ.

ಆದರೆ ಈಗ ಜಾರಿಗೆ ಬರಲಿರುವ ಆಯುಶ್ಮಾನ್ ಭಾರತ, ಈ ಪಿರಮಿಡ್ಡನ್ನೂ ಬುಡಮೇಲು ಮಾಡಲಿದೆ ಹಾಗೂ ಇದರಿಂದಾಗಿ ಹೆಚ್ಚಿನ ಜನರಿಗೆ ಕಡಿಮೆ ಸೇವೆ ದೊರೆಯಲಿದೆ. ಸರ್ಕಾರವು ತೃತೀಯ ಹಂತದ ಆರೋಗ್ಯ ಸೇವೆಗಳನ್ನು ನೀಡಲು ಎಲ್ಲ ಪ್ರಯತ್ನವನ್ನು ಮಾಡಲಿದೆ ಹಾಗೂ ಪ್ರಾಥಮಿಕ ಆರೋಗ್ಯ ಸೇವೆಗಳು ಕಡೆಗಣಿಸಲ್ಪಡುತ್ತವೆ. ಈ ಸರ್ಕಾರಿ ವಿಮಾ ಯೋಜನೆ ಕೇಂದ್ರ ಸರ್ಕಾರದೊಂದಿಗೆ ಸೇರಿ ಖಾಸಗಿ ಆಸ್ಪತ್ರೆಗಳಿಗೆ ಉತ್ತೇಜನ ನೀಡಲು ಹೊರಟಿದೆ. ಖಾಸಗಿ ಆಸ್ಪತ್ರೆಗಳು ಶಕ್ತಿಶಾಲಿಗಳಾಗಿವೆ. ಈ ಹಂತದಲ್ಲಿ ಸರ್ಕಾರ ಸಾರ್ವಜನಿಕ ಆರೋಗ್ಯ ವ್ಯವಸ್ಥೆಯನ್ನೂ ಕಡೆಗಣಿಸಿದೆ. ಅದಕ್ಕೆ ಉದಾಹರಣೆ ಸಾರ್ವಜನಿಕ ಆರೋಗ್ಯ ವ್ಯವಸ್ಥೆಯಲ್ಲಿ ಕಡಿಮೆ ಹಣ ಹೂಡಿಕೆ ಹಾಗೂ ಖಾಸಗಿ ಆಸ್ಪತ್ರೆಗಳು ಆರೋಗ್ಯದ ಜವಾಬ್ದಾರಿ ತೆಗೆದುಕೊಳ್ಳಲಿ ಎಂದು ಅವುಗಳಿಗೆ ಪ್ರೋತ್ಸಾಹ ನೀಡಿವೆ. ಈ ಹಂತದಲ್ಲಿ "ಖಾಸಗೀ ಆಸ್ಪತ್ರೆಗಳು ವಿಮಾ ಯೋಜನೆಗೆ ಹೆಚ್ಚಿನ ಹಣಕಾಸು ನೀಡಿ ಇಲ್ಲದಿದ್ದರೆ ನಾವು ಯೋಜನೆಯಲ್ಲಿ ಪಾಲ್ಗೊಳ್ಳುವುದಿಲ್ಲ" ಎಂದು ಹಟ ಹಿಡಿಯುವ ಮಟ್ಟಕ್ಕೆ ಹೋಗಿವೆ. ಈ ಯೋಜನೆ ಯಶಸ್ವಿಯಾಗಲು ಖಾಸಗಿ ಕ್ಷೇತ್ರದ ಪಾಲ್ಗೊಳ್ಳುವಿಕೆ ಅತ್ಯಗತ್ಯ ಎಂದು ಸರ್ಕಾರ ಪರಿಗಣಿಸುತ್ತದೆ.

ಒಬ್ಬ ವ್ಯಕ್ತಿ ಅಥವಾ ಒಂದು ಗುಂಪು ಅಕ್ರಮವಾಗಿ ಹಣ ತೆಗೆದುಕೊಂಡರೆ ಅದನ್ನು ಭ್ರಷ್ಟಾಚಾರ ಎಂದು ಗುರುತಿಸುತ್ತೇವೆ. ವ್ಯವಸ್ಥೆಯನ್ನೇ ಬದಲಿಸುವ ನವ–ಉದಾರವಾದಿ ನೀತಿಗಳನ್ನು ಭ್ರಷ್ಟಾಚಾರ ಎಂದು ಪರಿಗಣಿಸುವುದಿಲ್ಲ. ಈ ಸನ್ನಿವೇಶದಲ್ಲಿ ಖಾಸಗಿ ಆರೋಗ್ಯ ಸಂಸ್ಥೆಗಳು ಜನಸಾಮಾನ್ಯರ ಲೂಟಿಗೆ ಸಜ್ಜಾಗಿವೆ. ಅನಗತ್ಯ ಪರೀಕ್ಷೆಗಳು, ಅನಗತ್ಯ ಚಿಕಿತ್ಸೆಗಳು, ದುಬಾರಿ ವೆಚ್ಚ ವಿಧಿಸುವುದು ಈ ಯೋಜನೆಯಲ್ಲಿ ಸಾಮಾನ್ಯವಾಗಲಿವೆ.

ನರೇಂದ್ರ ಮೋದಿಯವರು ತಮ್ಮದು ಭ್ರಷ್ಟಾಚಾರ ರಹಿತ ಸರ್ಕಾರ ಎಂದು ಆಗಿಂದಾಗ್ಗೆ ಹೇಳುತ್ತಾರೆ. ಆದರೆ ಬಹುಶಃ ಈ ವಿಷಯ ಗೊತ್ತಿದ್ದೂ ಜನರಿಗೆ ತಪ್ಪು ಮಾಹಿತಿ ನೀಡುತ್ತಿದ್ದಾರೆಂದು ಅನಿಸುತ್ತದೆ.

ಮೋದಿ ಸರ್ಕಾರದ ಇನ್ನೊಂದು ಗುಣವೆಂದರೆ ಎಲ್ಲವನ್ನು ವೈಭವೀಕರಿಸುವುದು, ಇದ್ದ ವ್ಯವಸ್ಥೆಯಲ್ಲಿ ಸ್ವಲ್ಪ ಬದಲಾವಣೆ ತಂದು ಹೊಸ ಹೆಸರು ಕೊಟ್ಟು ವೈಭವೀಕರಿಸುವುದು. ಸುಳ್ಳು ವೈಭವೀಕರಣವನ್ನೂ ಸಾರ್ವಜನಿಕ ನೀತಿ ಎಂದು ಹೇಳಲಾಗುತ್ತಿದೆ.

"ಜಗತ್ತಿನ ಸರ್ಕಾರಿ ಹಣಕಾಸು ಅತಿ ದೊಡ್ಡ ಆರೋಗ್ಯ ಪಾಲನಾ ಕಾರ್ಯಕ್ರಮವೆಂದು" ಬಣ್ಣಿಸುತ್ತಾ ಅರುಣ್ ಜೇಟ್ಲಿಯವರು ಹೇಳಿದ ಕೂಡಲೇ ಈ ಕಾರ್ಯಕ್ರಮವನ್ನು ಮೋದಿ ಕೇರ್ (ಒಬಾಮಾ ಕೇರ್!) ಎಂದು ಈ ಕಾರ್ಯಕ್ರಮವನ್ನೂ ಕೆಲವು ಮಾಧ್ಯಮಗಳು ಘೋಷಿಸಿಯೇಬಿಟ್ಟವು.

ಆದರೆ ಸರ್ಕಾರ ೨೦೧೬ರಲ್ಲಿ ಇಂಥದೇ ಒಂದು ನೀತಿಯನ್ನು ತಂದಿತ್ತು. ಆಗ ಸರ್ಕಾರ ೧.೫ ಲಕ್ಷ ವಿಮಾ ನೀಡುವುದಾಗಿ ಹೇಳಿತು. ಆದರೆ ಈಗ ೫ ಲಕ್ಷ ರೂಪಾಯಿಗೆ ಏರಿಸಿದೆ. ಕಾರಣ ೨೦೧೯ ಚುನಾವಣೆಗಳೆ? ಆದರೆ ಇಲ್ಲಿ ಗಮನಿಸಬೇಕಾದ ಒಂದು ವಿಷಯವೆಂದರೆ ಸರ್ಕಾರ ೨೦೧೭–೧೮ರಲ್ಲಿ RSBYಗೆ ಮೀಸಲಿಟ್ಟ ಕೇವಲ ಅರ್ಧದಷ್ಟು ಹಣವನ್ನು ಖರ್ಚು ಮಾಡಿತ್ತು. ಈ ತರಹದ ವಾಗಾಡಂಬರದ ಮಾತುಗಳಲ್ಲಿ ಎಷ್ಟು ಶಕ್ತಿ ಇದೆ ನೋಡಿ !

**ಆರೋಗ್ಯ ವಿಮೆ ಅಥವಾ ಆರೋಗ್ಯ ರಕ್ಷಣೆ ?**

ಇಂದು ಅನೇಕ ವಿಮಾ ಯೋಜನೆಗಳು ಆರೋಗ್ಯ ಸಮಸ್ಯೆಗೆ ಯಾವ ರೀತಿಯ ಪರಿಹಾರ ನೀಡಿಲ್ಲವೆಂಬುದು ವಾಸ್ತವ. ಈ ಯೋಜನೆಯ ಬಗ್ಗೆ ಇರುವ ಗೊಂದಲ ಹುಟ್ಟಿಸುವ ವಿಷಯಗಳು ಈ ಯೋಜನೆಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರ ನಿಭಾಯಿಸಲು ತೀರ್ಮಾನಿಸಲಾಗಿದೆ. ಆದರೆ ಯಾವ ರಾಜ್ಯ ಸರ್ಕಾರದೊಂದಿಗೆ ಇವರು ಚರ್ಚಿಸಿದ್ದಾರೆ? ಐಎಂಎ ಜೊತೆಗೆ ಚರ್ಚೆ ಮಹತ್ವದ್ದಲ್ಲವೇ?

ಆಂಧ್ರ ಹಾಗೂ ತಮಿಳುನಾಡಿನಲ್ಲಿ ಈಗಾಗಲೇ ವಿಮಾ ಯೋಜನೆ ಜಾರಿಯಲ್ಲಿದೆ. ಈಗ ಆ ಯೋಜನೆಗಳನ್ನು ನಿಲ್ಲಿಸಲಾಗುತ್ತದೆಯೇ? 'ಒಬಾಮಾ ಕೇರ್' ಜಾರಿಗೆ ತರುವುದಕ್ಕಿಂತ ಮೊದಲು ದೇಶದಾದ್ಯಂತ ವ್ಯಾಪಕವಾಗಿ ತಜ್ಞ ಹಾಗೂ ಜನಸಾಮಾನ್ಯರೊಡನೆ ಚರ್ಚೆ ನಡೆಸಲಾಗಿತ್ತು. ಎಲ್ಲ ವಿಷಯಗಳನ್ನು ದಾಖಲಿಸಿ ಸ್ಪಷ್ಟತೆ ನೀಡಲಾಗಿತ್ತು. ಆದರೆ ಈ ಮೋದಿ ಕೇರ್ ಬಗ್ಗೆ ಸಮಾನ ಮಾದರಿಯನ್ನು ಮಾಡಿಲ್ಲ.

"ಈ ವಿಮಾ ಯೋಜನೆ ಹಾಗೂ ಆರೋಗ್ಯ ರಕ್ಷಣೆ ಅಮೆರಿಕಾದ ವಿಧಾನ. ಅದಕ್ಕೆ ಪರ್ಯಾಯವಾದ ಇನ್ನೊಂದು ವ್ಯವಸ್ಥೆಯೆಂದರೆ ಪ್ರಾಥಮಿಕ, ದ್ವಿತೀಯ, ತೃತೀಯ ಹಂತದ ಆರೋಗ್ಯ ಸೇವೆಗಳನ್ನು ಜಾರಿಗೊಳಿಸಿ, ಅದು ಎಲ್ಲರಿಗೂ ದೊರಕುವಂತೆ ಮಾಡುವುದು. ಇದನ್ನು ಯೂರೋಪಿನ ರಾಷ್ಟ್ರಗಳಲ್ಲಿ ಜಾರಿಗೊಳಿಸಲಾಗಿದೆ. ಈ ಸರ್ಕಾರ ಮೊದಲನೆಯ ವ್ಯವಸ್ಥೆಯನ್ನು ಒಪ್ಪಿಕೊಳ್ಳುವಂತಿದೆ ಹಾಗೂ ಅದು ನಮ್ಮಂತಹ ಬಡರಾಷ್ಟ್ರದಲ್ಲಿ ಅನಾಹುತ ಉಂಟುಮಾಡಬಹುದಾಗಿದೆ. ಈ ವಿಧಾನದ ಬಗ್ಗೆ ಅನುಮಾನಗಳು ಹಲವಾರು.

ಈ ವಿಮಾ ಯೋಜನೆಯಲ್ಲಿ ಜನರಿಗೆ ಆರೋಗ್ಯ ದೊರಕುವುದರ ಬದಲು ವಿಮಾ ಕಂಪನಿಗಳಿಗೆ ಲಾಭ ತಂದುಕೊಟ್ಟಂತಾಗುತ್ತದೆ. ಈ ತರಹದ ಮೂಲಭೂತ ವಿಷಯಗಳ ಬಗ್ಗೆ ತಿಳಿವಳಿಕೆ ಇಲ್ಲವೇ ಎಂಬ ಅನುಮಾನ ಬರುತ್ತದೆ. ಈ ವಿಮಾ ಯೋಜನೆಯ ಹಣಕಾಸಿನ ಲೆಕ್ಕಚಾರ ತಪ್ಪಿನಿಂದ ಕೂಡಿದೆ.

ಅದನ್ನು ಜಾರಿಗೊಳಿಸುವ ಮೊದಲೇ ವೈಭವೀಕರಿಸಲು ಹೊರಟಿದೆ. ಅದಲ್ಲದೆ, ಈ ವಿಮಾ ಯೋಜನೆ ಶ್ರೀಮಂತ ಖಾಸಗಿ ಆಸ್ಪತ್ರೆಗಳನ್ನೂ ಇನ್ನಷ್ಟು ಶ್ರೀಮಂತಗೊಳಿಸಲು ಹೊರಟಿದೆ. ಆದರೆ ಖಾಸಗಿ ಆಸ್ಪತ್ರೆಗಳು ಕ್ಷೀಣಿಸುತ್ತಿರುವುದನ್ನು ತಡೆಯದಂತಾಗಿದೆ. ಆರೋಗ್ಯ ವಿಮೆ ಬೇಕಾ, ಆರೋಗ್ಯ ರಕ್ಷಣೆ ಬೇಕಾ ಎಂಬ ಪ್ರಶ್ನೆಗೆ ನಾವೆಲ್ಲರೂ ಪರಿಹಾರ ಹುಡುಕಬೇಕಾಗಿದೆ.

**ವಿಮಾ ಯೋಜನೆ ಹೇಗಿರಬೇಕು?**

ಆರೋಗ್ಯ ಕ್ಷೇತ್ರದಲ್ಲಿ ಪ್ರಾಥಮಿಕ, ದ್ವಿತೀಯ, ತೃತೀಯ ಹಂತದ ಆರೋಗ್ಯ ಸೇವೆಗಳು ಎಲ್ಲರಿಗೂ ದೊರಕುತ್ತಿರಬೇಕು. ಅದರೊಂದಿಗೆ ವಿಮಾ ಯೋಜನೆ ಜಾರಿಗೆ ಬರಬೇಕು. ಅದನ್ನು ಕಡೆಗಣಿಸಿ, ವಿಮಾ ಯೋಜನೆ ತಂದರೆ ಅದು ಫಲಕಾರಿಯಾಗದು. ಸರಕಾರವೇ ಕಂತು ತುಂಬಬೇಕು. ಸರಿಯಾದ ಸಮಯಕ್ಕೆ ಜನರಿಗೆ ಹಣಕಾಸಿನ ಪರಿಹಾರ ದೊರಕಿಸಬೇಕು.

ಕೇವಲ ೨೦ ಚಿಕಿತ್ಸಾಕ್ರಮಗಳ ಬದಲು ಎಲ್ಲ ತರಹದ ಆರೋಗ್ಯ ಸಮಸ್ಯೆಗಳಿಗೆ ವಿಮೆ ಬರಬೇಕು. ಖಾಸಗಿ ಆಸ್ಪತ್ರೆಗಳ ಬದಲು, ಎಲ್ಲ ಸರ್ಕಾರಿ ಆಸ್ಪತ್ರೆಗಳನ್ನು ಉನ್ನತ ಮಟ್ಟಕ್ಕೇರಿಸಿ ಅಲ್ಲಿ ವಿಮೆ ಜಾರಿಗೆ ಬರಬೇಕು. ಈ ಬಗ್ಗೆ ಎಲ್ಲರಿಗೂ ಮಾಹಿತಿ ನೀಡಬೇಕು. ಈ ಯೋಜನೆ ಇದ್ದರೂ ಆರೋಗ್ಯ ವ್ಯವಸ್ಥೆಯ ಮೇಲೆ ಯಾವುದೇ ಕೆಟ್ಟ ಪರಿಣಾಮ ಬೀರಬಾರದು.

**ಡಾ॥ ಪ್ರಕಾಶ್ ಸಿ. ರಾವ್**
ಅಪರ್ಣಾ ಕ್ಲಿನಿಕ್, ನಂ. ೧೯೪
೧ನೇ ಮುಖ್ಯರಸ್ತೆ
ಕೆ. ಎನ್. ಎಕ್ಸ್‌ಟೆನ್ಷನ್, ಯಶವಂತಪುರ
ಬೆಂಗಳೂರು – ೫೬೦ ೦೨೨

## ಅಭಿನಂದನೆಗಳು...

ಜನ – ದನಿ ಸಾಂಸ್ಕೃತಿಕ ಟ್ರಸ್ಟ್, ಮಂಡ್ಯ ಇವರು ನೀಡುವ ೨೦೧೮ನೇ ಸಾಲಿನ 'ದೇವಮ್ಮ ಇಂಡುವಾಳು ಎಚ್. ಹೊನ್ನಯ್ಯ ಸಮಾಜ ಸೇವಾ ಪ್ರಶಸ್ತಿ'ಯು ಸಾಹಿತಿ ಹಾಗೂ ಮಹಿಳಾ ಹೋರಾಟಗಾರ್ತಿ ಡಾ॥ ಮೀನಾಕ್ಷಿ ಬಾಳಿ ಮತ್ತು ಕೃಷಿ ಕಾರ್ಮಿಕ ಹೋರಾಟಗಾರರಾದ ಶ್ರೀ ಎಂ. ಪುಟ್ಟಮಾದು ಇವರುಗಳಿಗೆ ಲಭಿಸಿದೆ. ಇವರಿಬ್ಬರಿಗೂ 'ನವಕರ್ನಾಟಕ' ಮತ್ತು 'ಹೊಸತು' ಬಳಗದ ಅಭಿನಂದನೆಗಳು.

# ಸೂರ್ಯಕೇಂದ್ರೀಯ ಸಿದ್ಧಾಂತದ ವಿಕಸನ

**ಸೌರಮಂಡಲದ ಬಗ್ಗೆ ಕೆಪ್ಲರನ ಮತ್ತೊಂದು ಆಲೋಚನೆ ಬಹುಮುಖ್ಯ. ಹಿಂದಿನ ವಿಜ್ಞಾನಿಗಳೆಲ್ಲ ಗ್ರಹಗಳ ಚಲನೆಯ ಮಾದರಿಯ ಬಗ್ಗೆ ಚಿಂತಿಸಿದ್ದರೇ ವಿನಾ ಅದಕ್ಕೆ ಕಾರಣವೇನು ಎಂದು ವಿಚಾರಿಸಿರಲಿಲ್ಲ. ಗ್ರಹಗಳು ಗೋಳಗಳ ಮೇಲೆ ಹೇಗೆ ಚಲಿಸುತ್ತವೆ ಎಂದು ಕೆಪ್ಲರ್ ಯೋಚಿಸುತ್ತಾ "ಭೌತ ವಿಜ್ಞಾನ ಮತ್ತು ಖಗೋಳ ವಿಜ್ಞಾನಗಳಿಗೆ ಸಂಬಂಧವಿರಲೇಬೇಕು" ಎಂದು ಬರೆದಿದ್ದನು. ಹೀಗೆಯೇ ಗ್ರಹಗಳ ಚಲನೆಗೆ ಸೂರ್ಯನಿಂದ ಏನೋ ಪ್ರಭಾವವಿದೆ ಮತ್ತು ಅದು ಕಾಂತಶಕ್ತಿ ಇರಬೇಕೆಂಬ ನಿರ್ಧಾರಕ್ಕೆ ಬಂದನು.**

**ಡಾ॥ ಪಾಲಹಳ್ಳಿ ವಿಶ್ವನಾಥ್**

**ಕ್ರಿ. ಶ.** ೧೫೦೦ ! ಯೂರೋಪಿನ ನವೋದಯದ ಉತ್ತುಂಗ ಕಾಲ. ಆಗಲೇ ಹಲವಾರು ಕಡೆ ಮುದ್ರಣ ಯಂತ್ರಗಳು ಕಾಣಿಸಿಕೊಂಡು ಮೊದಲ ಬಾರಿಗೆ ಪುಸ್ತಕಗಳು ಎಲ್ಲರಿಗೂ ಸಿಗುವಂತೆ ಮಾಡಿದ್ದವು.

ಅದರಲ್ಲೂ ಹಳೆಯ ಗ್ರೀಕ್ ಮತ್ತು ರೋಮನ್ ವಿದ್ವಾಂಸರ ಚಿಂತನೆಗಳೆಲ್ಲಾ ಆಸಕ್ತರಿಗೆ ಸಿಕ್ಕಿ ನವ ಉತ್ಸಾಹ ಮೂಡಿಬಂದಿತ್ತು. ಯೂರೋಪಿನ ನಾವಿಕರು ಹುಮ್ಮಸ್ಸಿನಿಂದ ಮಾಡುತ್ತಿದ್ದ ದೀರ್ಘ ಸಮುದ್ರ ಪ್ರಯಾಣಗಳಿಂದ ಹೊಸ ಸಂಸ್ಕೃತಿಗಳ ಪರಿಚಯ ಸಿಗುತ್ತಿತ್ತು. ಇಟಲಿಯಲ್ಲಿ ಸುಭದ್ರ ಸರಕಾರಗಳಿದ್ದು ಪ್ರಜೆಗಳಿಗೆ ಹೊಸ ವಿಷಯಗಳನ್ನು ತಿಳಿದುಕೊಳ್ಳಲು ಅವಕಾಶ ಸಿಕ್ಕಿತ್ತು. ಅಲ್ಲಿಯೇ ೪೮ರ ವಯಸ್ಸಿನ ಸಕಲ ಕಲಾ ವಲ್ಲಭ ಲಿಯೊನಾರ್ಡೊ ಡಾ ವಿಂಚಿ ಮತ್ತು ೨೫ರ ಹರೆಯದ ಯುವ ಕಲಾಕಾರ ಮೈಕೆಲ್ ಏಂಜಲೊ ನವಕಲಾ ಜಗತ್ತನ್ನು ನಿರ್ಮಾಣ ಮಾಡುತ್ತಿದ್ದರು. ಅಮೆರಿಕವೆಂಬ ಹೊಸ ಖಂಡವನ್ನು ಕಂಡುಹಿಡಿದ ೪೯ರ ವಯಸ್ಸಿನ ಕ್ರಿಸ್ಟೊಫರ್ ಕೊಲಂಬಸ್ ಸ್ಪೇನಿನಲ್ಲಿ ನೆಲಸಿದ್ದು ನಾವಿಕರಿಗೆ ಸ್ಫೂರ್ತಿಯಾಗಿದ್ದನು ! ಜರ್ಮನಿಯಲ್ಲಿ ೧೭ರ ಹರೆಯದ ಮಾರ್ಟಿನ್ ಲೂಥರ್ ಎಂಬ ಯುವಕನು ಪೋಪರ ಸಿಂಹಾಸನವನ್ನು ಅಲುಗಾಡಿಸಲಿದ್ದನು ! ಇಷ್ಟೆಲ್ಲ ಮಹಾಪ್ರಭೃತಿಗಳು ಸಾಲದೆಂಬಂತೆ ಪೋಲೆಂಡಿನ ಕ್ರಾಕೊ ನಗರದಲ್ಲಿ ಒಬ್ಬ ಮೆದುಮಾತಿನ ಯುವಕ ವೈದ್ಯನೊಬ್ಬ ಹೊಸ ವೈಜ್ಞಾನಿಕ ಸಿದ್ಧಾಂತವನ್ನು ಮಂಡಿಸಿ ಮಾನವನ ಒಳಗಿನ ಮತ್ತು ಹೊರಗಿನ ಜಗತ್ತನ್ನು ವಿಸ್ತರಿಸಲು ಸಿದ್ಧನಾಗುತ್ತಿದ್ದ. ಅಂದಿನ ಅನೇಕ ಜನರಂತೆ ಈ ಯುವಕನಿಗೂ ಆಸಕ್ತಿಗಳು ಹಲವಾರು : ಧರ್ಮಶಾಸ್ತ್ರ, ಅರ್ಥಶಾಸ್ತ್ರ, ವೈದ್ಯವಿಜ್ಞಾನ, ರಾಜಕೀಯ, ಚಿತ್ರ ಕಲೆ.. ಇವೆಲ್ಲ ಕಲಿಯಲು ಯೂರೋಪಿನಲ್ಲಿ ಹಲವಾರು ವಿಶ್ವವಿದ್ಯಾಲಯಗಳಲ್ಲಿ (ಬೊಲೊನ್ಯ, ಪಡುವಾ ಇತ್ಯಾದಿ) ಅಧ್ಯಯನ ಮಾಡಿ ಪರಿಣತಿ ಗಳಿಸಿದ್ದ. ಅರ್ಥಶಾಸ್ತ್ರದಲ್ಲಿ ಒಂದು ಮುಖ್ಯ ನಿಯಮವನ್ನೂ ಪ್ರತಿಪಾದಿಸಿದ್ದ. ತನ್ನ ಚಿತ್ರವನ್ನು ತಾನೇ ರಚಿಸಿದ್ದ ಕೂಡ. ಆದರೆ ಇವೆಲ್ಲವಿದ್ದರೂ ಅವನ ಮುಖ್ಯ ಆಸಕ್ತಿ ಖಗೋಳ ವಿಜ್ಞಾನ. ಅವನೆ ೨೭ರ ಹರೆಯದ ಕ್ರಾಕೊ ನಗರದಲ್ಲಿ ನೆಲಸಿದ್ದ ನಿಕೊಲಾಸ್ ಕೋಪರ್ನಿಕಸ್.

**(೧) ಕೋಪರ್ನಿಕಸ್**

ವಿವಿಧ ಸಂಸ್ಕೃತಿಗಳ ಶತಮಾನಗಳ ನಿರಂತರ ವೀಕ್ಷಣೆಯಿಂದ ಖಗೋಳದ ಬಗ್ಗೆ ತಿಳಿದುಬಂದಿದ್ದ ವಿಷಯಗಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಪಟ್ಟಿದ್ದು ಗ್ರೀಕರ ಹೆಚ್ಚಳಿಕೆ. ಉಷೆಯಲ್ಲಿ ಆಕಾಶದಲ್ಲಿ ಅವತರಿಸುವ ಪ್ರಕಾಶಮಾನವಾದ ಮತ್ತು ಸಂಜೆಯ ಅಷ್ಟೇ ಪ್ರಕಾಶಮಾನವಾದ ಆಕಾಶಕಾಯಗಳೆರಡೂ ಒಂದೇ ಎಂದು ಗುರುತಿಸಿ ಅದಕ್ಕೆ ಶುಕ್ರನೆಂಬ ಹೆಸರು ಕೊಟ್ಟದ್ದಲ್ಲದೆ ಭೂಮಿ ಒಂದು ಗೋಳವೆಂದು ಪ್ರತಿಪಾದಿಸಿದವನೂ ಪ್ರಖ್ಯಾತ ಗಣಿತಜ್ಞ ಪೈಥಾಗೊರಾಸ್ ( ಕ್ರಿ. ಪೂ. ೫೭೦–೪೯೫) ಎಂಬ ಪ್ರತೀತಿ. ಎಲ್ಲ ದಿಕ್ಕುಗಳಿಂದಲೂ ಕೇಂದ್ರಕ್ಕೆ ಒಂದೇ ದೂರವಿರುವ ಸುಂದರ ಗೋಳವು ಭೂಮಿಯೆಂದು ಬಣ್ಣಿಸಿದವನು ಮಹಾತತ್ವಶಾಸ್ತ್ರಜ್ಞ ಪ್ಲೇಟೊ ( ಕ್ರಿ. ಪೂ. ೪೨೭–೩೪೭). ಚಂದ್ರಗ್ರಹಣದ ಸಮಯದಲ್ಲಿ ಭೂಮಿಯ ನೆರಳು ವೃತ್ತಾಕಾರ ವಿರುವುದನ್ನು ಭೂಮಿಯ ಗೋಳದ ಆಕಾರಕ್ಕೆ ಸಾಕ್ಷಿ ಎಂದು ಪ್ರತಿಪಾದಿಸಿದವನು ಪ್ಲೇಟೊವಿನ ಶಿಷ್ಯ ಮತ್ತು ಸಕಲ ವಿದ್ಯಾ ಪಾರಂಗತ ಅರಿಸ್ಟಾಟಲ್ ( ಕ್ರಿ. ಪೂ. ೩೮೪–೩೨೨). ಗ್ರಹಗಳು ಬಹಳ ಪ್ರಕಾಶಮಾನಗಳಾಗಿದ್ದವಲ್ಲದೆ ಅವುಗಳ ಚಲನೆಯು ನಕ್ಷತ್ರಗಳಂತೆ ಒಂದೇ ಸಮನೆ ಇರದೆ ಅಡ್ಡಾದಿಡ್ಡಿ ಎಂದು ಕಂಡುಬಂದದ್ದರಿಂದ ಗ್ರೀಕರು ಅವುಗಳನ್ನು 'ಪ್ಲಾನೆಟ್ಸ್' (ಅಲೆಮಾರಿಗಳು) ಎಂದು ಕರೆದರು. ಹಾಗೂ ಈ




ಇಂದಿನ ಸೂರ್ಯಕೇಂದ್ರೀಯ ಮಾದರಿ; ಕಕ್ಷೆಗಳು ಕೆಪ್ಲರ್ ಪ್ರತಿಪಾದಿಸಿದಂತೆ ದೀರ್ಘ ವೃತ್ತಗಳು.

ಗ್ರಹಗಳ ಚಲನೆಯನ್ನು ಅರ್ಥಮಾಡಿಕೊಳ್ಳಲು ಅಲ್ಲಿಯ ವಿದ್ವಾಂಸರು ಒಂದು ಮಾದರಿಯನ್ನು ನಿರ್ಮಿಸಿದರು. ಪ್ರಕೃತಿಯ ವಿದ್ಯಮಾನಕ್ಕೆ ಒಂದು ಮಾದರಿಯನ್ನು ಕೊಡುವ ವಿಜ್ಞಾನದ ಇಂದೂ ಪ್ರಚಲಿತ ಮುಖ್ಯ ವಿಧಾನ ಹೀಗೆ ಗ್ರೀಕರಿಂದಲೆ ಪ್ರಾರಂಭವಾಗಿರಬಹುದು. ಆ ಮಾದರಿಯಲ್ಲಿ ಭೂಮಿ ಕೇಂದ್ರದಲ್ಲಿದ್ದು ವಿವಿಧ ದೂರಗಳಲ್ಲಿ ಅನೇಕ ಪಾರದರ್ಶಕ ಗೋಳಗಳಿದ್ದು, ಇತರ ಎಲ್ಲ ಆಕಾಶಕಾಯಗಳು ಆ ಗೋಳಗಳ ಮೇಲೆ ಕೇಂದ್ರವನ್ನು ಸುತ್ತುತ್ತವೆ ಎಂದು ಅವರು ಮಂಡಿಸಿದರು. ಅರಿಸ್ಟಾಟಲಿನ ಸಮಯದಲ್ಲಿ ಈ ಮಾದರಿಯಲ್ಲಿ ೨೭ರಿಂದ ಗೋಳಗಳ ಸಂಖ್ಯೆ ೫೫ ಇರಬೇಕೆಂಬ ಪ್ರಸ್ತಾವನೆ ಇದ್ದಿತು. ಶತಮಾನಗಳು ಕಳೆಯುತ್ತ ಮೂಲ ಮಾದರಿ ಅದೇ ಇದ್ದು ಮುಖ್ಯವಾಗಿ ಗೋಳಗಳ ಸಂಖ್ಯೆ ಬದಲಾಗುತ್ತ ಹೋಯಿತು. ಅದಲ್ಲದೆ ಅಲೆಗ್ಸಾಂಡ್ರಿಯದ ಕ್ಲಾಡಿಯಸ್ ಟಾಲೆಮಿ ( ಕ್ರಿ. ಶ. ೮೫–೧೬೫) ಗ್ರಹಗಳ ಚಲನೆಗೆ ಉಪವೃತ್ತಗಳನ್ನೂ ಸೇರಿಸಿದ್ದನು. ಟಾಲೆಮಿಯ 'ಆಲ್ಮಗೆಸ್ಟ್' ಪುಸ್ತಕದಲ್ಲಿ ಈ ಎಲ್ಲ ವಿಷಯಗಳ ವಿವರಗಳಿದ್ದು, ಬಹಳ ಖ್ಯಾತಿ ಗಳಿಸಿತ್ತು. ಈ ಭೂಮಿಯ ಪರಿಭ್ರಮಣ ಮಾದರಿ ಅರಿಸ್ಟಾಟಲ್ / ಟಾಲೆಮಿ ಭೂ ಕೇಂದ್ರೀಯವಾದವೆಂದು ಪ್ರಸಿದ್ಧಿಯಾಗಿ ಕ್ರಿ. ಶ. ೧೬ನೆಯ ಶತಮಾನದ ತನಕ ಉಪಯೋಗದಲ್ಲಿದ್ದಿತು. ಭೂಕೇಂದ್ರ ಮಾದರಿಯನ್ನು ನಿರಾಕರಿಸಿ ಸೂರ್ಯಕೇಂದ್ರೀಯ ಮಾದರಿಯನ್ನು




ಗ್ರೀಕರು ಪ್ರತಿಪಾದಿಸಿದ್ದ ವಿಶ್ವದ ಮಾದರಿ. ಭೂಮಿ ಮಧ್ಯದಲ್ಲಿದ್ದು ಬೇರೆ ಎಲ್ಲ ಆಕಾಶಕಾಯಗಳು ವಿವಿಧ ದೂರಗಳಲ್ಲಿ ಪಾರದರ್ಶಕ ಗೋಳಗಳ ಮೇಲೆ ಚಲಿಸುತ್ತವೆಂಬ ನಂಬಿಕೆ.

ಪ್ರತಿಪಾದಿಸಿದವರೂ ಕೆಲವರು ಇದ್ದು ಅವರಲ್ಲಿ ಕ್ರಿ. ಪೂ. ३ನೆಯ ಶತಮಾನದ ಸಮೋಸ್ ನಿವಾಸಿ ಅರಿಸ್ಟಾರ್ಕಸ್ ಪ್ರಮುಖ. ಅವನದ್ದೇ ಬರಹಗಳು ಸಿಕ್ಕಿಲ್ಲದಿದ್ದರೂ ಅವನ ಸಿದ್ಧಾಂತಗಳು ವಿದ್ವಾಂಸರಿಗೆ ತಿಳಿದಿದ್ದವು.

ಖಗೋಳದ ವೀಕ್ಷಣೆಗಳಲ್ಲಿ ಸಹಜವಾಗಿ ಮೊದಲು ಬರೇ ಕಣ್ಣುಗಳ ಬಳಕೆಯಿದ್ದು ನಿಧಾನವಾಗಿ ಆಕಾಶಕಾಯಗಳ ಸ್ಥಿತಿಗತಿಗಳನ್ನು ಕಂಡುಹಿಡಿಯಲು ಅಸ್ಟ್ರೊಲೇಬ್ (ತಾರೋನ್ನತಿ ಮಾಪಕ) ತರಹದ ಉಪಕರಣಗಳ ಬಳಕೆಯೂ ಪ್ರಾರಂಭವಾಯಿತು. ಇವುಗಳನ್ನು ಉಪಯೋಗಿಸಿ ಹಿಪಾರ್ಕ್ಸ್ ( ಕ್ರಿ. ಪೂ. ೧೯೫-೧೨೦) ಮತ್ತು ಕ್ಲಾಡಿಯಸ್ ಟಾಲೆಮಿ ತಮ್ಮ ಆಕಾಶಕಾಯಗಳ (~೮೦೦-೧೦೦೦) ಕ್ರಮಸೂಚಿಗಳನ್ನು ತಯಾರಿಸಿದ್ದರು. ಈ ಆಕಾಶಕಾಯಗಳ ವೀಕ್ಷಣೆ ಆ ಕಾಲಕ್ಕೆ ನಿಖರವೆ ಆಗಿದ್ದರೂ ಅವುಗಳ ನಿಜ ಸ್ಥಳದಿಂದ ಒಂದು ಡಿಗ್ರಿಯ (ಅಂದರೆ ಅಕ್ಕಪಕ್ಕ) ತಪ್ಪು ಇರುವ ಸಾಧ್ಯತೆ ಇದ್ದೇ ಇದ್ದಿತು. ಗ್ರೀಕರ ನಂತರ ಖಗೋಳ ವಿಜ್ಞಾನ (ಮತ್ತು ಇತರ ವೈಜ್ಞಾನಿಕ ಅಧ್ಯಯನಗಳಲ್ಲಿ)ದಲ್ಲಿ ಆಸಕ್ತಿ ಹೊಂದಿದ್ದು ಪರಿಣತಿಯನ್ನೂ ಪಡೆದವರು ಅರಬ್ ವಿದ್ವಾಂಸರು. ಅವರು ಕ್ವಾಡ್ರಂಟ್ ಎಂಬ ಉಪಕರಣವನ್ನು ಸುಧಾರಿಸಿದ್ದೇ ಅಲ್ಲದೆ ಸೆಕ್ಸ್ಟೆಂಟ್ (ಷಷ್ಠಕ) ಎನ್ನುವ ಉಪಕರಣವನ್ನೂ ಕಂಡುಹಿಡಿದರು. ಇವುಗಳನ್ನು ಬಳಸಿಕೊಂಡು ಮಧ್ಯ ಏಷಿಯದ ಸಮರ್ ಕಂದ್ ನಗರದ ಉಲಗ್ ಬೇಗ್ ~೧೦೦೦ ಆಕಾಶಕಾಯಗಳ ಬಗ್ಗೆ ಹಿಂದಿಗಿಂತ ನಿಖರವಾದ ಮಾಹಿತಿಯನ್ನು ಕೊಟ್ಟಿದ್ದನು. ಸ್ಪೇನ್ ದೇಶದಲ್ಲಿ ಕ್ರಿ. ಶ. ೧೨೫೦ರಲ್ಲಿ ಎಲ್ಲ ವೀಕ್ಷಣೆಗಳನ್ನು ಬಳಸಿಕೊಂಡು ಅಲ್ಲಿಯ ರಾಜ ಆಲ್ಫೊನ್ಸ್ ಹೆಸರಿನಲ್ಲಿ ಆಕಾಶಕಾಯಗಳ ಒಂದು ಕ್ರಮಸೂಚಿಯನ್ನು ರಚಿಸಲಾಗಿದ್ದು ಕೋಪರ್ನಿಕಸ್ ಮತ್ತು ೧೬ನೆಯ ಶತಮಾನದ ಖಗೋಳಜ್ಞರು ಇದನ್ನು ಉಪಯೋಗಿಸುತ್ತಿದ್ದರು.

ಖಗೋಳ ವಿಜ್ಞಾನವನ್ನು ಗಹನವಾಗಿ ಓದಿಕೊಂಡು ತಾನೇ ವೀಕ್ಷಣೆಗಳನ್ನೂ ನಡೆಸುತ್ತಿದ್ದ ಕೋಪರ್ನಿಕಸ್‌ನಿಗೆ ಮೂರು ಮುಖ್ಯ ಸಮಸ್ಯೆಗಳು ಕಂಡುಬಂದವು. ಅವುಗಳಲ್ಲಿ ಎರಡು ಗುಣಾತ್ಮಕ : (೧) ಹಿಂದಿನವರಿಗೂ ತಿಳಿದಿದ್ದ ಗ್ರಹಗಳ ವಕ್ರಗತಿ ಅಥವಾ ಹಿಮ್ಮುಖ ಚಲನೆ: ಒಂದು ದಿಕ್ಕಿನಲ್ಲಿ ಹೋಗುತ್ತಿದ್ದ ಗ್ರಹ ಇದ್ದಕ್ಕಿದ್ದ ಹಾಗೆ ದಿಕ್ಕು ಬದಲಿಸಿ ಹಿಂದೆ ಹೋಗುವಂತೆ ಕಾಣಿಸುವುದು ಮತ್ತು (೨) ಸಮಯಾನುಸಾರ ಬದಲಾಗುತ್ತಿದ್ದ ಗ್ರಹಗಳ ಪ್ರಕಾಶ. ಮೂರನೆಯದು ವೀಕ್ಷಣೆಯಿಂದ ಮತ್ತು ಟಾಲೆಮಿಯ ಮಾದರಿಯಿಂದ ಲೆಕ್ಕ ಮಾಡಬಹುದಾದ ಗ್ರಹಗಳ ಸ್ಥಳಗಳಲ್ಲಿನ ವ್ಯತ್ಯಾಸ ! ಈ ಸಮಸ್ಯೆಗಳ ಬಗ್ಗೆ ಹಲವಾರು ವರ್ಷಗಳು ಆಲೋಚಿಸಿ ಕೋಪರ್ನಿಕಸ್ ಹೊಸ ಸಿದ್ಧಾಂತವನ್ನು ಮಂಡಿಸಿದನು. ಆದರೆ ತನ್ನ ಪ್ರತಿಪಾದನೆಗಳಿಂದ ಭೂಕೇಂದ್ರೀಯವಾದವನ್ನು ಒಂದು ಮೂಲತತ್ವವನ್ನಾಗಿ ಸ್ವೀಕರಿಸಿದ್ದ ಚರ್ಚನ್ನು ಎದುರುಹಾಕಿಕೊಳ್ಳಲು ಇಷ್ಟಪಡದೆ ಕೋಪರ್ನಿಕಸ್ ೧೫೦೭(?)ರಲ್ಲಿ ತನ್ನ ಹತ್ತಿರದವರಿಗಾಗಿ ಒಂದು ಪುಟ್ಟ ಪುಸ್ತಿಕೆಯನ್ನು ಹೊರತಂದನು. ಅದರಲ್ಲಿನ ಮುಖ್ಯ ಅಂಶಗಳು – (೧) ಭೂಮಿ ವಿಶ್ವದ ಕೇಂದ್ರವಲ್ಲ, ಸೂರ್ಯ ವಿಶ್ವದ ಕೇಂದ್ರ. (೨) ಭೂಮಿಯೂ ಒಂದು ಗ್ರಹ ಮತ್ತು ಎಲ್ಲ ಗ್ರಹಗಳು ಸೂರ್ಯನನ್ನು ವೃತ್ತಾಕಾರದ ಕಕ್ಷೆಗಳಲ್ಲಿ ಸುತ್ತುತ್ತವೆ (ಪರಿಭ್ರಮಣೆ) (೩) ಸೂರ್ಯನ ತೋರಿಕೆಯ ಚಲನೆ ಭೂಮಿಯ ನಿಜ ಚಲನೆ(ಭ್ರಮಣೆ)ಯಿಂದ ಹುಟ್ಟುತ್ತದೆ. ಶತಮಾನಗಳಿಂದ ಸಮಸ್ಯೆಯಾಗಿದ್ದ ಹಿಮ್ಮುಖ ಚಲನೆಯನ್ನು ಮತ್ತು ಗ್ರಹಗಳ ಪ್ರಕಾಶದ ಬದಲಾವಣೆಗಳನ್ನು ಇವನ ಪ್ರತಿಪಾದನೆ ಸುಲಭವಾಗಿ ವಿವರಿಸಿತು. (ಗ್ರಹಗಳು ಬೇರೆಬೇರೆ ವೇಗದಲ್ಲಿ ತಮ್ಮ ಕಕ್ಷೆಗಳಲ್ಲಿ ಚಲಿಸುತ್ತಿರುವುದರಿಂದ ಹಿಮ್ಮುಖ ಚಲನೆಯಂತೆ ಕಾಣಬಹುದು ಮತ್ತು ಗ್ರಹದ ಪ್ರಕಾಶವು ಭೂಮಿ, ಸೂರ್ಯ ಮತ್ತು ಗ್ರಹ ಎಲ್ಲಿವೆ ಎನ್ನುವುದನ್ನು ಆಧರಿಸುತ್ತದೆ.) ಹಾಗೂ ಕೋಪರ್ನಿಕಸ್ ತನ್ನ ಹಿತೈಷಿಗಳ ಪ್ರೇರಣೆಯಿಂದ ಒಂದು ಪುಸ್ತಕ ("ಗ್ರಹಗಳ ಪರಿಭ್ರಮಣ')ವನ್ನು ಹೊರತಂದನು. ಅವನು ನಿಧನನಾದ ದಿನವೇ ಅದರ ಮೊದಲ ಪ್ರತಿ ಹೊರಬಂದಿತು ಎಂದು ಪ್ರತೀತಿ. ಆದರೆ ಕೋಪರ್ನಿಕಸ್ ಮಾದರಿಯೂ ವೀಕ್ಷಣೆಗಳನ್ನು ಸರಿಯಾಗಿ ವಿವರಿಸಲಿಲ್ಲ; ಗ್ರಹಗಳ ನಿಜ ಸ್ಥಳಕ್ಕೂ ಅವನ ಮಾದರಿಯಿಂದ ಲೆಕ್ಕ ಮಾಡಬಹುದಾದ ಸ್ಥಳಕ್ಕೂ ಇನ್ನೂ ಸರಿಬರುತ್ತಿರಲಿಲ್ಲ.


ಪೋಲೆಂಡಿನ ಕ್ರಾಕೊ ನಗರದಲ್ಲಿ ಕೋಪರ್ನಿಕಸ್‌ನ ಪುತ್ಥಳಿಯೊಂದಿಗೆ ಲೇಖಕರು.

ಭಾರತದ ಆರ್ಯಭಟ ಭೂಮಿಯ ತನ್ನ ಅಕ್ಷದ ಸುತ್ತ ಭ್ರಮಣವನ್ನು ಕ್ರಿ. ಶ. ೬ನೆಯ ಶತಮಾನದಲ್ಲಿಯೇ ಪ್ರತಿಪಾದಿಸಿದ್ದನು. ಆನಂತರ ಬಂದವರ ವಿರೋಧದಿಂದಾಗಿ ಅವನ ಸಿದ್ಧಾಂತಕ್ಕೆ ಮನ್ನಣೆ ಸಿಗಲೇ ಇಲ್ಲ ಮತ್ತು ಅದು ಹೊರ ದೇಶಗಳ ವಿದ್ವಾಂಸರಿಗೆ ತಿಳಿಯಲೇ ಇಲ್ಲ! ಕೋಪರ್ನಿಕಸ್ ಭೂಮಿಯನ್ನು ವಿಶ್ವದ ಕೇಂದ್ರದಿಂದ ತೆಗೆದುಹಾಕಿದ್ದು ವಿಜ್ಞಾನದಲ್ಲಿ ಮಾತ್ರವಲ್ಲದೆ ನಿಧಾನವಾಗಿ ಮಾನವನ ವಿಚಾರ ಕ್ರಮದಲ್ಲಿಯೇ ಕ್ರಾಂತಿಯನ್ನು ತಂದಿತು. ತಿಳುವಳಿಕೆ ಬಂದಾಗಿನಿಂದ ಮನುಷ್ಯನಿಗೆ ಭೂಮಿಯೆ ಸರ್ವಸ್ವವಾಗಿದ್ದು ಅವನು ಅದನ್ನು ತನ್ನ ಮಾನಸಿಕ ಜಗತ್ತಿನ ಮತ್ತು ವಿಶ್ವದ ಕೇಂದ್ರವನ್ನಾಗಿ ಮಾಡಿಕೊಂಡಿದ್ದನು. ಕೋಪರ್ನಿಕಸ್ಸಿನಿಂದಾಗಿ ಭೂಮಿ ಆ ಸಿಂಹಾಸನದಿಂದ ಇಳಿಯಬೇಕಾಯಿತಲ್ಲದೆ ವಿಶ್ವದಲ್ಲಿ ಮಾನವನ ಪಾತ್ರಕ್ಕೂ ಧಕ್ಕೆ ಬಂದಿತು.

**(೨) ಟೈಕೊ ಬ್ರಾಹೆ (೧೫೪೬-೧೬೦೧)**

ಖಗೋಳ ವಿಜ್ಞಾನದಲ್ಲಿ ಮುಂದಿನ ಹೆಜ್ಜೆಯನ್ನು ಇಟ್ಟವನು ಕೋಪರ್ನಿಕಸ್‌ನ ನಿಧನದ ಮೂರು ವರ್ಷಗಳ ನಂತರವೆ ಹುಟ್ಟಿದ ಡೆನ್ಮಾರ್ಕ್‌ನ ರಾಜಮನೆತನದ ಟೈಕೊ ಬ್ರಾಹೆ. ಯುವಕನಾಗಿದ್ದಾಗಲೆ ಒಂದು ದ್ವಂದ್ವ ಯುದ್ಧದಲ್ಲಿ ತನ್ನ ಮೂಗನ್ನು ಕಳೆದುಕೊಂಡು ಲೋಹದ ಮೂಗನಿಟ್ಟುಕೊಂಡು ಜೀವಿಸುತ್ತಿದ್ದ ಟೈಕೊ ಬ್ರಾಹೆ ಸ್ವಾರಸ್ಯಕರ ವ್ಯಕ್ತಿ. ಡೆನ್ಮಾರ್ಕಿನ ರಾಜ ಇವನಿಗೆಂದು ಯುರೆನ್‌ಬರ್ಗ್ ಎಂಬ ದ್ವೀಪದಲ್ಲಿ ಒಂದು ಆಧುನಿಕ ವೀಕ್ಷಣಾಲಯವನ್ನೂ ನಿರ್ಮಿಸಿಕೊಟ್ಟಿದ್ದ. ಅಲ್ಲಿ ಆ ಕಾಲದ ಅತ್ಯಾಧುನಿಕ ಉಪಕರಣಗಳಿದ್ದವು. ಅವುಗಳನ್ನು ಬಳಸಿಕೊಂಡು ಟೈಕೊ ಅಭೂತಪೂರ್ವ ವೀಕ್ಷಕನೆಂದು ಹೆಸರು ಪಡೆದಿದ್ದ. ಅವನ ನಕ್ಷತ್ರ ಸೂಚಿ ಅಂದಿನ ಕಾಲದ ಅತಿ ನಿಖರವೆಂದು ಖ್ಯಾತಿ ಗಳಿಸಿತ್ತು. ಇಂದಿನ ಖಗೋಳಜ್ಞರ ಪ್ರಕಾರ ಅವನ ಅಳತೆಗಳ ತಪ್ಪಿನ ಸಾಧ್ಯತೆ ಬಹಳ ಕಡಿಮೆ ಇದ್ದಿತು (ಅದು ಸುಮಾರು ೧ ಆರ್ಕ್ ಮಿನಿಟ್ (೧/ ೬೦ ಡಿಗ್ರಿ) ಎಂದು ಈಗ ಕಂಡುಹಿಡಿದಿದ್ದಾರೆ. ಅಂದರೆ ಸಮಯದ ಅಳತೆಯಲ್ಲಿ ~೪ ಸೆಕೆಂಡುಗಳು ಮಾತ್ರ). ೧೫೯೭ರಲ್ಲಿ ಡೆನ್ಮಾರ್ಕಿನ ರಾಜನೊಂದಿಗೆ ಮನಸ್ತಾಪ ಬಂದು ಪ್ರಾಗ್ ನಗರಕ್ಕೆ ತೆರಳಿ ಅಲ್ಲಿ ವೀಕ್ಷಣೆಗಳನ್ನು ನಡೆಸಿ ಹೊಸ ಕ್ರಮಸೂಚಿಯನ್ನು ರಚಿಸಲು ಪ್ರಾರಂಭಿಸಿದ. ಆದರೆ ನಾಲ್ಕೇ ವರ್ಷಗಳ ನಂತರ, ೧೬೦೧ರಲ್ಲಿ, ಮೂತ್ರಕೋಶದ ಸಮಸ್ಯೆಯಿಂದಾಗಿ ಟೈಕೊ ಬ್ರಾಹೆ ಪ್ರಾಗ್ ನಗರದಲ್ಲಿ ನಿಧನನಾದನು. ಸಾಯುವ ಸಮಯದಲ್ಲಿ 'ನನ್ನ ಈ ಕೆಲಸ ವ್ಯರ್ಥವಾಗದಿರಲಿ' ಎಂದು ಕೂಗುತ್ತಿದ್ದನಂತೆ. ಅದು ಹಾಗಾಗದಂತೆ ನೋಡಿಕೊಂಡವನು ಅಲ್ಲಿ ಅವನ ಜೊತೆ ಕೆಲಸಮಾಡಲು ಬಂದಿದ್ದ ಒಬ್ಬ ಯುವ ಸಿದ್ಧಾಂತಿ. ಅವನೆ ಯೊಹಾನಸ್ ಕೆಪ್ಲರ್ (ಮುಂದೆ ನೋಡಿ).

ಕೋಪರ್ನಿಕಸ್ ಸಿದ್ಧಾಂತವನ್ನು ಟೈಕೊ ಒಪ್ಪಿಕೊಳ್ಳದೆ ತನ್ನದೇ ಒಂದು ಮಾದರಿಯನ್ನು ಮುಂದಿಟ್ಟನು. ಅದರಲ್ಲಿ ಭೂಮಿಯನ್ನು ಬಿಟ್ಟು ಇತರ ಎಲ್ಲ ಗ್ರಹಗಳೂ ಸೂರ್ಯನನ್ನು ಸುತ್ತುತ್ತವೆ, ಆದರೆ ಸೂರ್ಯ ಭೂಮಿಯನ್ನು ಸುತ್ತುತ್ತಾನೆ. (ಇಂತಹ ಮಾದರಿಯೇ ಭಾರತದಲ್ಲೂ ಪ್ರತಿಪಾದನೆಯಾಗಿದ್ದಿತು.

ಆರ್ಯಭಟನ ಸಿದ್ಧಾಂತಗಳನ್ನು ಒಪ್ಪಿಕೊಂಡು ಅವುಗಳ ಪ್ರಕಾರ ದಕ್ಷಿಣ ಭಾರತದಲ್ಲಿ ಒಂದು ವಿಚಾರ ಧಾರೆ ಪ್ರಾರಂಭವಾಯಿತು. ಅದು ಕೇರಳದ ಗಣಿತಜ್ಞ ಮತ್ತು ಖಗೋಳಜ್ಞರ 'ಶಾಲೆ'. ಅವರಲ್ಲಿ ನೀಲಕಂಠ ಸೋಮಯಾಜಿ (೧೪೪೪–೧೫೪೪) ಎನ್ನುವ ವಿದ್ವಾಂಸನು ಇದೇ ಮಾದರಿಯನ್ನು ಪ್ರತಿಪಾದಿಸಿದ್ದನು. ಆರ್ಯಭಟನ ಸಿದ್ಧಾಂತಗಳಂತೆಯೆ ಇದೂ ಭಾರತದ ಹೊರಹೋಗಲಿಲ್ಲ). ಟೈಕೊ ಬ್ರಾಹೆಯ ಮತ್ತೊಂದು ಮುಖ್ಯ ಕೊಡುಗೆಯನ್ನೂ ಇಲ್ಲಿ ನೋಡೋಣ. ಖಗೋಳ ಇರುವ ಹಾಗೇ ಸಂಪೂರ್ಣವಾಗಿದೆಯೆಂಬುದು ಗ್ರೀಕರ ಮತ್ತೊಂದು ಮುಖ್ಯ ನಂಬಿಕೆಯಾಗಿದ್ದಿತು. ಆದ್ದರಿಂದ ಆಗಾಗ್ಗೆ ಆಕಾಶದಲ್ಲಿ ಅವತರಿಸುತ್ತಿದ್ದ ಧೂಮಕೇತುಗಳನ್ನು ಮತ್ತು ಸೂಪರ್ನೋವಗಳನ್ನು (ಚೀನಾದ ಖಗೋಳಜ್ಞರು ಇವನ್ನು ಅತಿಥಿ ನಕ್ಷತ್ರಗಳೆಂದು ಕರೆದು ದಾಖಲೆ ಮಾಡುತ್ತಿದ್ದರು) ಭೂಮಿಯ ವಾತಾವರಣದಲ್ಲೇ ನಡೆಯುವ ವಿದ್ಯಮಾನಗಳು ಎಂದು ಗ್ರೀಕರು ತಿಳಿದಿದ್ದರು. ೧೫೭೨ರಲ್ಲಿ ಕಾಣಿಸಿಕೊಂಡ ಒಂದು ಪ್ರಕಾಶಮಾನವಾದ ಆಕಾಶ ಕಾಯವನ್ನು ದೂರದ ನಕ್ಷತ್ರವೆ ಎಂದು ಗುರುತಿಸಿದ ಖ್ಯಾತಿ ಟೈಕೊ ಬ್ರಾಹೆಯದು. ಇದರಿಂದ ಮತ್ತು ಮುಂದೆ ೧೬೦೪ರಲ್ಲಿ ಕಾಣಿಸಿಕೊಂಡ ಕೆಪ್ಲರ್ ಹೆಸರಿನ ಸೂಪರ್ನೋವಾಯಿಂದ ಕೂಡ ಗ್ರೀಕರ ಖಗೋಳ ಸಿದ್ಧಾಂತಗಳಲ್ಲಿ ನಂಬಿಕೆ ಕಡಿಮೆಯಾಗತೊಡಗಿತು.




**ಪ್ರಾಗ್ ನಗರದಲ್ಲಿ ಟೈಕೊ ಬ್ರಾಹೆ ಮತ್ತು ಯೊಹಾನಸ್ ಕೆಪ್ಲರರ ಪುತ್ಥಳಿಗಳ ಜೊತೆ ಲೇಖಕರು.**

**೩) ಯೊಹಾನಸ್ ಕೆಪ್ಲರ್ (೧೫೭೧–೧೬೩೦)**

ಜರ್ಮನಿಯ ಸ್ಟುಟ್ಗಾರ್ಟ್ ಬಳಿ ಹುಟ್ಟಿದ ಕೆಪ್ಲರ್ ಜೀವನದಲ್ಲಿ ಅನೇಕ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದ ವ್ಯಕ್ತಿ. ಅದಕ್ಕೆ ಅವನ ಆರ್ಥಿಕ ಪರಿಸ್ಥಿತಿ ಮತ್ತು ಧಾರ್ಮಿಕ ನಂಬಿಕೆಗಳು ಕಾರಣವಾಗಿದ್ದವು. ಮಾರ್ಟಿನ್ ಲೂಥರನ ಪ್ರಾಟೆಸ್ಟಂಟ್ ಧರ್ಮ ಉತ್ತರ ಯೂರೋಪಿನಲ್ಲಿ ಬೇರೂರುತ್ತಿದ್ದರೂ ಪ್ರಾಟೆಸ್ಟೆಂಟರ ಮತ್ತು ಕ್ಯಾಥೊಲಿಕರ ಮಧ್ಯೆ ನಡೆಯುತ್ತಿದ್ದ ಯುದ್ಧಗಳಿಂದಾಗಿ ಕೆಪ್ಲರ್ ಹಲವಾರು ಬಾರಿ ವಾಸಸ್ಥಳವನ್ನು ಬದಲಾಯಿಸಿಕೊಳ್ಳಬೇಕಾಯಿತು. ಅದಲ್ಲದೆ ಹಣದ ಕೊರತೆ ಯಾವಾಗಲೂ ಇದ್ದಿತು. ಹಾಗೂ ಕೆಪ್ಲರನಿಗೆ ಮೊದಲಿಂದಲೂ ಖಗೋಳ ವಿಜ್ಞಾನದಲ್ಲಿ ಆಸಕ್ತಿ ಇದ್ದು ಹಲವಾರು ಹೊಸ ಅಭಿಪ್ರಾಯಗಳನ್ನು ಪ್ರತಿಪಾದಿಸಿದನು. ಇಲ್ಲಿ ಸೂರ್ಯ ಕೇಂದ್ರೀಯ ಸಿದ್ಧಾಂತದ ಬಗ್ಗೆ ಮಾತ್ರ ಅವನ ಕೊಡುಗೆಗಳನ್ನು ನೋಡೋಣ.

ಕೆಪ್ಲರ್ ಮತ್ತು ಟೈಕೊ ಬ್ರಾಹೆ ಖಗೋಳ ವಿಜ್ಞಾನದ ಹಲವಾರು ಸಮಸ್ಯೆಗಳ ಬಗ್ಗೆ ಪತ್ರವ್ಯವಹಾರ ನಡೆಸಿದ್ದರು. ಇದರಿಂದಾಗಿ ಕೆಪ್ಲರನ ತೀಕ್ಷ್ಣಬುದ್ಧಿಶಕ್ತಿಯನ್ನು ಟೈಕೊ ಮೆಚ್ಚಿಕೊಂಡಿದ್ದನು. ಹಾಗೆಯೇ ಟೈಕೊಗಿಂತ ಉತ್ತಮ ವೀಕ್ಷಣಕಾರರು ಇಲ್ಲ ಎಂಬ ಅರಿವು ಕೆಪ್ಲರನಿಗೆ ಇದ್ದಿತು. ೧೬೦೦ರಲ್ಲಿ ಅವರಿಬ್ಬರು ಪ್ರಾಗ್ ನಗರದಲ್ಲಿ ಸಂಧಿಸಿ ಒಟ್ಟಿಗೆ ಕೆಲಸ ಮಾಡಲು ಪ್ರಾರಂಭಿಸಿದರು. ಟೈಕೊ ಕೆಪ್ಲರನಿಗೆ ಮಂಗಳ ಗ್ರಹದ ಬಗ್ಗೆ ಸ್ವಲ್ಪ ಮಾತ್ರ ಅಂಕಿಅಂಶಗಳನ್ನು ಕೊಟ್ಟು ಕೆಲಸಮಾಡಲು ಹೇಳಿದ್ದ. ಆದರೂ ರಾಜಮನೆತನಕ್ಕೆ ಸೇರಿದ್ದ ಈ ವೀಕ್ಷಕ ವಿಜ್ಞಾನಿ ಬಡ ಸಿದ್ಧಾಂತಿಯನ್ನು ಒಳ್ಳೆಯ ರೀತಿಯಲ್ಲಿ ನೋಡಿಕೊಳ್ಳದೆ ಕೆಪ್ಲರನಿಗೆ ಕಿರಿಕಿರಿಯಾಗುತ್ತಿತ್ತು. ಹಾಗೂ ಟೈಕೊ ನಿಧನನಾದ ನಂತರ ಕೆಪ್ಲರನಿಗೆ ಬೇಕಾದ ಮಾಹಿತಿ ಸಿಗಲು ೪ ವರ್ಷಗಳಾಯಿತು. ಆದರೂ ಕೋಪರ್ನಿಕಸ್‌ನ ಮಾದರಿಯಿಂದ ಮಾಡಿದ ಲೆಕ್ಕಾಚಾರಕ್ಕೂ ಟೈಕೊವಿನ ವೀಕ್ಷಣಾ ಕ್ರಮಸೂಚಿಗೂ ವ್ಯತ್ಯಾಸ ಬರುತ್ತಿದ್ದಿತ್ತು; ಅದು ಸುಮಾರು ೩೦ ಸೆಕೆಂಡುಗಳ ವ್ಯತ್ಯಾಸ ಮಾತ್ರವಾಗಿದ್ದರೂ ಕೆಪ್ಲರನನ್ನು ಬಹಳ ಸತಾಯಿಸಿತು ! ಕಡೆಗೂ ಒಂದು ದಿನ ಜ್ಞಾನೋದಯವಾಗಿ ಕೆಪ್ಲರ್ ಬರೆದುಕೊಂಡಿದ್ದ 'ನನ್ನ ಮೊದಲ ತಪ್ಪು ಹುಟ್ಟಿದ್ದು ವೃತ್ತಾಕಾರದ ಕಕ್ಷೆಗಳಲ್ಲಿನ ವಿಪರೀತ ನಂಬಿಕೆಯಿಂದ!' ಪ್ಲೇಟೋವಿನ ಕಾಲದಿಂದಲೂ ವೃತ್ತಗಳು ಸುಂದರ ಎಂಬ ನಂಬಿಕೆ ಬಂದಿದ್ದು ಕೋಪರ್ನಿಕಸ್ ಕೂಡ ಅದನ್ನು ಪ್ರಶ್ನಿಸಲಿಲ್ಲ. ಆದರೆ ಅದನ್ನು ಈಗ ಕೆಪ್ಲರ್ ಬದಲಾಯಿಸಿ ಕಕ್ಷೆಗಳು ವೃತ್ತಾಕಾರವಲ್ಲ, ದೀರ್ಘವೃತ್ತಾಕಾರ ಎಂದು ಸೌರಮಂಡಲದ ಗ್ರಹಗಳ ಚಲನೆಗೆ ತನ್ನ ಮೊದಲ ನಿಯಮವನ್ನು ೧೬೦೫ರಲ್ಲಿ ಮಂಡಿಸಿದ. ಈ ವಿಷಯದ ಬಗ್ಗೆಯೇ ಹೆಚ್ಚು ಕೆಲಸಮಾಡಿ ೧೬೦೯ರಲ್ಲಿ ತನ್ನ ಬಹುಮುಖ್ಯ ಪುಸ್ತಕ 'ಹೊಸ ಖಗೋಳ ವಿಜ್ಞಾನ'ವನ್ನು ಹೊರತಂದನು. ಅದರಲ್ಲಿ ಕೆಪ್ಲರ್ ತನ್ನ ಖ್ಯಾತ ಮೂರು ನಿಯಮಗಳನ್ನು ಸೇರಿಸಿದ್ದನು. ಈ ವಿಷಯವಲ್ಲದೆ ಕೆಪ್ಲರ್ ಬೆಳಕು, ದೂರದರ್ಶಕ, ಹವಾಮಾನ ಇತ್ಯಾದಿ ವಿಷಯಗಳಲ್ಲಿ ಆಸಕ್ತಿ ವಹಿಸಿದ್ದನು. ಭೂಮಿಯಲ್ಲಿ ಅಲೆಗಳ ಕಾರಣ ಚಂದ್ರನ ಆಕರ್ಷಣೆ ಎಂದು ಕೆಪ್ಲರ್ ಸರಿಯಾಗಿ ಗುರುತಿಸಿದ್ದನು. ಇವೆಲ್ಲಾ ಅಲ್ಲದೆ ಒಬ್ಬ ಹುಡುಗನ ಚಂದ್ರಯಾನದ ಬಗ್ಗೆ ಪ್ರಪಂಚದ ಪ್ರಥಮ (ಕಾರ್ಲ್ ಸಾಗನ್ ಮತ್ತು ಐಸಾಕ ಅಸಿಮೋವ್‌ರ ಪ್ರಕಾರ) ವೈಜ್ಞಾನಿಕ ಕಲ್ಪನಾ ಕಾದಂಬರಿ 'ಕನಸು'ಯನ್ನೂ ರಚಿಸಿದ್ದನು !

ಸೌರಮಂಡಲದ ಬಗ್ಗೆ ಕೆಪ್ಲರನ ಮತ್ತೊಂದು ಆಲೋಚನೆ ಬಹುಮುಖ್ಯ. ಹಿಂದಿನ ವಿಜ್ಞಾನಿಗಳೆಲ್ಲ ಗ್ರಹಗಳ ಚಲನೆಯ ಮಾದರಿಯ ಬಗ್ಗೆ ಚಿಂತಿಸಿದ್ದರೇ ವಿನಾ ಅದಕ್ಕೆ ಕಾರಣವೇನು ಎಂದು ವಿಚಾರಿಸಿರಲಿಲ್ಲ. ಗ್ರಹಗಳು ಗೋಳಗಳ ಮೇಲೆ ಹೇಗೆ ಚಲಿಸುತ್ತವೆ ಎಂದು ಕೆಪ್ಲರ್ ಯೋಚಿಸುತ್ತಾ "ಭೌತ ವಿಜ್ಞಾನ ಮತ್ತು ಖಗೋಳ ವಿಜ್ಞಾನಗಳಿಗೆ ಸಂಬಂಧವಿರಲೇ ಬೇಕು" ಎಂದು ಬರೆದಿದ್ದನು. ಹೀಗೆಯೇ ಗ್ರಹಗಳ ಚಲನೆಗೆ ಸೂರ್ಯನಿಂದ ಏನೋ ಪ್ರಭಾವವಿದೆ ಮತ್ತು ಅದು ಕಾಂತಶಕ್ತಿ ಇರಬೇಕೆಂಬ ನಿರ್ಧಾರಕ್ಕೆ ಬಂದನು. ( ಕ್ರಿ. ಶ. ೧೬೦೦ರಲ್ಲಿ ಇಂಗ್ಲೆಂಡಿನಲ್ಲಿ ಗಿಲ್ಬರ್ಟ್ ಇದರ ಬಗ್ಗೆ ಮೊದಲ ಪ್ರಯೋಗಗಳನ್ನು ನಡೆಸಿದ್ದನು). ಈ ತಪ್ಪು ಚಿಂತನೆ ಇರದಿದ್ದಲ್ಲಿ ಕೆಲವೇ ದಶಕಗಳ ನಂತರ ನ್ಯೂಟನ್‌ನಿಂದ ಪ್ರತಿಪಾದಿಸಲ್ಪಟ್ಟ ಗುರುತ್ವದ ಸಿದ್ಧಾಂತ ಕೆಪ್ಲರನಿಂದಲೇ ಹುಟ್ಟಬಹುದಿತ್ತೋ ಏನೊ ! ಕೆಪ್ಲರನ ಜೀವನ ಚರಿತ್ರೆಯನ್ನು ಬರೆದ ಆರ್ಥರ್ ಕಾಯಿಸ್ಲರ್ ಮತ್ತು ಹಲವಾರು ವಿದ್ವಾಂಸರ ಪ್ರಕಾರ ಭೌತವಿಜ್ಞಾನದ ಚರಿತ್ರೆಯಲ್ಲಿ ಯೊಹಾನಸ್ ಕೆಪ್ಲರನಿಗೆ ಮತ್ತೂ ಹೆಚ್ಚು ಮನ್ನಣೆ ದೊರಕಬೇಕಾಗಿತ್ತು !

ಆ ಕಾಲದ ಮತ್ತೊಬ್ಬ ಮಹಾವಿಜ್ಞಾನಿ ಗೆಲೆಲಿಯೊ ಈ ವಿಷಯದಲ್ಲಿ ಹೆಚ್ಚು ಕೊಡುಗೆಗಳನ್ನು ನೀಡಲಿಲ್ಲ. ಗೆಲೆಲಿಯೊ ಬಹಳ ಮುಖ್ಯವಾದ ಗುರುತ್ವದ ಪ್ರಯೋಗಗಳನ್ನು ನಡೆಸಿದರೂ ಅವನಿಗೆ ಗುರುತ್ವಕ್ಕೂ ಸೌರಮಂಡಲದ ಚಲನೆಗಳಿಗೂ ಸಂಬಂಧ ಕಾಣಲಿಲ್ಲ. ಅವನ ಬಹಳ ಸ್ವಾರಸ್ಯಕರ ದೂರದರ್ಶಕದ ವೀಕ್ಷಣೆಗಳು ಅವನು ಪ್ರಚಾರಿಸುತ್ತಿದ್ದ ಕೋಪರ್ನಿಕಸ್ ಮಾದರಿಗೆ ನೇರವಾಗಿ ಸಾಕ್ಷಿಯಾಗಲಿಲ್ಲ ; ಸಾಕ್ಷಿ ಎಂದು ಅವನೇ ಕಂಡುಹಿಡಿದ ಶುಕ್ರಗ್ರಹದ ಕಲೆಗಳನ್ನು ಟೈಕೊ ಬ್ರಾಹೆಯ ಮಾದರಿಯಿಂದಲೂ ವಿವರಿಸಬಹುದಿತ್ತು.

ಅದಲ್ಲದೆ ಕೆಪ್ಲರ್ ಪ್ರತಿಪಾದಿಸಿದ ದೀರ್ಘವೃತ್ತಗಳ ಕಕ್ಷೆಗಳ ಬಗ್ಗೆ ಯಾವ ಉತ್ಸಾಹವನ್ನು ತೋರಿಸಲಿಲ್ಲ; ಅಲೆಗಳ ಬಗ್ಗೆಯೂ ಗೆಲೆಲಿಯೊ ವಿವರಣೆ ಸರಿಯಿರಲಿಲ್ಲ. ಆದರೆ ಸೂರ್ಯಕೇಂದ್ರೀಯ ಸಿದ್ಧಾಂತವನ್ನು ಪ್ರಚಾರಮಾಡಿ ಅವನು ಚರ್ಚಿನ ಕೋಪಕ್ಕೆ ತುತ್ತಾಗಿದ್ದುದಂತೂ ವೈಚಾರಿಕ ಚರಿತ್ರೆಯ ಕರಾಳ ಸಮಯ ! (ಹೆಚ್ಚು ವಿವರಗಳಿಗೆ ಲೇಖಕರ 'ಭೂಮಿಯಿಂದ ಬಾನಿನತ್ತ' (ನವಕರ್ನಾಟಕ) ಪುಸ್ತಕವನ್ನು ನೋಡಬಹುದು) (ಈ ಲೇಖಕರು ಈ ವರ್ಷ ಕುಟುಂಬದ ಜತೆ ನಡೆಸಿದ ಪೂರ್ವ ಯೂರೋಪಿನ ಪ್ರವಾಸದಲ್ಲಿ ಈ ಮಹಾವಿಜ್ಞಾನಿಗಳ ಪುತ್ಥಳಿಗಳನ್ನು ಮತ್ತು ಅವರಿಗೆ ಸಂಬಂಧಪಟ್ಟ ಜಾಗಗಳನ್ನು ನೋಡಿದಾಗ ನವೋದಯದ ಆ ಎರಡು ಶತಮಾನಗಳು ಈ ಹದಿನೈದು ದಿನಗಳಿಗೆ ಕುಗ್ಗಿ ಕಣ್ಣು ಮುಂದೆಯೇ ಸೂರ್ಯಕೇಂದ್ರೀಯ ಸಿದ್ಧಾಂತದ ವಿಕಸನವಾದಂತಿತ್ತು).

**ಡಾ॥ ಪಾಲಹಳ್ಳಿ ವಿಶ್ವನಾಥ್**
ನಂ.೦೯, ಕಾಳಪ್ಪ ಬ್ಲಾಕ್, ಬಸವನಗುಡಿ, ಬೆಂಗಳೂರು – ೫೬೦ ೦೦೪









# ಮಿತಿಮೀರುವ ಕಲಾವಿದ ಕಿರಣ ಶೇರಖಾನೆ

ಧಾರವಾಡದ ಸೃಜನ ಫೈನ್ ಆರ್ಟ್ಸ್ ಕಾಲೇಜಿನಲ್ಲಿ ಬಿ.ಎಫ್.ಎ. ಪದವಿ ಪಡೆದು ಪ್ರಸ್ತುತ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎಫ್.ಎ. ವ್ಯಾಸಂಗ ಮಾಡುತ್ತಿರುವ ಕಲಾವಿದ ಕಿರಣ ಶೇರಖಾನೆ, ಬಾಲ್ಯದಿಂದಲೇ ಉಂಟಾದ ದೈಹಿಕ ಮಿತಿಯನ್ನು ಮೀರಿ ಬೆಳೆದವರು. ಚಿತ್ರಕಲೆಗೆ ಆಕರ್ಷಿತರಾಗಿ ಔಪಚಾರಿಕ ಶಿಕ್ಷಣ ಪಡೆದು ಜಲವರ್ಣ ಚಿತ್ರಕಲೆಯಲ್ಲಿ ಪರಿಣತಿ ಪಡೆದರು. ಹುಬ್ಬಳ್ಳಿ – ಧಾರವಾಡ ಅಲ್ಲದೆ ಬೆಂಗಳೂರು, ದೆಹಲಿ, ಪುಣೆ, ಮುಂಬೈ ಮುಂತಾದ ಪ್ರಮುಖ ಕಲಾಕೇಂದ್ರಗಳಲ್ಲಿ ಕಲಾ ಪ್ರದರ್ಶನ ನಡೆಸಿದ್ದಾರೆ. ತಮ್ಮಂತೆ ಪೋಲಿಯೋ ಪೀಡಿತಳಾದ ತಂಗಿಯೂ ಇರುವ ಇವರು ತಮ್ಮ ಕಲಾಕೃತಿಗಳ ಮಾರಾಟದಿಂದಲೇ ಜೀವನ ನಿರ್ವಹಣೆ ಮಾಡುತ್ತಾರೆ. ಸ್ವಾಭಿಮಾನಿಯಾದ, ತನ್ನ ದೈಹಿಕ ಮಿತಿಗಳನ್ನು ಮೀರಿ ಕಲಾಕೃತಿಗಳ ನಿರ್ಮಾಣದಲ್ಲಿ ಕ್ರಿಯಾಶೀಲರಾಗಿರುವ ಇವರಿಗೆ ಕಳೆದ ವಾರ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ 'ಚಿತ್ತಾರ ಚೇತನ' ಪ್ರಶಸ್ತಿ ಕೊಟ್ಟು ಗೌರವಿಸಲಾಯಿತು.

**– ಮಾರುತಿ ಬಾಣದ, ಧಾರವಾಡ**





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

